

ದುರಿತ ಶತ್ರುಗಳ ನಿರ್ಘಾಟಿಸಿ ಕೈವಲ್ಯ । ಕರಸಾಗಿ ಕಾರಕಳದೊಳು ॥
ಸಿರಿವೆತ್ತು ಮೈದೋರುವ ಗುಮ್ಮಟಸ್ವಾಮಿ ! । ಶರಣಾಗೆನಗೆ ಸರ್ವೇಶ ॥

ಸಂಧಿ ೧೧, ಪದ ೧.

# INTRODUCTION.

The early Kannada Literature flourished mostly at the hands of the Jaina writers. The three Gems of Kannada Literature (RATNATRAYA)—Ādi-Pampa, Ponna and Ranna, and the famous Grammarian Keśirāja were all Jains. They were equally great scholars in Sanskrit and in all their writings they adopted the Sanskrit metre and their works were of Campū type with an admixture of prose and poetry. This may be called the epic age in Kannada Literature.

The subsequent writers changed the epic age to one of Lyrics and Folk songs, especially in the later period of 12th and 13th centuries. The famous "Hāḍugabba" of Ratnākaravarṇi won the whole-hearted appreciation of all classes of Kannada readers. The ancient stock in our manuscripts Libraries still contains a number of such Hāḍugabbas in Sāṅgatya metre. Most of them go back even to the early periods of Halagannada Literature.

The present work known as KĀRKALA GŌMAṬĒŚVARA CARITE is one of the masterpieces of such ancient ballads. It is written by Candrama who is stated to have lived about 1646 A.D. as per Karnāṭaka Kavi Carite. It is well known that statues of Gōmaṭa are found in three places in Karnaṭaka, namely, Śravaṇa Belagola, Kārkala and Vēṇūru.

The statue at Kārkala is supposed to be the second in size among these three statues.

The story is about the wrestling contest between two brothers—Bāhubali and Bharata. Bāhubali was successful in the contest but he abdicated the throne in favour of his brother as he felt that the world was full of miseries and troubles, and became Gōmaṭēśvara (Jaina Sanyāsi). The work is rich in idea and very simple in wordings. Each stanza has its own merit and Jaina principles are occasionally used in the best context. All the important descriptions of poetical world are found in this work.

It is hoped that this popular work will be widely read and appreciated in the whole of Karnāṭaka.

My thanks are due to Sri V. Hanumanthachar, M.A., L.T., Vidvan, Librarian, and Sri P. Subraya Bhat, Vidvan (former Pandit), and Sri K Krishna Sharma, Vidvan, Pandit of this Library, for preparing the press copy and correcting the proofs. The block of Gōmaṭēśvara was lent by Sri R. Parthasarathi, Director of Information and Publicity, Government of Madras, to whom my thanks are due. I have to thank the Government Press for completing the printing in an efficient manner within a short period.

T. CHANDRASEKHARAN,
*Curator.*

GOVERNMENT ORIENTAL MANUSCRIPTS
LIBRARY, MADRAS.
*Dated 4 th March 1953,*

# ಮುನ್ನುಡಿ-

ಪ್ರಾಚೀನ ಕನ್ನಡ ಕವಿಗಳಲ್ಲಿ ಹಲವರು ಜೈನರಾಗಿದ್ದರು, ರತ್ನತ್ರಯರೆನಿಸಿದ ಪಂಪ, ಪೊನ್ನ, ರನ್ನರು ಜೈನರು. ಕನ್ನಡದ ಪ್ರಖ್ಯಾತ ವ್ಯಾಕರಣಕಾರನಾದ ಕೇಶಿರಾಜನೂ ಜೈನನೇ ಆಗಿದ್ದನು. "ಏಕಾಕ್ರಿಯಾ ದ್ವ್ಯರ್ಥಕರೀಬಭೂವ" ಎಂಬ ಮಾತಿನಂತೆ ಮತ ಪ್ರಚಾರವೂ ಸಾಹಿತ್ಯ ಸೇವೆಯೂ ಒಮ್ಮೆಗೇ ಈ ಉದ್ದಾಮ ಕವಿಗಳಿಂದ ನೆರವೇರಿದವು. ಇವರಲ್ಲಿ ಹಲವರು ದಂಡನಾಯಕರೂ, ರಾಜಾಶ್ರಿತರೂ ಪ್ರಚಂಡ ಯೋಧರೂ ಆಗಿದ್ದರು ಈ ಕಾರಣದಿಂದ ಸಾಹಿತ್ಯ ಸೇವೆಗೆ ಆ ಕಾಲದಲ್ಲಿ ಸಾಕಷ್ಟು ಬೆಂಬಲವಿದ್ದಿತು. ಜೈನ ರಾಜರನೇಕರು ತಾವೇ ಸ್ವತಃ ಕವಿಗಳಾಗಿದ್ದರು.

ಬರುಬರುತ್ತಾ ಆಬಾಲವೃದ್ಧರಿಗೂ ಸುಲಭಗ್ರಾಹ್ಯವಾದ ಸಾಂಗತ್ಯ ಪದ್ಯಗಳಲ್ಲಿ ಬರೆಯಲ್ಪಟ್ಟ ಹಾಡುಗಬ್ಬಗಳೂ ಕನ್ನಡದಲ್ಲಿ ಪ್ರಚಾರಕ್ಕೆ ಬಂದು ಸಾಹಿತ್ಯವು ಹಮ್ಮಕ್ಕಳ ಮನಸ್ಸಿಗೆ ಮೆಚ್ಚುಗೆಗೂ, ಅಭ್ಯಾಸ ಗೋಷ್ಠಿಗೂ ತಕ್ಕುದಾಯಿತು. ಚಿಕದೇವರಾಯನ ಓಲಗದಲ್ಲಿ ಉಳಿಗದವಳಾಗಿದ್ದ ಸಂಚಿಯ ಹೊನ್ನಮ್ಮನು ಬರೆದ "ಹದಿಬದೆಯ ಧರ್ಮ"ವೇ ಇದಕ್ಕೆ ತಕ್ಕ ನಿದರ್ಶನವಾಗಿದೆ. ಈ ಗ್ರಂಥರತ್ನವು ಪಂಡಿತ ಪಾಮರರಲ್ಲೂ ಎಷ್ಟರ ಮಟ್ಟಿನ ಪರಿಣಾಮವನ್ನುಂಟುಮಾಡಿಲ್ಲ! ಆದರೆ "ಹೇರೂರ ಹೆಣ್ಣಿನ ಸಾಂಗತ್ಯ" ಮುಂತಾದ ಉತ್ಕೃಷ್ಟ ಹಾಡುಗಬ್ಬಗಳನ್ನೂ ತೆರೆಯ ಮರೆಯಲೇ ಉಳಿದಿವೆ.

ಈ ರೀತಿಯ ಹಾಡುಗಬ್ಬಗಳಲ್ಲಿ ಈವರೆಗೆ ಉಪಲಬ್ಧನಾದಂತೆ ಶಿಶುಮಾಯಣ ಕವಿಯ ತ್ರಿಪುರ ದಹನ ಸಾಂಗತ್ಯವೇ ಮೊದಲನೆಯದು. ಈತನ ಕಾಲ ಸುಮಾರು ಕ್ರಿ. ಶ. 1232 ಎಂಬುದಾಗಿ ಕರ್ಣಾಟಕ ಕವಿಚರಿತೆಯಲ್ಲಿ ಹೇಳಿದೆ. ಅಂತೂ 13 ನೇ ಶತಮಾನದಿಂದ ಪ್ರಚಾರಕ್ಕೆ ಬಂದ ಈ ಸಾಂಗತ್ಯ ಗ್ರಂಥಗಳು ಹಲವಾರು ಜೈನ, ಶೈವ ಹಾಗೂ ವೈಷ್ಣವ ಕವಿಗಳಿಂದಲೂ ಬರೆಯಲ್ಪಟ್ಟಿವೆ. ಇವುಗಳಲ್ಲಿ ಪ್ರಖ್ಯಾತವಾದುದು ರತ್ನಾಕರ ವರ್ಣಿಯ ಭರತೇಶ ಚರಿತೆಯಾಗಿದೆ. ಅಂದಿನ ಕವಿಗಳು ಇನ್ನೂ ಕೆಲವು ಇಂತಹ ಉತ್ಕೃಷ್ಟ ಗ್ರಂಥಗಳನ್ನು ಬರೆದಿಟ್ಟುದು ಇನ್ನೂ ತಾಳೋಲೆ ಪ್ರತಿಗಳಲ್ಲಿವೆ. ಅಂತಹ ಗ್ರಂಥರತ್ನಗಳಲ್ಲಿ ಒಂದಾದ ಸುಮಾರು ಕ್ರಿ. ಶ. 1646 ರಲ್ಲಿ ಜೀವಿಸುತ್ತಿದ್ದ ಚಂದ್ರಮನೆಂಬ ಜೈನ ಕವಿಯಿಂದ ವಿರಚಿತವಾದ ದಕ್ಷಿಣ ಕನ್ನಡದ ಕಾರಕಳ (ಕಾರ್ಕಳ)ದ ಗೋಮಟೇಶ್ವರನ ಚರಿತೆಯನ್ನು ಪ್ರಕೃತ ವಾಚಕರ ಮುಂದಿರಿಸಿರುವೆವು.

ಇದು ಮಾನ್ಯ ಮದ್ರಾಸು ಸರಕಾರದ ಪ್ರಾಚ್ಯಹಸ್ತ ಪ್ರತಿ ಭಂಡಾರದ ಕನ್ನಡ D. No. 330 ನೇ ತಾಳೋಲೆ ಪ್ರತಿಯ ಆಧಾರದಿಂದ ಪ್ರಕಟಿತವಾದುದು. ತಾಳೆ ಪ್ರತಿ ಬರೆಹಗಾರನ ಕೈತಪ್ಪುಗಳನ್ನು ಸಾಧ್ಯವಾದಷ್ಟು ತಿದ್ದಿ ಅಚ್ಚಿನ ಪ್ರತಿಯನ್ನು ತಯಾರಿಸಲಾಗಿದೆ. ಇದರಲ್ಲಿರುವ ಗುಣ ದೋಷಗಳನ್ನು ವಿಮರ್ಶಿಸುವಲ್ಲಿ ಕವಿಯ ಮಾತಿನಿಂದಲೇ ಹೇಳುವುದಾದರೆ—

ಹಾಲು ನೀರೊಂದಾಗಿ ಕೂಡೆ ನೀರನು ಬಿಟ್ಟು । ಹಾಲಸೇವಿಪ ಹಂಸೆಯಂತೆ ॥
ಲೀಲೆ ಕೈಯಿಗೆ ಗುಣವನು ಕೇಳ್ವ ಸಜ್ಜನ । ಜಾಲಕೆ ನಾನೆರಗುವೆನು ॥

ಎಂಬುದಾಗಿ ಹಂಸಕ್ಷೀರನ್ಯಾಯದಿಂದ ಸಹೃದಯರು ಸ್ವೀಕರಿಸಿ ಕವಿ ಕಾರ್ಯಕ್ಕೆ ನೆರವಾಗಬೇಕೆಂದು ಪೀಠಿಕೆಯಲ್ಲೇ ಪ್ರಾರ್ಥಿಸುವೆವು.

ಕವಿಯ ಕುರಿತಾಗಿ ಕರ್ಣಾಟಕ ಕವಿ ಚರಿತೆಕಾರರ ಅಭಿಪ್ರಾಯದಂತೆಯೂ ಗ್ರಂಥಸ್ಥಾಧಾರದಿಂದಲೂ ಈ ರೀತಿ ತೋರಿಬರುವುದು. ಈತನು ಜೈನ ಕವಿ; ಇವನ ವಿದ್ಯಾಗುರು ಶ್ರುತಸಾಗರ ಮುನಿ; ವ್ರತಗುರು ಮಹೇಂದ್ರ ಕೀರ್ತಿ. ಕವಿಯು ಪೀಠಿಕಾ ಪ್ರಕರಣದಲ್ಲಿ ಅರಿರಾಯರ ಗಂಡಭಾವಣಿಯೆಂದೆಂಬ ಬಿರುದಾಳ್ವ ಭೈರವರಾಯನ ಕರುಣಾ ಸಹಾಯದಿಂದ ಶ್ರೀ ಗುರು ಲಲಿತ ಕೀರ್ತಿಯ ಅಪ್ಪಣೆಯಂತೆ ಈ ಕಾವ್ಯವನ್ನು ಬರೆದುದಾಗಿ ಹೇಳಿರುವುದರಿಂದ ಈತನು ತೌಳವ ಪ್ರಾಂತದವನೆಂದು ಮಾತ್ರವಲ್ಲದೆ ಆ ರಾಜನ ಆಶ್ರಯ ಪಡೆದವನೆಂದೂ ತಿಳಿಯುವುದು. ಅಲ್ಲದೆ ಕೊನೆಯ ಸಂಧಿಯಲ್ಲಿ ಇಮ್ಮಡಿ ಭೈರವರಾಯನು ಕ್ರಿ. ಶ. ಸುಮಾರು 1646 ರಲ್ಲಿ ಪ್ರಖ್ಯಾತನಾಗಿದ್ದು ತನ್ನ ತಂದೆಗೆ ಕೀರ್ತಿ ಬರಲೆಂದು ಮಹೇಂದ್ರ ಕೀರ್ತ್ಯಾಚಾರ್ಯನ ಉಪದೇಶದಂತೆ ಗೋಮಟನಿಗೆ ಪುನಃ ಪ್ರತಿಷ್ಠೆ, ಕಲಶಗಳನ್ನೂ ಮಾಡಿಸಿದನೆಂದು ವರ್ಣಿಸಿದ್ದಾನೆ. ಈ ಕಾರಣದಿಂದ ಕವಿಯು ಆ ಕಾಲದವನೆಂದರಿಯಬಹುದು.

ಕವಿಯು ಮಂಗಳಾಚರಣೆಯಲ್ಲಿ ನೇಮಿಜಿನೇಶ ಸ್ತುತಿಯನ್ನು ಈ ರೀತಿ ಮಾಡಿದ್ದಾನೆ :—

ಸುರನರಪತಿನುತಚರಣ ಸರೋಜ ಭಾ । ಸುರತರ ಕೇವಲ ಬೋಧ ॥
ಪರಮಾರ್ಹಂತ ಲಕ್ಷ್ಮೀಪತಿ ನಮಗೆ ನೀ । ಶರಣಾಗು ನೇಮಿಜಿನೇಶ ॥

ಅಲ್ಲದೆ ತನ್ನ ಪರಿಚಯವನ್ನು ಹೇಳುತ್ತಾ :—ಜಿನಮತವಾರ್ಧಿವರ್ಧನ ಚಂದ್ರಮ ಭವ್ಯ ಜನಹೃತ್ಕುಮುದಕೆ ಚಂದ್ರಮನು ॥ ಎಂಬುದಾಗಿಯೂ ಸ್ಪಷ್ಟಪಡಿಸಿದುದರಿಂದ ಜೈನನೆಂಬುದು ಸ್ಪಷ್ಟವಾಗಿದೆ. ಮಂಗಳಾಚರಣೆಯಲ್ಲಿ ಕ್ರಮೇಣ ಬಾಹುಬಲಿ, ಚಂದ್ರನಾಥಾದಿಗಳನ್ನೂ, ಭೈರವರಾಯರ ಕುಲದೇವತೆಯಾದ ಪೊಂಬುಚ್ಚ ಪದ್ಮಾಂಬೆಯನ್ನೂ, ತನ್ನ ಗುರುವರ್ಯರನ್ನೂ ನುತಿಸಿದ್ದಾನೆ. ಪ್ರತಿ ಸಂಧಿಯ ಆದಿ ಪದ್ಯವು ಗೋಮಟ ಸ್ತುತಿಯಾಗಿಯೂ, ಕೊನೆಯ ಪದ್ಯವು "ಇದು ಶ್ರುತಸಾಗರ ಮುನಿರಾಯನಾಶಿಷ್ಯ । ಚದುರ ಚಂದ್ರಮ ವಿರಚಿಸಿದ ॥ ಮದನಾರಿ ಗುಮ್ಮಟಜಿನ್ಯಮಿಯ ಚರಿತೆಯೊಳ್" ಎಂಬುದಾಗಿ ಒಂದೇ ರೀತಿಯಲ್ಲಿ ಬರೆದು ಆಯಾ ಸಂಧಿಗಳ ಗಣನೆಗಳನ್ನು 17 ಸಂಧಿಗಳಲ್ಲೂ ಮಾಡಿದ್ದಾನೆ.

ಕವಿಯೇ ಉಲ್ಲೇಖಿಸಿದಂತೆ "ಕಬ್ಬಿನೊಳಿದ್ದ ರಸವ ಬಿಟ್ಟು ಸೋಗೆಯ । ಕೊಬ್ಬಿದ ಕಾರಿ ಸೇವಿಪಂತೆ ॥ ಕಬ್ಬದೊಳಿದ್ದ ಗುಣವ ಬಿಟ್ಟು ಮಾರ್ಜನ । ರಾಬ್ಬದೋಷವನರಸುವರು" ದೋಷಗಳನ್ನು ಎತ್ತಿತೋರಿಸುವುದು ಸೌಜನ್ಯತೆಯಲ್ಲವಷ್ಟೆ? ಕಾವ್ಯದಲ್ಲಿರಬಹುದಾದ ಗುಣವನ್ನೂ ಸರಸ ಭಾಗವನ್ನೂ ಸಹೃದಯರು ತಾವಾಗಿಯೇ ತಿಳಿದುಕೊಳ್ಳಬಹುದಾದರೂ ಸಂಪಾದಕನ ಕರ್ತವ್ಯದಂತೆ ಅಲ್ಲಲ್ಲಿ ಎತ್ತಿತೋರಿಸುವುದು ಅಪ್ರಸ್ತುತವಾಗದೆಂದು ಕೆಲವೊಂದಂಶವನ್ನಾದರೂ ತೋರಿಸಲೇಬೇಕಾಗಿದೆ

ಕವಿಯು ಆಗಮ, ಶಬ್ದ ತರ್ಕಾದಿ ಶಾಸ್ತ್ರಗಳನ್ನೂ ಸಂಸ್ಕೃತ ಸಾಹಿತ್ಯವನ್ನೂ ಚೆನ್ನಾಗಿ ಓದಿರಬಹುದೆಂಬುದಕ್ಕೆ ಇದೊಂದು ನಿದರ್ಶನ. ಭರ್ತೃಹರಿಯ "ಪ್ರಥಮವಯಸಿಪೀತಂತೋಯಮಲ್ಪಂದಧಾನಃ" ಎಂಬ ಶ್ಲೋಕದ ಭಾವನೆಯನ್ನೊಳಗೊಂಡು ಕವಿಯು "ತಲೆಯೊಳಮೃತ ಕುಂಭಗಳಪೊತ್ತು" ಮುಂತಾಗಿ ತೆಂಗಿನ ಮರಗಳನ್ನು ಸರಸವಾಗಿ ಬಣ್ಣಿಸಿದ್ದಾನೆ. ಕನ್ನಡದ ಪೂರ್ವ ಕವಿಗಳ ಭಾವವನ್ನು ತನ್ನ ಪ್ರತಿಭಾ ಬಲದಿಂದ ನೂತನ ರೀತಿಯಲ್ಲಿ ಬಣ್ಣಿಸುವುದರಲ್ಲೂ ಪಳಗಿದ ಕೈ ಕವಿಯದೆಂಬುದಕ್ಕೆ ಇದೊಂದು ನಿದರ್ಶನ.

"ಈತಿಬಾಧೆಗಳಿಲ್ಲ ದುರ್ಭಿಕ್ಷಗಳಿಲ್ಲ" ಎಂಬ ಹಾಡಿನಲ್ಲೂ "ಕರದಂಡವೆಂಬುದು ತಾವರೆಯೊಳಗಲ್ಲದೆ ಪ್ರಜೆಗಳೊಳಗಿಲ್ಲ" ಇತ್ಯಾದಿಯಾಗಿ ಬಣ್ಣಿಸಿದ ಹಾಡಿನಲ್ಲೂ ಕವಿ ಲಕ್ಷ್ಮೀಶನ ವರ್ಣನಾ ಶೈಲಿಯ ಹೋಲಿಕೆಯಿದೆ. ಅಲ್ಲದೆ ಜಲಕ್ರೀಡೆ, ವನವರ್ಣನೆ, ಆಸ್ಥಾನ, ಅಂತಃಪುರ ಸೂಳೆಗೇರಿ ಮುಂತಾದೆಡೆಗಳಲ್ಲಿ ಕವಿಯು ವರ್ಣಿಸಿದ ಮಟ್ಟವು ಭರತೇಶವೈಭವದ ಸಮತೂಕದಲ್ಲಿದೆ. ಅಲ್ಲದೆ ರಾಘವಾಂಕನ "ಕೋಣಗಳೆರಡುಂ ಹೋರೆ" ಎಂಬ ಪದ್ಯದ ಭಾವನೆಯು ಈ ಕಾವ್ಯದ 14 ನೇ ಸಂಧಿಯ 34 ನೇ ಪದ್ಯದಲ್ಲಿ ಪ್ರತಿಬಿಂಬಿಸುವಂತಿದೆ.

ವಸ್ತುಸ್ಥಿತಿಯನ್ನು ನ್ಯೂನಾತಿರೇಕಗಳಿಲ್ಲದಂತೆ ಬಣ್ಣಿಸುವುದು ಕವಿಯ ಪ್ರತಿಭೆಯ ವೈಶಿಷ್ಟ್ಯವೊಂದಾಗಿದೆ : "ದ್ವೀಪಸಾಗರಗಳ ಮಧ್ಯದೊಳಗೆ ಜಂಬೂ । ದ್ವೀಪ ವಿಹುದು ಸೊಬಗಾಂತರಿ ॥ ಕಾಪನಿಟ್ಟಬ್ದನೊ ಬಿದಿಯೆನೆ ಲವಣಾಬ್ಧಿ । ದ್ವೀಪವ ಬಳಸಿಕೊಂಡಿಹುದು ॥ ಮೊದಲೊಮ್ಮೆ ಸಾಗರ ಮಥನಕ್ಕೆ ಸುರರೆಲ್ಲ । ಇದನು ಕೊಂಡೊಯ್ದರೆಂದೆನುತ ॥ ಬಿದಿಪರಿಗಾಪಿಟ್ಟನೊ ಎನೆ ಗ್ರಹಗಣವದನುತ್ತಿ ಬಹವನುದಿನವು ।" ಇಲ್ಲಿ ಕವಿಯು ಬಣ್ಣಿಸಿದ ರೀತಿಯು ಎಷ್ಟು ಸ್ವಾಭಾವಿಕವೂ ಹೃದಯಂಗಮವೂ ಆಗಿದೆ! ಕವಿಯು ಕಾರ್ಕಳ, ಕಾರ್ಕಳ ಹಾಗೂ ಕಾರಕಳ ವೆಂಬ ದಕ್ಷಿಣ ಕನ್ನಡದ ಪಟ್ಟಣವನ್ನೂ ಅಲ್ಲಿನ ಶಿಲ್ಪಿ ಚೆನಿವಾರರನ್ನೂ ಸೊಗಸಾಗಿ ಬಣ್ಣಿಸಿದ್ದಾನೆ. ಅಲ್ಲದೆ ಅಲ್ಲಿರುವ ರಾಮಸಮುದ್ರವನ್ನು ಬಹಳ ಗಂಭೀರವಾಗಿ ವರ್ಣಿಸಿದುದು ತನ್ನ ಹುಟ್ಟೂರ ಪ್ರೀತಿಯನ್ನು ವ್ಯಕ್ತಪಡಿಸುವುದು.

ಗೋಮಟ ಪ್ರತಿಮೆಯ ನಿರ್ಮಾಣದ ಮೂಲಹೇತು, ಅದರ ಹಿರಿಮೆ, ಅದರ ತಯಾರಿಗೆ ತಗಲಿದ ವೆಚ್ಚಗಳೂ ಕವಿಯು ವರ್ಣಿಸಿದ 'ಒಂದೇ ಸಮಯದೊಳೆಪ್ಪತ್ತೈದುಸಾವಿರಮಂದಿಯಾಬಂಬವನೆತ್ತಿ' ಎಂಬ ಮಾತಿನಿಂದ ವ್ಯಕ್ತವಾಗದಿಲ್ಲ. ಜೈನ ಸಾಹಿತ್ಯಗಳಲ್ಲಿ ಹೆಚ್ಚಾಗಿ

ವರ್ಣಿತವಾಗುವ ಷೋಡಶ ಸ್ವಪ್ನಗಳನ್ನು ಆದಿ ತೀರ್ಥಂಕರನಾದ ವೃಷಭನಾಥನನ್ನು ಗರ್ಭದಲ್ಲಿ ಧರಿಸಿದ ಮರುದೇವಿಯು ಕಂಡಳೆಂದು ವರ್ಣಿಸಿದ್ದಾನೆ. ಅಲ್ಲದೆ ಪಂಚಕಲ್ಯಾಣ, ಗರ್ಭ ಕಲ್ಯಾಣ ಹಾಗೂ ಗರ್ಭದೋಹಳಗಳನ್ನೂ ಜೈನ ಸಂಪ್ರದಾಯದಂತೆ ಸಸಂದರ್ಭ ವರ್ಣಿಸಿದ್ದಾನೆ.

ಇನ್ನು ಕಾವ್ಯದಲ್ಲಿ ವರ್ಣಿತ ವಿಷಯಗಳನ್ನು ಮಹಾಕಾವ್ಯ ಲಕ್ಷಣ ಸಮನ್ವಯ ದೃಷ್ಟಿಯಿಂದ ನೋಡಿದರೆ ಹದಿನೆಂಟು ವಿಧಗಳಾದ ವರ್ಣನೆಗಳೂ ಕಂಡು ಬರುವುವು. ಕಾರ್ಕಳ, ಅಯೋಧ್ಯೆ ಪೌದನಪುರಗಳ ವರ್ಣನೆಗಳು ಸಂದರ್ಭಾನುಸಾರ ಬರುತ್ತವೆ. ಲವಣಾಬ್ಧಿಯನ್ನೂ ಮೇರು ಪರ್ವತವನ್ನೂ ಕವಿಯು ಪೀಠಿಕಾ ಪ್ರಕರಣದಲ್ಲೇ ವರ್ಣಿಸಿದ್ದಾನೆ. ಋತುವರ್ಣನೆಯೂ ಅಲ್ಲಲ್ಲಿ ಸಂಗತವಾಗಿದೆ. ಸೂರ್ಯ ಚಂದ್ರೋದಯಗಳನ್ನು ಸರಸವಾಗಿ ಬಣ್ಣಿಸಿದ್ದಾನೆ. ಉದ್ಯಾನ ವರ್ಣನೆಗಳು ಒಂದೆರಡೆಡೆ ಬಾರದಿಲ್ಲ. ಜಲಕ್ರೀಡೆಯು ಸವಿಸ್ತರವಾಗಿ ವರ್ಣಿತವಾಗಿದೆ. ಮಧುಪಾನ, ದ್ಯೂತ, ರತೋತ್ಸವಗಳೂ ಹದವೀರದೆ ಸೂಳೆಗೇರಿ ವರ್ಣನೆಯಲ್ಲಿ ಸೇರಿಕೊಂಡಿವೆ. ಪಾಂಡ್ಯರಾಯನು ಗೋಮಟ ಪ್ರತಿಷ್ಠಾವಸರದಲ್ಲಿ ಮಲೆಯಾಳದ ಮಂತ್ರವಾದಿಗಳನ್ನು ಕರೆಸಿ ಅವರಿಂದ ಬಂದ ವಿಘ್ನವನ್ನು ನೀಗಿಸಿಕೊಂಡನೆಂದು ವರ್ಣಿಸಲಾಗಿದೆ. ಆದಿ ತೀರ್ಥಂಕರನ ಮತ ಬೋಧಾಯಾತ್ರೆ ಭರತ ಚಕ್ರವರ್ತಿಯ ಜೈತ್ರ ಯಾತ್ರೆಗಳೂ ವರ್ಣಿತಗಳಾಗಿವೆ. ವಿಪ್ರಲಂಭವು ಹೆಚ್ಚಿನ ಮಟ್ಟಿಗೆ ಸೂಳೆಗೇರಿಯ ವರ್ಣನೆಯಲ್ಲೇ ಅಂತರ್ಲೀನವಾಗಿದೆ. ವಿವಾಹ ವರ್ಣನೆಗಳೂ ಸಂಕ್ಷೇಪವಾಗಿ ಬರುವುವು. ಕಥಾನಾಯಕನಾದ ಬಾಹುಬಲಿಯ ಅಭ್ಯುದಯವನ್ನು ಅಣ್ಣತಮ್ಮಂದಿರೊಳಗೆ ನಡೆದ ಮಲ್ಲಯುದ್ಧಾವಸರದಲ್ಲೂ, ಆತನ ಜೈನ ದೀಕ್ಷಾವಸರದಲ್ಲೂ ಕಾಣಬಹುದು. ಅಂತೂ ಮಹಾ ಕಾವ್ಯಲಕ್ಷಣಗಳಿಗೆ ಲಕ್ಷಿತವಾದ ಈ ಕಾವ್ಯವನ್ನು ಒಂದು ಮಹಾ ಕಾವ್ಯವೆಂದೂ ಹೇಳಬಹುದು.

ಕಥಾ ವಸ್ತುವನ್ನು ಕವಿಯು ಜೈನ ಮತಾನುಸಾರ 24 ತೀರ್ಥಂಕರರಲ್ಲಿ ಮೊದಲನೆಯವನಾದ ವೃಷಭನಾಥನ ಮಕ್ಕಳಾದ ಭರತ ಬಾಹುಬಲಿಯರ ಯುದ್ಧ, ರಾಜ್ಯಲೋಭದಿಂದ ಬಂದೊದಗುವ ಹೇಯಕೃತ್ಯಗಳ ಪರಿಣಾಮವಾಗಿ ಬಾಹುಬಲಿಯು ಅಣ್ಣನನ್ನು ಗೆದ್ದರೂ ಜಿನ ದೀಕ್ಷೆ ತಳೆದುದಾಗಿ ಆದಿಪಂಪನು ಆದಿಪುರಾಣದಲ್ಲಿ ವರ್ಣಿಸಿದ ಗೋಮಟ ಕಥೆಯನ್ನೇ ಹೆಚ್ಚಿನ ಪಾಲೂ ಆಶ್ರಯಿಸಿಕೊಂಡು ಬರೆದಂತಿದೆ.

## ಮುಖ್ಯ ವ್ಯಕ್ತಿ ಪರಿಚಯ.

ಈ ಕಾವ್ಯದಲ್ಲಿ ಬರುವ ಮುಖ್ಯ ವ್ಯಕ್ತಿಗಳಲ್ಲಿ ನಾಭಿರಾಜನು ಕೂಟಸ್ಥನಾಗಿ ಆದಿ ಜಿನನಂತಹ ಮಹಾವ್ಯಕ್ತಿಯನ್ನು ಪಡೆದ ಪುಣ್ಯಾತ್ಮ. ಈತನು ಶಿಶುಗಳ ನಾಭಿಯನ್ನು ಕತ್ತರಿಸುವ ಉಪಾಯವನ್ನು ಲೋಕಕ್ಕರುಹಿದ ಕಾರಣ ಈ ಹೆಸರು ಬಂತೆಂದು ಹೇಳಲಾಗಿದೆ. ಕುಲಧರರಲ್ಲಿ ಹದಿನಾಲ್ಕನೆಯವನಾಗಿ ಈತನೂ ಮರುದೇವಿಯೂ ಅವಳಿಜವಳಿಗಳಾಗಿ ಹುಟ್ಟಿದರಂತೆ ಜೈನ ಸಂಪ್ರದಾಯದಂತೆ ಇವರಿಗೆ ಅನ್ಯೋನ್ಯ ವಿವಾಹ, ಅಯೋಧ್ಯಾಪುರ ಸೃಷ್ಟಿ ಮುಂತಾದುವು ದೇವೇಂದ್ರನಿಂದ ನೆರವೇರಿಸಲ್ಪಟ್ಟಿತೆಂದೂ ಪ್ರತೀತಿಯಿದೆ. ಮರುದೇವಿಯು ಪ್ರಾರಂಭದಲ್ಲಿ ಮರುಗಿದರೂ ಪರಿಣಾಮದಲ್ಲಿ ಆದಿಜಿನನೆಂದು ಹೊಗಳಿಸಿಕೊಂಡ ವೃಷಭನನ್ನು ನೋಡಿ ಹಿಗ್ಗಿದಳು. ಈತನ ಚರಿತೆಯೂ ಈ ಕಾವ್ಯದಲ್ಲಿ ಸಂಕ್ಷೇಪವಾಗಿದೆ.

ಈತನ (ವೃಷಭನಾಥನ) ಮಕ್ಕಳಲ್ಲಿ ಭರತನು ಯಶಸ್ವತಿಯ ನೂರು ಮಂದಿಯಲ್ಲಿ ಮೊದಲಿಗನು. ತಂದೆಯ ಪಟ್ಟಕ್ಕೆ ನ್ಯಾಯವಾಗಿ ಉತ್ತರಾಧಿಕಾರವುಳ್ಳ ಹಿರೇ ಮಗನಿವನು. ಆದಿಜಿನನು ಪರಿಷ್ಕ್ರಮಣ ಕಲ್ಯಾಣಾವಸರದಲ್ಲಿ ಭರತನನ್ನು ಅಯೋಧ್ಯೆಯಲ್ಲಿ ಅಧಿರಾಜನನ್ನಾಗಿ ನೇಮಿಸಿದನು. ವೃಷಭ ಸ್ವಾಮಿಗೆ ಕೇವಲ ಜ್ಞಾನೋತ್ಪತ್ತಿ ಯಾದಾಗಲೇ ಭರತನ ಆಯುಧಾಗಾರದಲ್ಲಿ ಚಕ್ರೋತ್ಪತ್ತಿಯೂ ಅಂತಃಪುರದಲ್ಲಿ ಪುತ್ರೋತ್ಸವವೂ ಆಗುವುದು. ಕೂಡಲೇ ತುಲನಾತ್ಮಕ ದೃಷ್ಟಿಯಿಂದ ಆದಿಜಿನ ದರ್ಶನ, ಪೂಜೆಗೇ ಪ್ರಾಧಾನ್ಯತೆಯಿತ್ತು, ಅಲ್ಲಿಗೇ ಮೊದಲು ಹೋಗುವನು. ಇದರಿಂದ ಆತನ ಪಿತೃ ಭಕ್ತಿ ಮತ ಶ್ರದ್ಧೆಗಳು ಸಾಕಷ್ಟು ವ್ಯಕ್ತ

ವಾಗುವುವು. ಈತನು ಭರತ ಶಾಸ್ತ್ರವನ್ನೂ, ಅರ್ಥ ಶಾಸ್ತ್ರವನ್ನೂ ಕಲಿತವನು. ಆದರೆ ಇದು ಐಚ್ಛಿಕ ವಿಷಯವಾಗಿರಬಹುದು. ರಾಜನಿಗೆ ತಕ್ಕುದಾದ ಯುದ್ಧವಿದ್ಯೆಯನ್ನು ಬಲ್ಲವನೆಂಬುದು ತಮ್ಮನಾದ ಬಾಹುಬಲಿಯೊಡನೆ ಜಲಯುದ್ಧ, ದೃಷ್ಟಿಯುದ್ಧ, ಮಲ್ಲಯುದ್ಧಾದಿಗಳಿಗೆ ಬದ್ಧಕಂಕಣನಾಗುವುದರಿಂದಲೂ, ದಿಗ್ವಿಜಯ ಪ್ರಸಂಗದಿಂದಲೂ ತಿಳಿಯುವುದು. ಆದರೆ ಅದು ಸಮಗ್ರ ಸಿದ್ಧನಲ್ಲವೆಂಬುದಕ್ಕೆ ತಮ್ಮನೊಡನೆ ಸೋತುದೇ ನಿದರ್ಶನವಾಗಿದೆ. ಈತನ ರಾಜ್ಯಭಾರದ ಕುರಿತಾಗಿ ಹೆಚ್ಚೇನೂ ಹೇಳದಿದ್ದರೂ ಈತನು ಶತ್ರುರಾಜರನ್ನೆಲ್ಲಾ ಪಾದಾಕ್ರಾಂತರನ್ನಾಗಿ ಮಾಡಿ ಅಯೋಧ್ಯೆಯಲ್ಲಿ ಸಾರ್ವಭೌಮಪದವಿ ಪಡೆದನೆಂಬುದು ಸುವಿದಿತ. ಆದರೆ ತಮ್ಮಂದಿರನ್ನು ಸೌಮ್ಯಭಾವದಿಂದ ಸುಧಾರಿಸುವ ನೀತಿಯಲ್ಲಿ ನಿಪುಣನಲ್ಲವೆಂಬುದು ಈತನ ಸ್ವಾಭಾವಿಕ ಕೊರತೆಯೆಂದಾಗಿ ಕಾಣುವುದು. ಅಂತೂ ಪಶ್ಚಾತ್ತಾಪದಿಂದಲೂ, ಪರಿಣಾಮ ಕಾರ್ಯದಿಂದಲೂ ಭ್ರಾತೃವಾತ್ಸಲ್ಯವನ್ನು ತೋರಿಸಿದ್ದಾನೆ. ಗುಮ್ಮಟ ಸ್ವಾಮಿಯಾದ ತಮ್ಮನಿಗೆ ತಾನೇ ಹೋಗಿ ಎರಗುವನು. ಆತನ ಮೂರ್ತಿಯನ್ನು ಪೌದನಪುರದಲ್ಲಿ ಮೊತ್ತಮೊದಲು ಸ್ಥಾಪಿಸಿ ಮಹಾತ್ಮರನ್ನು ಅಮರರನ್ನಾಗಿ ಮಾಡುವ ಹಾದಿಯನ್ನು ಜಗತ್ತಿಗೇ ತೋರಿಸಿ ಕೊಟ್ಟಿದ್ದಾನೆ. ಇದನ್ನನುಕರಿಸಿಯೇ ಶ್ರವಣಬೆಳಗೊಳ, ಕಾರ್ಕಳ ಮತ್ತು ವೇಣೂರುಗಳಲ್ಲೂ ಮುಂದೆ ಗೋಮಟ ಪ್ರತಿಷ್ಠೆಗಳಾಗಿರಬಹುದು.

ಕರ್ಣಾಟಕದೊಳಗೆ ಈ ಚಾರಿತ್ರಿಕ ಗೋಮಟ ಪ್ರತಿಮೆಗಳಲ್ಲಿ ಎರಡನೆಯದಾಗಿ ಪ್ರಖ್ಯಾತವಾದ ಕಾರ್ಕಳದ ಗೋಮಟ, ಗುಮ್ಮಟಾದ್ರಿಯ ಮುಂತಾದ ಹೇಳಿಕೆಯು ಕನ್ನಡದಲ್ಲಿ ದಿನ ನಿತ್ಯದ ವ್ಯಾವಹಾರಿಕ ಶಬ್ದಗಳಾಗಿವೆ. ನಿಶ್ಚಲನಾಗಿ ನಿಂತಿರುವ ಉದ್ದಂಡ ಶರೀರವುಳ್ಳವನನ್ನು ಈ ಶಬ್ದದಿಂದ ಕರೆಯುವುದು ; ಹೋಲಿಸುವುದು ಕನ್ನಡ ಸೀಮೆಯಲ್ಲೊಂದು ವಾಡಿಕೆಯಾಗಿದೆ.

ಪ್ರಕೃತ ಕಾವ್ಯದ ಕಥಾನಾಯಕನಾದ ಬಾಹುಬಲಿಗೆ ಈ ಹೆಸರು ಹೇಗೆ ಬಂತೆಂಬುದನ್ನು ತುಸು ವಿಚಾರಿಸೋಣ. ಈತನನ್ನು ಸಾಕ್ಷಾತ್ ಮನ್ಮಥನ ಅಪರಾವತಾರವೆಂದು ಜೈನರು ಹೇಳುವರು. ಈ ಮನ್ಮಥ ಶಬ್ದವು ಪ್ರಾಕೃತದಲ್ಲಿ ಗಮ್ಮಹ ಎಂದಾಗಬಹುದು. ಈ ಶಬ್ದವನ್ನೇ ಕನ್ನಡಕ್ಕೆ ಬಳಸಿಕೊಂಡಾಗ ಗಮ್ಮಟ ಎಂದಾಗಿ ಕ್ರಮೇಣ ವಾಡಿಕೆಯಲ್ಲಿ ಗುಮ್ಮಟ, ಗೊಮ್ಮಟ, ಗೋಮಟ ಎಂಬ ಹೆಸರು ಬಂದಿದ್ದರೂ ಇರಬಹುದು. ಈ ಜೈನ ಮೂರ್ತಿಯನ್ನು ಭಕ್ತಿಯಿಂದ ಗೋಮಟೇಶ್ವರ, ಗುಮ್ಮಟ ಸ್ವಾಮಿಯೆಂಬುದಾಗಿ ಕರೆಯಬಹುದು. ಈ ರೀತಿಯ ವಿಮರ್ಶಾತ್ಮಕ ಅಭಿಪ್ರಾಯವನ್ನು ಹಿರಿಯ ಸಾಹಿತಿಗಳೊಬ್ಬರ ಮತದಂತೆ ನಾವು ಒಪ್ಪಬೇಕಾಗಿದೆ. ಅಂತೂ ಈ ಶಬ್ದವು ಸರ್ವಸಾಮಾನ್ಯ ಒಬ್ಬ ಮಹಾ ವ್ಯಕ್ತಿ (ಅಜಾನು ಬಾಹು) ಎಂಬ ರೂಢಿಯಲ್ಲಿದೆ.

ಈ ಮಹಾ ವ್ಯಕ್ತಿಯನ್ನು ಚಂದ್ರಮನ ವರ್ಣನೆಗಳಿಂದ ಪರಿಚಯಮಾಡಿಕೊಳ್ಳುವಂತೆ ಈ ರೀತಿ ಇರಬಹುದು. ಆದಿ ಜಿನನಾದ ವೃಷಭನಾಥನ ಎರಡನೇ ರಾಣಿಯಾದ ಸುನಂದೆಯಲ್ಲಿ ಹುಟ್ಟಿದ ಹಿರೇ ಮಗನಿವನು. ಈತನಿಗೆ ತಂಗಿಯಾಗಿ ಜನಿಸಿದವಳೆಂದರೆ ಬ್ರಾಹ್ಮಿ. ಅಂತೂ ತಾಯಿಗೆ ಹಿರೇ ಮಗನಾದರೂ ತಂದೆಗೆ ಎರಡನೆಯವನು. ಈತನಿಗೆ ಯುವರಾಜ ಪಟ್ಟವನ್ನು ತಂದೆಯೇ ಕಟ್ಟಿದ್ದನು. ಅಂತೆಯೇ ತಂದೆಯ ಕಾಲಿಂದ ಬಂದ ಪೌದನ್ಯಪುರಕ್ಕೆ ತಾನೇ ಸರ್ವತಂತ್ರ ಸ್ವತಂತ್ರನೆಂದು ರಾಜ್ಯವಾಳುತ್ತಿದ್ದನು. ತಮ್ಮನಾಗಿ ಹುಟ್ಟಿದುದಕ್ಕೆ ಮಾತ್ರ ಅಣ್ಣನಿಗೆ ತಾನು ಮಣಿಯನೆಂದೂ, ರಾಜನೀತಿಗಳಿಗೆ, ಶಾಸನಗಳಿಗೆ ತಲೆಬಾಗುವವನಲ್ಲವೆಂದೂ ಈತನ ಸಿದ್ಧಾಂತವಿತ್ತು. ತೊಂಭತ್ತೊಂಭತ್ತು ಜನ ತಮ್ಮಂದಿರೂ ಭರತನ ದಬ್ಬಾಳಿಕೆಗೆ ಸಂಕುಚಿತ ಮನಸ್ಕರಾಗಿ ಜಿನ ದೀಕ್ಷೆತಳೆದರೂ, ನೆರೆಹೊರೆಯ ರಾಜರೆಲ್ಲರೂ ಶರಣಾಗತರಾದರೂ ಭರತ ಚಕ್ರವರ್ತಿಗೆ ಮಣಿಯದೆ, ಅಣ್ಣನೆಂದು ಹೇಸದೆ ಯುದ್ಧಕ್ಕೇ ಕರೆಕಳುಹಿದವನು. ಈತನಿಗೆ ತಂದೆಯು ಆಯುರ್ವೇದ, ಧನುರ್ವೇದ, ಸಾಮುದ್ರಿಕ, ಕಾಮತಂತ್ರ, ಹಸ್ತಿತಂತ್ರ, ಅಶ್ವತಂತ್ರ, ರತ್ನಪರೀಕ್ಷಾದಿ ವಿದ್ಯೆಗಳನ್ನು ಕಲಿಸಿದನೆಂದು ತಿಳಿಯುವುದು. ಈತನು ದಾಯಾದ್ಯ ವಿಚಾರವಾಗಿ, ಕ್ಷಾತ್ರ ಧರ್ಮದ ಕುರಿತಾಗಿ ಹೇಳಿದ ತತ್ವಗಳೆಂದರೆ ತ್ರಿಕಾಲಾಬಾಧಿತ ತಥ್ಯಗಳೆಂದೇ ತೋರುವುವು. ಅಣ್ಣ ತಮ್ಮಂದಿರೊಳಗಿನ ವಿವಾದಕ್ಕೆ, ಸೈನ್ಯ, ಜೀವಕೋಟಿಯನ್ನೇಕೆ ಅನ್ಯಾಯವಾಗಿ ಹಿಂಸಿಸ

ಬೇಕೆಂಬ ಮಾಧ್ಯಸ್ಥಿಕೆಗೆ ತಲೆದೂಗಿದ ನ್ಯಾಯಜ್ಞ. ಈ ಮಾತನ್ನು ಭಾರತ ಯುದ್ಧಕ್ಕೆ ಹೋಲಿಸಿದರೆ ಪಾಂಡವರೂ, ಕೌರವರೂ ಮಲ್ಲಯುದ್ಧಮಾಡಿ ಅವರೊಳಗೇ ತೀರಿಸಿಕೊಳ್ಳದೆ ಅನ್ಯಾಯವಾಗಿ, ಬಂಧು ಬಳಗ ಸ್ನೇಹಿತರನ್ನೂ ಕೊಲ್ಲಿಸಬೇಕಿತ್ತೆ? ಶ್ರೀ ಕೃಷ್ಣನಂತಹ ಮಹಾ ವ್ಯಕ್ತಿಗಳಿಂದಲೂ ಅನ್ಯಾಯವಾಗಿ ರಾಜ್ಯಲೋಭದದೆಸೆಯಿಂದ ಮಾಡಬಾರದ ಕಾರ್ಯಗಳನ್ನೂ ಮಾಡಿಸಬೇಕಿತ್ತೆ? ಎಂದು ಕೇಳಿದರೂ ತಪ್ಪಾಗಲಾರದು. ಇರಲಿ, ನಮ್ಮ ಕಣ್ಣೆದುರು ಕಾಣುತ್ತಿರುವ ಇಷ್ಟು ಕಾಳಗಗಳನ್ನೇ ವಿಶಾಲ ದೃಷ್ಟಿಯಿಂದ ಊಹಿಸಿಕೊಂಡರೆ ಅಂದಿನ ಭರತ ಬಾಹುಬಲಿಯರ ವಿವಿಧ ಮಲ್ಲಯುದ್ಧಗಳನ್ನು ಇತೋಪ್ಯತಿಶಯವಾಗಿ ಮನವಾರೆ ಕಾಣಬಹುದು. ಕಾವ್ಯದ ಜೀವಾಳವೆಂದರೆ ಈ ಅಣ್ಣತಮ್ಮಂದಿರ ಧರ್ಮಯುದ್ಧ ವರ್ಣನಾ ಸಂದರ್ಭವಾಗಿದೆ. ಸರಿಮಿಗಿಲೆನಿಸುವ ಒಂದೇ ರಕ್ತ ಸಂಬಂಧಿಗಳು, ರಾಜಾಧಿರಾಜರು, ಅಣ್ಣ ತಮ್ಮಂದಿರು, ತಾವೇ ಯುದ್ಧಕ್ಕೆ ಬದ್ಧಕಂಕಣರಾದರಲ್ಲದೆ ಬೇರಾವ ಪರಿವಾರವನ್ನೂ ನೋಯಿಸಲಿಲ್ಲ. ಕುರುಕ್ಷೇತ್ರದಲ್ಲಿ ಬಂದು ನಿಂತ ಇತ್ತಂಡದ ಸೇನೆಯಲ್ಲಿ ಬಂಧು ಬಳಗವನ್ನು ಕಂಡು ಅರ್ಜುನನು ಯುದ್ಧಕ್ಕೆ ನಿಂತಲ್ಲಿಯೇ ಹೆದರಿ "ಸೀದಂತಿ ಮಮಗಾತ್ರಾಣಿ." ಎಂಬಿತ್ಯಾದಿಯಾಗಿ ಹೇಳಿದನಂತೆ. ಆದರೆ ಈ ಭರತ ಬಾಹುಬಲಿಯರು ಸೂಜಿಗೆ ಸೂಜಿ, ವಜ್ರಕ್ಕೆ ವಜ್ರವೆಂಬಂತೆ ಸೆಣಸಿ ಫಲಿತಾಂಶವನ್ನು ಪೂರ್ವಾಪರವನ್ನು ಪರಿಣಾಮದಲ್ಲೇ ವಿಚಾರಿಸಿದಂತಿದೆ. ತಮ್ಮನನ್ನು ಚಕ್ರದಿಂದ ಭೇದಿಸಲೆಳಸಿದ ಭರತನ ಅಕೃತ್ಯಕ್ಕೆ ಅಲ್ಲಿ ನೆರೆದವರೆಲ್ಲರೂ ವಿರೋಧ ಪ್ರದರ್ಶನಮಾಡಿದರೂ ಬಾಹುಬಲಿಯು ಕೇವಲ ಭುಜದಂಡದಿಂದಲೇ ತಡೆದು ಬಿಟ್ಟನಂತೆ. ಅಣ್ಣನೆಂದು ಲೆಕ್ಕಿಸದೆ ಭರತನನ್ನು ಎತ್ತಿ ಬಾಹುಬಲಿಯು ತನ್ನ ಶಕ್ತಿಯ ಪರಮಾವಧಿ ತೋರಿಸಿದರೂ ಅಣ್ಣನೆಂಬ ಪ್ರೀತಿಯಿಂದ ಧೊಪ್ಪನೆ ಬಿಡದೆ ಕೆಳಕ್ಕೆ ತಾನೇ ಇಳಿಸಿಬಿಟ್ಟನಂತೆ. ಜಯವನ್ನು ತಾನೇ ಪಡೆದರೂ ರಾಜ್ಯಲೋಭ, ದಾಯಾದ್ಯ ಮತ್ಸರಗಳಿಂದ ಸಂಸಾರಾಸಾರತೆಯುಂಟಾಗಿ ಭರತನಿಗೆ ರಾಜ್ಯಸಮರ್ಪಣೆಮಾಡಿ ತಾನು ಜಿನ ದೀಕ್ಷೆ ಕೈಗೊಂಡನಂತೆ. ಆದರೆ ತನಗಿಂತ ಹಿಂದೆಯೇ ಆದಿಜಿನನ ಪಾದತಲದಲ್ಲಿ ಸಮವಸರಣ ದೀಕ್ಷೆ ತಳೆದ ತನ್ನ ಸೋದರಿಯರಿಗೂ, ತಮ್ಮಂದಿರಿಗೂ ತಾನೆರಗೆನೆಂದು ಅಲ್ಲೇ ಆತ್ಮ ಗೌರವಪ್ರಿಯನಾಗಿ ಅಚಲನಾಗಿ ಬಿಟ್ಟನಂತೆ. ಇದೆಂತಹ ಆತ್ಮ ಸಂಯಮ! ಉದಾತ್ತ ಚರಿತೆ! ಈತನಲ್ಲವೆ ಮಹಾ ವ್ಯಕ್ತಿ! ಅಂತೂ ಹಾಡುಗಬ್ಬವಿದು ಸರಳ ಭಾಷೆಯಲ್ಲಿ, ಸುಲಭ ಶೈಲಿಯಿಂದ ದ್ರಾಕ್ಷಾಪಾಕದಲ್ಲಿ ಬರೆಯಲ್ಪಟ್ಟುದರಿಂದ ಸಕಲ ಜನಾದರಣೀಯವಾಗ ಬಹುದೆಂಬುದು ನಂಬಿಕೆ.

ಇದರ ಮುದ್ರಣ ಪ್ರತಿ ತಯಾರಿಸಿದ ಮಾಜಿ ಕನ್ನಡ ಪಂಡಿತರಾದ ಶ್ರೀ ಪಿ. ಸುಬ್ರಾಯ ಭಟ್ಟ, ವಿದ್ವಾನ್, ಇವರಿಗೂ, ಮುದ್ರಿತ ಪ್ರತಿಗಳನ್ನು ತಿದ್ದಿ ಅವತರಣಿಕೆ ಮುಂತಾದ ಸಂಪಾದನಾ ಕಾರ್ಯದಲ್ಲಿ ಭಾಗಿಗಳಾದ ಶ್ರೀಮಾನ್ ವಿ. ಹನುಮಂತಾಚಾರ್ಯ, ಎಂ.ಎ., ಎಲ್.ಟಿ., ವಿದ್ವಾನ್, ಲೈಬ್ರೆರಿಯನ್, ಇವರಿಗೂ, ಪ್ರಕೃತ ಕನ್ನಡ ಪಂಡಿತರಾದ ವಿದ್ವಾನ್ ಶ್ರೀ ಕೆ. ಕೃಷ್ಣ ಶರ್ಮರಿಗೂ ಅವರವರ ಕರ್ತವ್ಯ ದಕ್ಷತೆಗಳಿಗಾಗಿ ನನ್ನ ಹಾರ್ದಿಕ ಅಭಿವಂದನೆಗಳು. ಗೋಮಟೇಶ್ವರ ವಿಗ್ರಹದ ಪಡಿಯಚ್ಚನ್ನು ಮುದ್ರಣಕ್ಕೆ ಕೊಟ್ಟ ಮದ್ರಾಸ್ ಪ್ರಾಚ್ಯಶಾಖೆಯ ಡೈರೆಕ್ಟರರಾದ ಶ್ರೀ ಆರ್. ಪಾರ್ಥಸಾರಥಿ ಯವರಿಗೂ, ಮುದ್ರಣ ಕಾರ್ಯವನ್ನು ಶ್ಲಾಘ್ಯ ರೀತಿಯಿಂದ ಅಲ್ಪಾವಧಿಯಲ್ಲಿ ಮುಗಿಸಿದ ಗವರ್ನಮೆಂಟ್ ಮುದ್ರಣಾಲಯದ ಸೂಪರಿಂಟೆಂಡೆಂಟರವರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

"ಸಿರಿಗನ್ನಡಂ ಗೆಲ್ಗೆ ಬಾಳ್ಗೆ."

ಗವರ್ನಮೆಂಟ್ ಓರಿಯಂಟಲ್
ಮ್ಯಾನುಸ್ಕ್ರಿಪ್ಟ್ಸ್ ಲೈಬ್ರೇರಿ,
ಮದ್ರಾಸು-೫.

ತಿ. ಚಂದ್ರಶೇಖರನ್.

G. Ch.—B.

# ಗೋಮಟೇಶ್ವರ ಚರಿತೆ

## (ಚಂದ್ರಮ ವಿರಚಿತಂ)

### ಮೊದಲನೆಯ ಸಂಧಿ

ಸುರನರಪತಿನುತ ಚರಣ ಸರೋಜ ಭಾ। ಸುರತರ ಕೇವಲ ಬೋಧ ॥
ಪರಮಾರ್ಹಂತ ಲಕ್ಷ್ಮೀಪತಿ ನಮಗೆ ನೀ। ಶರಣಾಗು ನೇಮಿಜಿನೇಶ ॥ (1)

ವರಚತುರ್ಮುಖ ಚೈತ್ಯಾಲಯದೊಳಗಿನಿಂ। ದರಮಲ್ಲಿ ಮುನಿಸುವ್ರತೇಶ ॥
ಜರೆಜನ್ಮಮರಣವ ತೊಲಗಿಸಿ ಸಲಹೆಮ್ಮ। ಕರುಣಾಸಾಗರ ಪೂರ್ಣಚಂದ್ರ ॥ (2)

ಕಾಯಜನಾಗಿ ಕಾಯಜನ ಗೆಲಿದು ಮುಕ್ತಿ। ನಾಯಕಿಗರಸಾದಭವ ॥
ಹೇಯೋಪಾದೇಯ ತತ್ವಗಳ ತಿಳುಹಿ ನಮ್ಮ। ಕಾಯೋ ಶ್ರೀ ಗುಮ್ಮಟ ಜಿನಪ ॥ (3)

ಜಲಮಲ್ಲ ದೃಷ್ಟಿಯುದ್ಧದೊಳು ಭರತನ ಗೆ। ಲ್ದಲಘು ವಿಕ್ರಮದಿಂದ ಬಾಹು ॥
ಬಲಿಯೆಂಬನ್ವರ್ಥನಾಮದ ಸ್ವಾಮಿಯ। ಚೆಲುವಡಿಗಳಿಗಾ ನೆರಗುವೆನು ॥ (4)

ಥಳಥಳಿಸುತ ಕೋಟಿ ಚಂದ್ರಾದಿತ್ಯರ। ಬೆಳಗನೇಳಿಪ ದಿವ್ಯ ದೇಹ ॥
ಕಳಸಪೂರದ ಚಂದ್ರನಾಥನ ಶ್ರೀಪಾದ। ನಳಿನಗಳನು ಬಲಗೊಂಬೆ ॥ (5)

ಜಿನಸಿದ್ಧ ಸೂರಿ ದೇಶಿಕ ಸರ್ವಸಾಧುಗ। ಳನುಪಮ ಶ್ರೀಪಂಚ ಪದವ ॥
ಮನದೊಳುನೆನೆದು ನುತಿಸಿ ಮಂಗಲವಮಾಡಿ। ಜಿನಚರಿತ್ರವನು ಪೇಳುವೆನು ॥ (6)

ಭೂಮಿಯೊಳುಳ್ಳ ಭವ್ಯರ ವಿಘ್ನಗಳು ನಿನ್ನ। ನಾಮವನುಚ್ಚರಿಸಿದರೆ ॥
ತಾಮಸವಿಲ್ಲದೆ ಪರಿಹಂಸುವುವೆನು। ಶ್ಯಾಮ ಯಕ್ಷನ ಬಲ್ಪೆಂತೊ ॥ (7)

ಬೆಳುದಿಂಗಳ ಪುತ್ಥಳಿಯಂತೆ ಚೆಲುವಿಂದ। ಕಳಕಳಿಸುವ ಕೋಮಲಾಂಗಿ ॥
ಬೆಳಗೆಮ್ಮಮತಿದರ್ಪಣವ ಜ್ವಾಲಿನಿ ಪೊಂ। ಗಳಶ ಕುಚದ ಕಂಜವದನೆ ॥ (8)

ತರಣಿ ಮಂಡಲವ ಸೋಳಿಪ ಧರ್ಮಚಕ್ರವ। ಶಿರದೊಳು ಧರಿಸಿ ಭವ್ಯರಿಗೆ ॥
ವರವಿತ್ತು ರಕ್ಷಿಪ ಸರ್ವಾಣ್ಹಯಕ್ಷ ನೀ। ಪರಿಹರಿಸೆಮ್ಮ ವಿಘ್ನಗಳ ॥ (9)

ಪೊಂಬಾಳೆದೊಡೆಯ ಪೊಂಬೊಗರಿಮೊಲೆಯ ಚೆಲ್ವೆ। ಗಿಂಬಾದ ವಕ್ಷದಿಂದೆಸೆವ ॥
ಕಂಬುಕಂಧರೆ ಪೂರ್ಣಚಂದ್ರವದನೆ ಜಗ। ದಂಬಿಕೆ ಸಲಹೆಮ್ಮನೊಲಿದು ॥ (10)

ಮೆಟ್ಟಿಸಿ ತುರಗದ ಖುರದಿಂದ ರಿಪುಗಳ। ನಟ್ಟಿಮುತ್ತೆಲ್ಲಿರ್ದರೆಂದು ॥
ಬೆಟ್ಟವನೇರಿ ಕೆಂಬದಿ ನಿಂದು ನೋಡುವ। ಬಿಟ್ಟಬ್ರಹ್ಮನಿಗೆರಗುವೆನು ॥ (11)

ನೆನೆದಿಷ್ಟಗಳನಿತ್ತು ನೇಮಾದಿ ಜಿನಮತ। ಕನುಸಾರಿಯಾಗಿ ವರ್ತಿಸುವ ॥
ಜಿನಪತಿಗಳಕಾವ ಬೆಟ್ಟದ ಬ್ರಹ್ಮ ನೀ। ನೆನಗೆ ಸನ್ಮತಿದೋರು ಬೇಗ। (12)

ಮಲೆತರಿಗಳ ಸೀಳ್ವ ಭೈರವರಾಯನ। ಕುಲದೇವತೆಯೆಂದೆನಿಪ ॥
ಚೆಲುವೆ * ಪೊಂಬುಜದ ಪದಾಂಬೆಯ ಪದಪದ್ಮ। ಕಲಘು ಭಕ್ತಿಯೊಳೆರಗುವೆನು ॥ (13)

ಆ ಪದ್ಮಾವತಿಯಮ್ಮನ ರೂಪು ಕ। ಲಾಪ ಕಾಸಾರ ಮರಗಳ ॥
ಶ್ರೀ ಪಾರ್ಶ್ವ ಜಿನಪನಸ್ತ್ರೀ ಮತ್ಕವಿತೆಗೆ। ನೀ ಪರಿಹರಿಸು ವಿಘ್ನಗಳ ॥ (14)

---

* ಪೊಂಬುಚದ

ವಾಣಿಸತ್ಪುಸ್ತಕ ಪಾಣಿ ಕಾಳೋರಗ । ವೇಣಿ ಸನ್ಮಾರ್ಗ ನಿಶ್ರೇಣಿ ॥
ಮಾಣದೆ ಸಲಹೆಮ್ಮ ಮಂಗಲವನು ನೀನು । ಕಾಣಿಸಿ ಕಮಲದಳಾಕ್ಷಿ ॥

ಎರಡುವರೆಯು ದ್ವೀಪದೊಳಗುತ್ಕೃಷ್ಟದಿಂ । ಪರಮ ನಿರ್ಗ್ರಂಥ ಮುನಿಗಳು ।
ನಿರುತ ತ್ರಿಸಂಖ್ಯಾನನವ ಕೋಟಿಗಳುಂಟು । ವರಪದ ಪದ್ಮಕೆರಗುವೆ ॥

ಮುಕ್ತಿವೆಣ್ಣಿಗೆ ಮೋಹಿಸಿ ಸರ್ವಾಂಗ ವಿ । ರಕ್ತನಾದ ಮಲ ಯೋಗೀಂದ್ರ ॥
ಭಕ್ತವತ್ಸಲ ಮಾಹೇಂದ್ರ ಕೀರ್ತೀಶ ನೀ । ಮುಕ್ತಿಮಾರ್ಗವ ತೋರಿಸೆಮಗೆ ॥

ಪನಸೋಗೆಯು ಸಿಂಹಾಸನ ಪೂರ್ವಾದ್ರಿ । ಗನುಪಮ ಸೂರ್ಯನೆಂದೆನಿಪ ॥
ಮುನಿಪತಿ ದೇವ ಕೀರ್ತ್ಯಾಚಾರ್ಯನ ಪದ । ವನಜಗಳನು ಬಲಗೊಂಬೆ ॥

ಆ ಗುರುವಿನ ಶಿಷ್ಯ ಕಲಿಯುಗ ಚಾರಣ । ನೆನಿಸಿ ಭೂತಳದೊಳು ಮೆರೆವ ॥
ಶ್ರೀ ಗುರು ಮಲಧಾರಿ ಲಲಿತ ಕೀರ್ತೀಶ ನೀ । ನಾಗು ಶರಣು ಭವ್ಯ ಜನಕೆ ॥

ಮೂರು ರತ್ನಗಳ ಮುಕ್ತಿಗೆ ಮಾರ್ಗವೆಂಬುದ । ತೋರಿಸುವಂತೆ ಭವ್ಯರಿಗೆ ॥
ಮೂರಿಟ್ಟಿಗೆಯು ಮೇಲೆ ಪವಡಿಸುವನು ಮಲ । ಧಾರಿ ಲಲಿತ ಕೀರ್ತಿ ಮುನಿಪ ॥

ಭೂಪತಿಗಳ ಮೌಲಿ ರತ್ನಾಂಶು ರಂಜಿತ । ಶ್ರೀಪಾದ ಪದ್ಮ ನೆಂದೆನಿಪ ॥
ಚಾಪೆಯು ಲಲಿತ ಕೀರ್ತ್ಯಾಚಾರ್ಯ ನೀವೆಮ್ಮ । ಲೋಪಿಸು ಪಾಪ ಪಂಕವನು ॥

ಮೂಲೋತ್ತರ ಗುಣಮಣಿ ಗಣ ಭೂಷಣ । ಭೂಲೋಕ ವಂದಿತ ಚರಣ ॥
ಪಾಲಿಸು ಸಂಯಮಿ ಲಲಿತ ಕೀರ್ತ್ಯಾಚಾರ್ಯ । ಶೀಲಚಾರಿತ್ರ ಸಂಪದವ ॥

ಸರ್ವಜ್ಞನ ಮುದ್ರಾ ಶಕ್ತಿಯಿಂ ಕಡುಕೊರ್ವ । ಗರ್ವಿಯನಂಗನ ಗೆಲಿದ ॥
ಗೀರ್ವಾಣ ಲಲಿತ ಕೀರ್ತ್ಯಾಚಾರ್ಯ ಸಲಹೆಮ್ಮ । ಸರ್ವಸಂಪದಗಳನಿತ್ತು ॥

ಮಲಧಾರಿ ಲಲಿತ ಕೀರ್ತ್ಯಾಚಾರ್ಯ ವಂಶಕ್ಕೆ । ತಿಲಕವೆನಿಸಿ ಜಿನ ಮತಕೆ ॥
ಬೆಳಗುವ ಅಭಿನವ ಲಲಿತ ಕೀರ್ತೀಶನ । ಬಲಗೊಂಡು ಪದಕೆರಗುವೆನು ॥

ಶ್ರೀ ವಿದ್ಯಾನಂದ ಸ್ವಾಮಿಯು ಪದ ಪದ್ಮ । ಭಾವಸರೋವರದಲ್ಲಿ ॥
ಆವಾಗ ನೆಲಸಿರೆ ಭಾಗ್ಯ ಲಕ್ಷ್ಮಿಗೆ ನೆಲೆ । ಭಾವಕರಪ್ಪುದೊಂದರಿಂದೆ ॥

ತ್ರೈವಿದ್ಯ ಚಕ್ರೇಶ ವರ್ತಿಪ ಬುಧರಿಗೆ । ಶ್ರೀ ವಿದ್ಯಾ ಗುರುವೆನಿಪ ॥
ಕೋವಿದ ಶ್ರುತಸಾಗರಾರ್ಯನ ಮೆಲ್ಲಡಿ । ದಾವರೆಗಳಿಗೆರಗುವೆನು ॥

ವರ ಕಾಣೂರ್ಗಣ ಗಗನ ಮಂಡಲ ಸೂರ್ಯ । ನಿರುಪಮಗಿರಿರಾಜ ಧೈರ್ಯ ॥
ಗುರುವರ ಭಾನು ಕೀರ್ತ್ಯಾಚಾರ್ಯವರ್ಯ ನೀ । ಶರಣಾಗು ಸಕಲ ಭವ್ಯರಿಗೆ ॥

ಬಲ್ಲಾಳರಾಯನ ಜೀವರಕ್ಷಕ ಮುನಿ । ವಲ್ಲಭನೆನಿಸಿ ಮಾರ್ಮಲೆವ ॥
ಫುಲ್ಲಶರನ ಗೆಲ್ದ ಚಾರುಕೀರ್ತ್ಯಾಚಾರ್ಯ । ಸಲ್ಲೀಲೆದೋರು ಸನ್ಮತಿಗೆ ॥

ಮಾರನದಟ ಗೆಲ್ದ ಕಾರಣದಿಂದ ಶ್ರೀ । ವೀರಸೇನಾಚಾರ್ಯನೆಂಬ ॥
ಧಾರಿಣಿಯೊಳು ಪೆಸರಾದುದಾ ಮುನಿಪನ । ಚಾರು ಚರಣಕೆರಗುವೆನು ॥

ಕಲಿಯುಗದೊಳಗೆ ಸಕಲ ಶಾಸ್ತ್ರಗಳ ಬುದ್ಧಿ । ಬಲದಿಂದ ಭೇದಿಸಿ ನೋಡಿ ॥
ಸುಲಭದಿಂ ತಾನುಪದೇಶವ ಮಾಡಿದ । ಲಲಿತವರ್ಣಿಯು ಬಲಗೊಂಬೆ ॥

ಶ್ರುತಸಾಗರ ಮುನಿಗತಿ ಪ್ರಿಯ ಶಿಷ್ಯ ನ । ನ್ನುತ ಕವಿ ಚಂದ್ರಮ ನಾನು ॥
ಪ್ರತಿಯಿಲ್ಲವೆನಲೀ ಕೃತಿಯ ಪೇಳ್ವೆನು ಬುಧ । ತತಿ ಮೆಚ್ಚುವಂತೆ ಕನ್ನಡದಿಂ ॥ (31)

ಜಿನಮತ ವಾರ್ಧಿ ವರ್ಧನ ಚಂದ್ರಮಭವ್ಯ । ಜನ ಹೃತ್ಕುವಲಯ ಚಂದ್ರ ॥
ಅನುಪಮ ವಿಬುಧ ಚಕೋರ ಚಂದ್ರನೆಂದಾ । ಜನರೊಲ್ದು ಬಣ್ಣಿಪರವನ ॥ (32)

ವ್ರತಗುರುವೆನಗೆ ವಶಾಲೇಂದ್ರ ಕೀರ್ತ್ಯಾಚಾರ್ಯ । ಶ್ರುತಸಾಗರ ಮುನಿರಾಯ ॥
ನುತ ವಿದ್ಯಾಗುರುವೆನಗೆನ್ನ ಪುಣ್ಯದಿಂ । ದತಿಶಯ ಕೆನ್ನೆಣೆಯುಂಟೆ ॥ (33)

ಈ ಜಗದೊಳು ಕೀರ್ತಿಪಸರಿಸಿ ನಿಲ್ವಂತೆ । ಶ್ರೀಜಿನರಾಜನ ಕೃತಿಯ ॥
ಮಾಜದೆ ಪೇಳೆನೆ ಲಲಿತ ಕೀರ್ತ್ಯಾಚಾರ್ಯ । ನೋಜೆಯಿಂ ಪೇಳ್ವೆನೀ ಕೃತಿಯ ॥ (34)

ಅರಿರಾಯಗಗಂಡತ್ರಾವಣಿ ಯೆಂದೆಂಬ । ಬಿರುದಾಳ್ವ ಭೈರವ ನೃಪನ ॥
ಕರುಣಾ ಸಾಹಾಯ್ಯದಿಂ ದೀಕೃತಿಯನು ಪೇಳ್ವೆ । ಧರೆಯ ಜನರು ಮೆಚ್ಚುವಂತೆ ॥ (35)

ಆಗಮ ಶಬ್ದತರ್ಕಾದಿ ಶಾಸ್ತ್ರವನನು । ರಾಗದಿಂದೆನಗೆ ತಿಳುಹಿದ ॥
ಶ್ರೀಗುರು ಶ್ರುತಸಾಗರಯೋಗಿ ಸಾರಥಿ । ಯಾಗಿ ನಡೆಸು ಕೃತಿ ರಥವ ॥ (36)

ಅಡಕಿಲನಡಸಬಲ್ಲದೆ ಯಾಶ್ವಾನನು । ಕೆಡಹ ಬಲ್ಲಂತೆ ಸುಕೃತಿಯ ॥
ಜಡಮತಿಗಳು ಪೇಳಲರಿಯದೆ ನಿಂದಿಸಿ । ನುಡಿದರೆ ಕುಂದೇನು ನನಗೆ ॥ (37)

ಗೋವಿನ ಮೊಲೆಯ ಪಾಲನು ಬಿಟ್ಟು ರಕ್ತವ । ಸೇವಿಪ ಜಿಗುಳಿಗಳಂತೆ ॥
ಭಾವರಸವ ಬಿಟ್ಟು ದೋಷವನರಸುವ । ಗಾವಿಲರಿಗೆ ಗತಿಯುಂಟೆ ॥ (38)

ಕಬ್ಬಿನೊಳಿದ್ದ ರಸವ ಬಿಟ್ಟು ಸೋಗೆಯ । ಕೊಬ್ಬಿದ ಕುರಿಸೇವಿಪಂತೆ ॥
ಕಬ್ಬದೊಳಿದ್ದ ಗುಣವ ಬಿಟ್ಟು ದುರ್ಜನ । ರುಬ್ಬಿ ದೋಷವನರಸುವರು ॥ (39)

ಹಾಲು ನೀರೊಂದಾಗಿ ಕೂಡೆ ನೀರನು ಬಿಟ್ಟು । ಪಾಲಸೇವಿಪ ಹಂಸೆಯಂತೆ ॥
ಲೀಲೆ ಕೈಮಿಗೆ ಗುಣವನು ಪೇಳ್ವ ಸಜ್ಜನ । ಜಾಲಕೆ ನಾನೆರಗುವೆನು ॥ (40)

ತಮ್ಮ ಸ್ವಭಾವ ಬಿಡರು ಸಜ್ಜನರುಗ । ಳೆಮ್ಮೊಳು ಗುಣಲೇಸುವಿರಲು ॥
ತಮ್ಮಿಂದಧಿಕ ಗುಣಾಢ್ಯರೆಂಬರು ಅವ । ರಿಂ ಮೈಸಿರಿವಂತರ್ಗೈಸೆ ॥ (41)

ಈ ಕಾವ್ಯ ಸಜ್ಜನರಿಗೆ ಸೇವ್ಯ ದುರ್ಜನ । ನೀಕಕಸೇವ್ಯಮೆಂತೆನಲು ॥
ಲೋಕವ ಬೆಳಗುವ ಸೂರ್ಯನು ಘೂಕಾ । ನೀಕಕೆಸೇವ್ಯನೆ ಪೇಳ ॥ (42)

ಅಂತಿರಲವರ ಪ್ರಸಂಗ ಪ್ರಕೃತ ಮಾನ । ದಂತೆನೆ ಮೊದಲಿಂದ ಪೇಳ್ವೆ ॥
ಅಂತಕವಿಲ್ಲದಾಕಾಶ ಮಧ್ಯದಿ ಲೋಕ । ಸಂತತ ಮಿಪ್ಪುದೆಂತೆನಲು ॥ (43)

ಏಳೊಂದೈದೊಂದು ರಜ್ಜುವಿನಗಲಿ ಯೊ । ರೇಳು ರಜ್ಜುವಿನುದಯದಲಿ ॥
ಪೇಳುವರಳವಲ್ಲ ಲೋಕವಿಹುದು ತ್ರಾಸ । ನಾಳವವರ ಮಧ್ಯದೊಳು ॥ (44)

ಕಟಿಯೊಳಿರಡು ಹಸ್ತವ ನಿಟ್ಟು ಪಾದವ । ನಟಣೆಯಿಂ ಪಸರಿಸಿ ನಿಂದ ॥
ನಟನಂತೆ ಲೋಕವಿಪ್ಪುದು ಭಾವಿಸಿ ನೋಡೆ । ದಿಟವಿದು ಜನರ ನಿರೂಪ ॥ (45)

ಬಳಸಿದ ಸಂಖ್ಯಾತ ಜಲಧಿ ದ್ವೀಪಂಗಳ । ನೊಳಕೊಂಡು ಮಧ್ಯಮ ಲೋಕ ॥
ತೊಳಗುವ ಪರಿವೇಷ ಸೂರ್ಯ ಮಂಡಲಗಳ । ನೊಳಕೊಂಡ ನಭದಂತಿಹುದು ॥ (46)

ದ್ವೀಪಸಾಗರಗಳ ಮಧ್ಯದೊಳಗೆ ಜಂಬೂ । ದ್ವೀಪವಿಹುದು ಸೊಬಗಾಂತು ॥
ಕಾಪನಿಟ್ಟನೊ ಬಿದಿಯೆನೆ ಲವಣಾಬ್ಧಿಯಾ । ದ್ವೀಪವ ಬಳಸಿಕೊಂಡಿಹುದು ॥ (47)

ತೆರೆನೊರೆಬುದ್ಬುದ ಸುಳಿತುಂತುರುಗಳಿಂ । ದುರು ಶಂಖ ಶುಕ್ತಿ ಪ್ರವಾಳ ॥
ವರಮೌಕ್ತಿಕ ರತ್ನ ಜಲಚರದಿಂದಲಾ । ಶರಧಿ ಗಂಭೀರವೆತ್ತಿಹುದು ॥ (48)

ಎರಡು ತಡಿಯು ವಜ್ರವೇದಿಕೆಯಿಂದ ಬಂ । ಧುರವಾದ ಲವಣ ಸಮುದ್ರ ॥
ಪರಿವೇಷ್ಟಿಸಿಕೊಂಡು ಲಕ್ಷಯೋಜನ ವ್ಯಾಸ । ದಿರದಿಂಪ ದ್ವೀಪವೊಪ್ಪಿಹುದು ॥ (49)

ಜಂಬೂದ್ವೀಪದ ನಟ್ಟನಡುವೆ ಸುದರ್ಶನ । ವೆಂಬ ಪೆಸರ ಮೇರುಗಿರಿಯು ॥
ಚುಂಬಿಸುತಿಹುದು ಚೂಳಿಕೆಯಿಂದ ಸ್ವರ್ಗದೊಂ । ದಂಬರ ಯಾನದ ಮೊದಲ ॥ (50)

ತೊಂಬತ್ತೊಂಬತ್ತು ಸಾವಿರ ಯೋಜನ । ವೆಂಬಗದೊಳಗಾ ಮಾಯು ॥
ಅಂಬುಜಭವನು ಸೃಷ್ಟಿಯೊಳಟ್ಟ ಶಂಕುವಿ । ದೆಂಬಂತೆ ಮೇರುವೊಪ್ಪಿಹುದು ॥ (51)

ಅರುವತ್ತೊಂದು ಸಾವಿರಯೋಜನ ಮುಟ್ಟ: ಬೆರಕೆವರಲವರ್ಣ ಮೇರು ॥
ಇರದೆ ಮೂವತ್ತೆಂಟು ಸಾವಿರಯೋಜನ । ವರಕಾಂಚನ ವರ್ಣಮೇರು ॥ (52)

ಮೊದಲೊಮ್ಮೆ ಸಾಗರಮಥನಕ್ಕೆ ಸುರರೆಲ್ಲ । ರಿದನು ಕೊಂಡೊಯ್ದರೆಂದೆನುತ ॥
ಬಿದಿಪಾರಿಗುಪಿಟ್ಟನೊಯೆನೆ ಗ್ರಹಗಣ । ವದಸುತ್ತಿ ಬಹವನುದಿನವು ॥ (53)

ಭೂಭದ್ರಸಾಲಿ ನಂದನವನ ಸೌಮನ । ಸಾಘಧಾನದ ವನಪಂಕ್ತಿ ॥
ಶೋಭಿಪ ಪಾಂಡುಕ ವನಗಳಿಂದಾ ಮೇರು । ಸೌಭಾಗ್ಯದಿಂದೊಪ್ಪುತಿಹುದು ॥ (54)

ಅದರ ಮೇಖಲೆಯೊಳ ಕೃತ್ರಿಮ ಷೋಡಶ । ಸದಮಲ ಜಿನಗೃಹವಿಹವು ॥
ಅದನು ವರ್ಣಿಸುವರೆ ನಾಗೇಂದ್ರಗಳವಲ್ಲ । ವದನೈಕತ್ವರಿಗಳವೆ ॥ (55)

ಅವು ನಾನಾರತ್ನಮಯಗಳ ಬೆಳಗಿಂದ ದಿವಿಜಲೋಕವ ನಗುತಿಹವು ॥
ಅವರೊಳಕೃತ್ರಿಮ ಜಿನಬಿಂಬ ನೂರೆಂಟು । ರವಿಕೋಟಿ ಪ್ರಭೆಯನಾಂತಿಹವು ॥ (56)

ಮಣಿಮಯ ಮಾನಸ್ತಂಭ ಗೋಪುರ ಶಾಲ । ಝಣ ಝಣರೆಂಬ ಘಂಟೆಗಳು ॥
ಗಣನೆಯಿಲ್ಲದ ದೇವದುಂದುಭಿಗಳ ಸಂ । ದಣಿಯಿಂದ ಸೊಬಗನಾಂತಿಹವು ॥ (57)

ಮೇರುಗಿರಿಯ ಪೂರ್ವ ಪಶ್ಚಿಮದೊಳು ಪುಣ್ಯ । ಸಾರವಿದೇಹ ಭೂಮಿಗಳು ॥
ಆರಾರು ಖಂಡದಿಂ ಮೂವತ್ತೆರಡು ದೇಶ । ಭೂರಿವಿಭವ ಕೋಶವಿಹುದು ॥ (58)

ಅಲ್ಲಿಯ ಮನುಜರೆಲ್ಲರು ನೋಡಲೈನೂರು । ಬಿಲ್ಲಿನುತ್ಸೇಧ ದೇಹಿಗಳು ॥
ಎಲ್ಲರಿಗುತ್ಕೃಷ್ಟ ಪೂರ್ವಕೋಟ್ಯಾಯುಷ್ಯ । ದಲ್ಲಿಹ ರಧಿಕ ಲೀಲೆಯೊಳು ॥ (59)

ಚರಮಾಂಗರು ಚಾರುಚರಿತ್ರರಲ್ಲಿಹರು । ಪರಮಮುಕ್ತಿಯ ನೆಯ್ದುವರು ॥
ಸುರಲೋಕವು ಸರಿಯಲ್ಲವಾ ಭೂಮಿಯ । ಸಿರಿಯನದೆಂತು ಬಣ್ಣಿಪೆನು ॥ (60)

ಅವಧಿಜ್ಞಾನಿಗಳುಂಟು ತಾಮನದಲ್ಲಿ । ನೆನೆದುದ ಪೇಳುವರುಂಟು ॥
ದಿವಿಜ ಪೂಜಿತ ಕೇವಲ ಜ್ಞಾನಧರರುಂಟು । ಕವಿತೆಯಲ್ಲಿದು ಪರಮಾರ್ಥ ॥ (61)

ದಕ್ಷಿಣೋತ್ತರದಲ್ಲಿ ಭರತೈರಾವತ । ಸುಕ್ಷೇತ್ರ ವಿಪ್ಪುವಂತಲ್ಲಿ ॥
ರಕ್ಷಿಪರವನು ಷಟ್ಕಾಲ ವರ್ತನೆಯಲ್ಲಿ । ಸುಕ್ಷೇಮದಿಂದ ಭೂಭುಜರು ॥ (62)

ಆ ಭರತದ ಷಟ್ಖಂಡ ಭೂಮಿಗಳೊಳು । ಶೋಭಿಸುವಾರ್ಯಖಂಡ ॥
ಭೂ ಭಾಗದಲ್ಲಿ ಚಪ್ಪನ್ನ ದೇಶಂಗಳು । ಸೌಭಾಗ್ಯದಿಂದೊಪ್ಪುತಿಹವು ॥ (63)

ಅವರೊಳು ತೌಳವ ದೇಶವಿಹುದು ಉಪ । ಲವಣ ಸಮುದ್ರದೊತ್ತಿನೊಳು ॥
ವಿವಿಧ ವೈಭವದಿಂದ ಸರಿಯಿಲ್ಲ ತನಗೆಂದು । ದಿವಿಜಲೋಕವನಗುತಿಹುದು ॥ (64)

ಈತಿಬಾಧೆಗಳಲ್ಲ ದುರ್ಭಿಕ್ಷಗಳಲ್ಲ । ಜಾತಿಸಂಕರವೆಂಬುದಿಲ್ಲ ॥
ನೀತಿಯ ಮೀರಿ ನಡೆವರಿಲ್ಲ ಶ್ರೀ । ವೀತರಾಗನ ಸದ್ಭಕ್ತಿಯುತರು ॥ (65)

ಕರದಂಡವೆಂಬುದು ತಾವರೆಯೊಳಗಲ್ಲ । ದರಸು ಪ್ರಜೆಗಳೊಳಗಿಲ್ಲ ॥
ಉರಗದೊಳಲ್ಲದೆ ಆಗಮ ವಕ್ರತೆ । ವರಭವ್ಯ ಜನರೊಳಗಿಲ್ಲ ॥ (66)

ಗುಣಧರ್ಮಗಳ ಬಿಟ್ಟು ನಡೆವ ವರ್ತನೆ ಮಾ । ರ್ಗಣದೊಳಲ್ಲದೆ ನಾಡೊಳಿಲ್ಲ ॥
ಗಣಿಕೆಯರೊಳು ಪರಧನ ಹರಣವ ಮಾ । ಳ್ವಣಿಕೆಯಲ್ಲದೆ ಮತ್ತಲ್ಲಿಲ್ಲ ॥ (67)

ಸೊಕ್ಕು ಜವ್ವನೆಯರ ಕುಚಗಳೊಳಲ್ಲದೆ । ಕಕ್ಕಸವೆಂಬುದಲ್ಲಿಲ್ಲ ॥
ಸುಕ್ಕುಗುರುಳನೊಳು ಕುಟಿಲತೆಯೆಂಬುದು । ಮಿಕ್ಕ ಜನಗಳೊಳಗಿಲ್ಲ ॥ (68)

ಭಂಗವೆಂಬುದು ತೆರೆಮಾಲೆಯೊಳಲ್ಲದೆ । ಸಂಗರದೊಳಗಿಲ್ಲ ನೃಪರ್ಗೆ ॥
ಸಂಗದೊಳಗೆ ವಿಪರೀತವರ್ತನೆ ಮೋಹ । ನಾಂಗಿಯರೊಳಗಲ್ಲದಿಲ್ಲ ॥ (69)

ಬಡತನ[ವೆಂಬುದು] ಸತಿಯರ ನಡುವಿನೊಳಲ್ಲದೆ । ಪೊಡವಿಯ ಮನುಜರೊಳಿಲ್ಲ ॥
ಜಡತೆ ಜಘನದೊಳು ಮಾಂದ್ಯಮಡದಿಯರ । ನಡೆಯೊಳಲ್ಲದೆ ನಾಡೊಳಿಲ್ಲ ॥ (70)

ಎಲ್ಲಿ ನೋಡಿದರು ದೇವಸ್ವ ಬ್ರಹ್ಮಸ್ವಗ । ಳೆಲ್ಲಿ ನೋಡಿದರು ಧ್ಯಾನಗಳು ॥
ಎಲ್ಲಿ ನೋಡಿದರು ವಾಪೀ ಕೂಪ ನದಿಗಳು । ಸಲೀಲೆಯಿಂದೊಪ್ಪುತಿಹವು ॥ (71)

ಫಲಪುಷ್ಪಪಲ್ಲವ ಶೋಭಿತ ತರುಗಳಂ । ದಲರಂಬ ನಂಕಮಾಲೆಯನು ॥
ಫಳಲನುಗ್ಘಡಿಸುವ ಪೆಣ್ಗೋಗಿಲೆಗಳ । ಬಳಗದಿಂ ಬನಗಳೊಪ್ಪಿಹವು ॥ (72)

ತಾವರೆಯಿಲ್ಲದ ಕೊಳನಿಲ್ಲ ಕಂಪುಳ್ಳ । ಪೂವಿಲ್ಲದ ಲತೆಯಿಲ್ಲ ॥
ಆವಾಗ ಫಲಪುಷ್ಪವಿಲ್ಲದ ತರುವಿಲ್ಲ । ಭಾವಿಪೊಡಾದೇಶದಲ್ಲಿ ॥ (73)

ತಲೆಯೊಳಮೃತ ಕುಂಭಗಳ ಪೊತ್ತು ತಮ್ಮನು । ಸಲಹಿದವರ ಸಂತತಿಯ ॥
ಸಲಹಬೇಕೆಂದು ಸಜ್ಜನ ಕುಲವನು ಪೋಲ್ತು । ನೆಲದೊಳು ತೆಂಗುಗಳಹವು ॥ (74)

ಬೇರಿಂದ ತುದಿಮುಟ್ಟ ಹಣ್ಣಾದ ಹಲಸಿನ । ಸಾರಫಲಕೆ ತುಂಬಿಯೊರಗೆ ॥
ಮಾರನ ದಿಗ್ವಿಜಯದೊಳು ಪ್ರಸ್ಥಾನದ । ಭೇರಿಯ ಧ್ವನಿಯ ಪೋಲ್ತಿಹವು ॥ (75)

ವನಲಕ್ಷ್ಮಿ ಮನಸಿಜ ರಾಜನನಿದಿರ್ಗೊಂಡು । ವನದೊಳು ಪಟ್ಟವ ಕಟ್ಟಿ ॥
ಅನುರಾಗದಿಂದೆತ್ತಿದಾರತಿಗಳ ಪೋಲ್ತು । ನನೆದುಂಬಿ ಚೂತಗಳಹವು ॥ (76)

ಊರ್ವಶಿ ರಂಭೆ ತಿಲೋತ್ತಮೆ ಮೊದಲಾದ । ಸರ್ವವನಿತೆಯರ ಚೆಲ್ವ ॥
ಗರ್ವವ ಭಂಗಿಪ ಗಾಡಿಕಾತಿಯರಾ । ಪುರ್ವರೆಯೊಳಗೊಪ್ಪುತಿಹರು ॥ (77)

ಪೊಂಗಳಸವನೆತ್ತಿ ನೀರನೆರೆವ ಹೆಂಗ । ಳಂಗದ ಲಾವಣ್ಯರಸವ ॥
ಕಂಗಳಂ *ದೀಚಿಪ ಪಥಿಕರು ತಮ್ಮಯ ತೃಷ್ಣೆ । ಹಿಂಗಿತಿಲ್ಲೆಂದು ಪೇಳುವರು ॥ (78)

---

* ದೀಕ್ಷಿಪ

ಬಟ್ಟಬಲ್ಕೊಲೆಗಳ ನಟ್ಟನಡುವೆ ನಟ್ಟ। ದಿಟ್ಟಗಳನು ಕೇಳ್ವಂತೆ ॥
ದಿಟ್ಟದೆಗೆಯುದೆ ವಿಟರು ತಲೆದೂಗುವ। ಕಟ್ಟಾಣಿವೆಂಗಳ ಕಂಡರು ॥ (79)

ಇಂತೆಸೆವಾ ದೇಶದೊಳಗೊಪ್ಪುತಿಸುದು ಭೂ। ಕಾಂತೆಯು ಸಿರಿ ಮುಖದಂತೆ ॥
ಸಂತತ **ಶ್ರೀ ಕಾರೆಕಳ** ವೆಂಬಪಟ್ಟಣ। ಕಂತುರಾಯನ ಪೊಳಲಂತೆ ॥ (80)

ರಾಮಣೀಯಕವಾದ ಮಾಟ ಕೋಟೆಗಳಂದ। ಸೋಮ ಸೂರ್ಯರ ವೀಥಿಯಿಂದ ॥
* ಧಾಮ್ಯ ಹರ್ಮ್ಯಗಳಂದ ಸೌಧಪಂಕ್ತಿಗಳಂದ। ಆ ಮಹಾ ನಗರಿಯೊಪ್ಪಿಹುದು ॥ (81)

ಮರಕತ ಮಣಿ ಶಿಖರದ ಕಾಂತಿ ನಭದೊಳು। [ಪರಿಯೆ] ಸೂರ್ಯನಶ್ವಗಳು ॥
ಹರಿತ ತೃಣಗಳೆಂದು ಮಧ್ಯಾಹ್ನದೊಳಲ್ಲಿ। ಚರಿಸದೆ ನಿಲ್ವರೇನೆಂಬೆ ॥ (82)

ಹಿರಿಯಂಗಡಿ ಬೆಟ್ಟದಂಗಡಿ ಸೊಬಗಾಂತ। ಕೆರೆಯು ಕೋಡಿಗಳೆಂಬ ಪೆಸರ।
ಧರಿಸಿ ಮೂಲೋಕದರಸುಗಳ ಪಟ್ಟಣ। ಸ್ಥಿರವಾಗಿ ಕೇಳಿಯುಂತಿಹವು ॥ (83)

ಪಟ್ಟಸಟ್ಟಾವಳ ಚೀನಿ ಚೀನಾಂಬರ। ಕಟ್ಟಿದ ಝಲ್ಲಿ ಪತಾಕೆ ॥
ಕಟ್ಟಾಣಿ ಮುತ್ತು ರತ್ನದ ಕುಚ್ಚು ಮಣಿಮಯ। ಕುಟ್ಟಿಮದಿಂದೊಪ್ಪುತಿಹುದು ॥ (84)

ಹಿರಿಯಂಗಡಿ ಬೆಟ್ಟದಂಗಡಿಯೊಳು ಭವ್ಯ। ವರಪುಂಡರೀಕರ ಕೇರಿ ॥
ಕೆರೆಯು ಕೋಡಿಯೊಳು ನಾನಾಪ್ರಜೆಗಳಕೇರಿ। ಕರಚೆಲುವಾಗಿ ರಂಜಿಪ್ಪುದು ॥ (85)

ಸೊಗಸುವ ಬೆಟ್ಟದಂಗಡಿಯನು ಶ್ರೀಪಾಂಡ್ಯ। ನಗರಿಯೆಂದೆಂಬರು ಬುಧರು ॥
ಅಗಣಿತ ಮಂತ್ರಿ ಮಾಂಡಲಿಕರ ಗೃಹವಲ್ಲಿ ॥ ಮುಗಿಲ ಮುಟ್ಟುವದೇನನೆಂಬೆ ॥ (86)

ಅವರೊಳವಾಂತರ ಕೇರಿಗಳಹವಲ್ಲಿ। ವಿವರಿಪರೆನಗಳವಲ್ಲ ॥
ಕವಿತೆಯೊಳಗೆ ಕೆಲವನು ಪೇಳದಿದ್ದರೆ। ಸುವಿವೇಕಿಗಳಿಗೆ ಮೆಚ್ಚಲ್ಲ ॥ (86)

ಮಣೆಗಾರರ ಕೇರಿ ಕಂಚುಗಾರರ ಕೇರಿ। ಗಣಿಕೆಯರ ಕೇರಿ ಕೇರಿಗಳು ॥
ಗಣಕರ ದಂಡನಾಯಕ ಸಾಮಂತರ। ಗಣನೆಯಿಲ್ಲದ ಕೇರಿಗಳು ॥ (88)

ವಾರಾಶಿಯು ಕುಂಭಜನೀಂಟಲದರೊಳು। ತೋರುವ ರತ್ನರಾಶಿಗಳು ॥
ಸಾರವೊ ಯೆಂಬಂತಾಪುರದೊಳು ಮಣಿ। ಗಾರರಕೇರಿಯೊಪ್ಪಿಹವು ॥ (89)

ಕಟ್ಟಾಣಿಮುತ್ತನು ಕೈಯೊಳು ಪಿಡಿಯಲು। ಬಿಟ್ಟಿಯು ಬೆಳಗಳಿ ಪೋಳೆಯೆ ॥
ಕೊಟ್ಟಧನವನು ತೆಗೆಮುಕೊಂಡು ವಿಸ್ಮಯ। ಬಟ್ಟೊರ್ವಮುಗುದೆಯ್ದಿದಳು ॥ (90)

ಒಮ್ಮೆ ನೋಡಲು ಪದ್ಮರಾಗವ ರುಚಿಮ। ತ್ತೊಮ್ಮೆ ನೋಡಲು ನೀಲ ರತ್ನ ॥
ಒಮ್ಮೆ ನೋಡಲು ಮುತ್ತಿನ ಮಣಿಯಾಯ್ತೆಂದು। ಗಮ್ಮನೆಯಿದ್ದಳಾ ಬಾಲೆ ॥ (91)

ಅಂಬರದೊಳಗಾಧಾರವಿಲ್ಲೆಂದು ಕು। ಟುಂಬ ಸಹಿತ ಚಂದ್ರರೆಲ್ಲ ॥
ಇಂಬಾದ ಕಂಚುಗಾರರ ಕೇರಿಯೊಳಗೆ ಬೀ। ಡಂಬಡಿಸಿದಂತೊಪ್ಪುತಿಹವು ॥ (92)

ಬೇಳುವೆಯನು ಮಾಡಿ ಕುಂಟಣಿಯರ ಕೈಯ। ಬಾಳುವ ವಿಟರರ್ಥವನು ॥
ಗೋಳುಗೊಳಿಪ ಸೂಳೆಯರಿಂದ ಸೊಬಗಾದ। ಸೂಳೆಗೇರಿ ಗಳೊಪ್ಪುತಿಹವು ॥ (93)

ಒಂದರೆ ನಿಮಿಷ ನಿನ್ನನು ಕಾಣದಿದ್ದರೆ। ನಿಂದಿರ ದೆನ್ನಯ ಪ್ರಾಣ ॥
ಯೆಂದಲ್ಲಿ ರಾಜವಿಟರನು ವಿಡಂಬಿಸಿ। ಮುಂದುಗೆಡಿಪರು ಸೂಳೆಯರು ॥ (94)

* ಧಾಮ

ಲೆತ್ತಪಗಡೆ ಚತುರಂಗವನಾಡುತ । ಹೊತ್ತುಗಳೆದು ರಾಜವಿಟರು ॥
ವೊತ್ತವ ಸೊಬಗಿಂದ ಸೋಲಿಸಿ ವಶವಾಳ್ಪ । ವ್ರೊತ್ತೆವೆಂಗಳ ತಂಡವಿಹವು ॥ (95)

ಬೆಲೆವೆಣ್ಣುಗಳ ಸಂಗವಿಲ್ಲದ ನರರಿಗೆ । ಕಲೆಯು ಜಾಣ್ಮೆಗಳಿಲ್ಲವೆಂದು
ಛಲವ ಪುಟ್ಟಿಸಿ ರಾಜವಿಟರನು ಸೆರೆಗೆಯ್ವ । ಬೆಲೆವೆಣ್ಣುಗಳ ತಂಡವಿಹವು ॥ (96)

ಕಲೆಯು ನೆಲೆಯನರಿಯುವ ಪುರುಷರ ಸಂಗ । ಸಲೆಜಾಣೆಯರಿಗದು ಭಂಗ ॥
ನೆಲೆಯಾಗಿ ನಿಲ್ಲದವರೊಳಂತರಂಗವೆಂ । ದೊಲಿದೊರ್ವವೇಶ್ಯಾಡಿದಳು ॥ (97)

ರೂಪಿದ್ದರೇನು ಪುರುಷರೊಳು ಸರಸ ಸ । ಲ್ಲಾಪ ಗುಣಗಳಿಲ್ಲದನಕ ॥
ಕಾಪುರುಷರು ಅವರೆಂದದು ನುಡಿದಳೊರ್ವ । ರೂಪುಜೀವೆ ಸಖಿಯೊಡನೆ ॥ (98)

ಗುಣರೂಪು ಯೌವನ ಜಾಣ್ಮೆ ಮುಂತಾದುವು । ಗಣಿಕೆಯರಿಗೆ ಮುಖ್ಯವಲ್ಲ ॥
ಪಣವುಳ್ಳ ಪಾಮರನಾದರವನು ಕಾಮ । ಗಣೆಯೆಂದಳೊರ್ವಕೆಳದಿಯು ॥ (99)

ಸುರಗಿ ಸೇವಂತಿಗೆ ವೊಲ್ಲೆ ಮಲ್ಲಿಗೆ ಜಾಜಿ । ಯಿರವಂತಿಗೆ ವೊದಲಾದ ॥
ಪರಿಮಳಸುವ ಪೂಮಾಲೆಯು ಕಟ್ಟುವ । ತರುಣಿಯರಲ್ಲಿ ವೊಪ್ಪಿಪರು ॥ (100)

ಎಳಪರೆಯುದ ವಿಟಜನರಿಗೆ ಪೂಮಾಲೆ । ಗಳನೀವ ನೀರೆಯೊಪ್ಪಿದಳು ॥
ಅಲರಂಬನ ಪಾಶದುರುಳಿಕ್ಕಿ ವಿಟರನು । ಯೆಳೆದು ಕೈವಶವಮಾಳ್ಪಂತೆ ॥ (101)

ಕಂಕಣ ಝಣ ಝಣರೆನಲಿಸಿ ನಡುವಿನ । ಕಿಂಕಿಣಿ ಕಿಣಿಕಿಣಿರೆಲನಲು ॥
ಕಂಕಿತ ಕುಚಗಳು ಕುಂಕುಮ ಗಂಧವ ತೇವ । ಪಂಕಜಾಕ್ಷಿಯರೊಪ್ಪಿದರು ॥ (102)

ಭೂದೇವತೆಯಾ ನಗರದ ಚೆಲ್ವನು । ಭೇದಿಸಿ ನೋಳ್ಪೆನೆಂದೆನುತ ॥
ಆದರದಿಂ ಬಹುನೇತ್ರವ ಪಡೆದಂ । ತಾಗಾಧಪದ್ಮಾಕರವಿಹುವು ॥ (103)

ಪದ್ಮಾಕರದ ಕಾಂತಿ ನಭದೊಳಗೊಪ್ಪುವ । ಪದ್ಮಬಂಧುವಿನಂತೆ ಪೊಳೆಯೆ ॥
ಪದ್ಮಾಕರದೊಳಗನುದಿನ ವಿಕಸಿತ । ಪದ್ಮಗಳೊಪ್ಪುತಲಿಹವು ॥ (104)

ಸುರತರುಗಳು ನಾರಿಕೇಳವೃಕ್ಷಂಗಳ । ಪರಿಯೊಳಗಮೃತವ ಧರಿಸಿ ॥
ನರರ ರಕ್ಷಿಸಲೆಂದು ಬಂದಂತೆ ತೆಂಗಿನ । ಮರಗಳಾನೆಲದೊಳೊಪ್ಪಿಹವು ॥ (105)

ಆ ಮಹಾಕ್ಷೀರಸಮುದ್ರವೆ ಗುಮ್ಮಟ । ಸ್ವಾಮಿಯ ಮಜ್ಜನಕೆಂದು ॥
ಈ ಮಹಿಯೊಳು ಬಂದು ನಿಂದುದೊ ಯೆಂಬಂತೆ । ರಾಮಸಮುದ್ರವೊಪ್ಪಿಹುದು॥ (106)

ಕ್ಷೀರಸಮುದ್ರ ಬಂದುದ ಕಂಡಲ್ಲಿರ್ದ । ನಾರಾಯಣನೈತಂದು ॥
ಸೇರಿ ಅನಂತಶಯನನಾಗಿರ್ದನು । ರಾರಾಜಿಪವರ ತಡಿಯೊಳು ॥ (107)

ನೂತನ ರಾಮನಾದೊ [ರ] ರೆ ಕಲಿಯುಗದೊಳ । ಗಾತನ ಪಟ್ಟದ ರಾಣಿ ॥
ಸೀತೆಯೆಂಬುದ ಕೇಳ ಹನುಮಂತನಲ್ಲಿಯೆ । ಪ್ರೀತಿಯಿಂ ನಿಂದನೇನೆಂಬೆ ॥ (108)

ಜಿನಚೈತ್ಯಾಲಯಗಳ ಶಿಖರದ ಮೇಲೆ । ಮಿನುಗುವ ಚಿನ್ನದ ಕಲಶ ॥
ಇನಬಿಂಬ ಪಲ್ಲಟ ರೂಪಂತ ತೋರ್ಪವು । ಮನವೊಲ್ದು ನೋಳ್ಪರ ಕಣ್ಗೆ ॥ (109)

ಮೂರು ನೆಲೆಗಳಿಂದ ಮೂರು ಲೋಕದ ಚೆಲ್ವ । ತೋರಿಸುವಂತೆ ಭವ್ಯರಿಗೆ ॥
ಬೀರು ಸೊಬಗನು ನೇಮಿಜಿನೇಶನಾ । ಗಾರವೊಪ್ಪಿಹುದನೇನೆಂಬೆ ॥ (110)

ಮುತ್ತು ಮಾಣಿಕ ನೀಲ ಪಚ್ಚೆ ಪವಳ ಚಿನ್ನ । ದುತ್ತಮ ಜಿನಬಿಂಬದಿಂದ ॥
ಸುತ್ತಿದ ಕೋಟೆ ಚಿನ್ನದ ಕಳಶದಿ ಪೆಂಪು । ವೆತ್ತಿಹುದಾಜಿನಗೇಹ ॥ (111)

ಶ್ರೀನೇಮಿಜಿನಪನ ಚೈತ್ಯಗೃಹದ ಮುಂದೆ । ಭಾನುಬಿಂಬವನು ಚುಂಬಿಸುತ ॥
ಮಾನಸ್ತಂಭವಿಹುದು ಮಿಥ್ಯಾವಾದಿಯ । ಮಾನವ ಸ್ತಂಭಿಸುವಂತೆ ॥ (112)

ತಳಚಪ್ಪೆ ಪಾದುಕ ಪಂಚಾಂಗ ಮೇಖಲೆ । ವಿಲಸಿತ ಬಂಧಗಳಿಂದ ॥
ಶೊಳೆವೆಂಟೆರೆಂಟೆಸೆವ ದಾರೆಗಳಿಂದ ಸಂ । ಕುಳದಿಂದ ಸೊಬಗನಾಂತಿಹುದು (113)

ಭಾರಿಯ ಮಣಿಘಂಟೆ ಕಿರುಘಂಟೆಗಳಿಂದ ಶೃಂ । ಗಾರವೆತ್ತಿಹದೇವಕೂಟ ॥
ಚಾರುಚತುರ್ಮುಖ ಜಿನಬಿಂಬ ಚಿನ್ನದ । ದಾಂಕಳಸದಿಂದೊಪ್ಪಿಹುದು ॥ (114)

ಎಂದೆಂದು ಕಾಣದ ಮಾನವರಿಗೆ ಯೋಗ । ತಂದವ ತೋರಿಸಲೆಂದು ॥
ನಂದೀಶ್ವರ ದ್ವೀಪದ ಮಾನಸ್ತಂಭ ಬಂದು । ನಿಂದಂತೊಪ್ಪುತಿಹುದು ॥ (115)

ಅಂದು ಸಮುದ್ರವ ಮಥಿಸಲು ಸುರರೆಲ್ಲ । ತಂದಿಟ್ಟಮಂದರಗಿರಿಯು ।
ಅಂದದಿಂದೊಪ್ಪುವ ಕೆರೆಯ ಮಧ್ಯದ ಚೈತ್ಯ । ಮಂದಿರವಿಹುದಾನೇನೆಂಬೆ ॥ (116)

ಜಿನರಾಸ್ಥಾನ ಮಂಟಪವನು ಭವ್ಯರಿ । ಗನುದಿನ ತೋರಿಸಲೆಂದು ॥
ಧನದ ನಿರ್ಮಿಸಿದ ಸಮವಸರಣವಪೋಲ್ತು । ಜಿನಚತುರ್ಮುಖ ಗೃಹವಿಹುದು ॥ (117)

ಮಂದರಗಿರಿ ಗೋಮಟೇಶನ ಚೆಲ್ವನೆಂ । ದೆಂದು ನೋಡಬೇಕೆಂದು ॥
ಮುಂದೆ ನಿಂದುದೊಯೆಂಬಂತೆ ಚತುರ್ಮುಖ । ಮಂದಿರವಿಹುದು ಚೆಲ್ವಿಂದ ॥ (118)

ಉಭಯದೇಶಾಧಿಪ ಭೈರವರಾಯನು । ತ್ರಿಭುವನ ತಿಲಕವೆಂಪೆಂಬ ॥
ಶುಭನಾಮವನಿಟ್ಟದನು ನಿರ್ಮಿಸಲದು । ನಭವನು ಚುಂಬಿಸುತಿಹುದು ॥ (119)

ಧನದಗೆ ಪರಪತ್ತಿಯನು ಕೊಟ್ಟು ತೆಕ್ಕೊಂಬ । ಧನಿಕರ ಪಟ್ಟಣದೊಳಗೆ ॥
ಮನೆ ಮನೆ ತಪ್ಪದೆಯಿಹರು ನೀತಿಯಿಂದ । ರ್ಥವನು ಗಳಸುವ ಪುಣ್ಯಾಯುತರು ॥ (120)

ಚಿನ್ನವನೊರೆಯದೆ ಬಣ್ಣವ ಪೇಳುವ । ಚಿನ್ನವರದರಲ್ಲಿಹರು ॥
ತನ್ನವರನ್ಯರೆಂದೇ ಬೆಲೆಕಟ್ಟುವ । ರಿನ್ನೇನಪೇಳ್ವೆನಾ ಸೊಬಗ ॥ (121)

ಬಲಭದ್ರನನೇಕ ಕುಂಡಲಕೆ ಜೋಡನು ತೋರ್ಪ । ಜಲಜನಾಭನ ಕೌಸ್ತುಭಕೆ ॥
ನೆಲೆಗಂಡು ಬೆಲೆಯ ಪೇಳುವ ಆಣಿಗಾರರಾ । ನೇಡೊಳಗೊಪ್ಪುತಲಿಹರು ॥ (122)

ಆಹಾರ ದಾನ ವಭಯ ದಾನ ಭೈಷಜ್ಯ । ದಾನ ಶಾಸ್ತ್ರದಾನಗಳ ॥
ಆಹ್ಲಾದದೊಳು ಮಾಳ್ಪ ಭವ್ಯಜನಂಗಳ । ಮೋಹರವಿಹುದೇನನೆಂಬೆ ॥ (123)

ದಾನಿಗಳಾಗಿಯಾಮೋದವಿಲ್ಲದ ಧರ್ಮ ಸಂ । ದಾನಿಗಳಾಗಿಯು ಕೊಲೆಯ ॥
ಏನೆಂದು ನನೆಯದವರ ಗುಣಂಗಳ ನಿ । ನ್ನೇನೆಂದು ಬಣ್ಣಿಪೆ ನಾನು ॥ (124)

ವಿನಯ ವಿತರಣ ವಿವೇಕ ಸಂಪನ್ನರು । ಜಿನಪೂಜೆಯೊಳಗತಿರ್ಯುತರು ॥
ಅನುದಿನ ವ್ರತಶೀಲ ಚಾರಿತ್ರರತ್ನ ಭೂ । ಷಣರನುಪಮಭವ್ಯ * ರಿಹರು ॥ (125)

ಸಿರಿವಂತೆ ಕಾಂತನ ಪರಸತಿಯರಿಗಿತ್ತ । ಳುರದೊಳು ತಾನಿರುತಿರ್ದ ॥
ಧರೆಯೊಳವಳು ನಮಗೆಣೆಯಿಲ್ಲವೆನುತಾ । ಪುರದ ನಾರಿಯರು ಜರೆವರು ॥ (126)

---

* ರಲ್ಲಿಹರು

ಕರಿಚರ್ಮವನುಟ್ಟು ರುಂಡವಮಾಲೆಗಳನು । ಧರಿಸಿ ಕಪಾಲದೊಳುಂಬ ॥
ತಿರುಕವಿರೂಪಾಕ್ಷ ಗೋಪತಿಯಗಿರಿಜೆ ಸಮ್ಮ । ಸರಿಯುಯೆಂದವಳ ಜರೆವರು ॥ (127)

ಪರಸತಿಯರ ಮೆಟ್ಟಿ ಮೊರೆ ಧರ್ಮವ ಜಿಟ್ಟು । ತಿರುಗುವಜನ ರಾಣಿಯೆನಿಪ ॥
ಸರಸತಿ ನಮಗೆಣೆಯಲ್ಲವೆಂದಾಪುರ । ವರದ ಸತಿಯರು ನಗುವರು ॥ (128)

ಮುಟ್ಟಲಿ ಗಂಡು ಮಕ್ಕಳನು ಹಡೆಯದಿರ್ದ । ಹುಟ್ಟು ಬಂಜೆಯರೆಂದೆನುತ॥
ಕಟ್ಟಾಣಿ ಸಗ್ಗದ ಹೆಂಗಳೆಂದಾನಾಡ । ಹೆಟ್ಟುಗೆಯರು ನಗುತಿಹರು ॥ (129)

ಅರೆಗಂಗಳ ಮುಚ್ಚಿ ಸುರತಾಂತ್ಯ ಸುಖವನು । ಪರಿಪರಿಯೊಳಗನುಭವಿಪ ॥
ತರುಣಿಯರೆಮಗಾ ಬಿಡುಗಣ್ಣ ಪೆಣ್ಗಳ । ಸರಿಯೆನ್ನ ಬಹುದೆಬಲ್ಲವರು ॥ (130)

ದಾನಪೂಜೆಗಳ ಶೀಲೋಪವಾಸಂಗಳ । ಯೋನೆಂದರಿಯರಿದೆ [ಸಂ] ಭೋಗ ॥
ಹೀನರೆನಿಪ ಭೋಗ ಭೂಮಿಯ ಪೆಣ್ಗಳ । ನ್ನೀನಾಡಪೆಣ್ಗಳಗಣೆಯು ॥ (131)

ಉತ್ತಮ ಮುನಿಗಳಗಾಹಾರ ದಾನವ । ನಿತ್ತು ಭೋಗೋಪ ಭೋಗಗಳ ॥
ಉತ್ತರ ಭವದೊಳು ಪಡೆಯಲರಿಯದು । ನ್ಮತ್ತೆಯವರಿಗೆ ಸರಿಯೆ ॥ (132)

ಸೀತೆ ಗುಣವತಿ ರುಕ್ಮಿಣಿ ಮೊದಲಾದ ವಿ । ಖ್ಯಾತ ನಾರಿಯರನು ಪೋಲ್ವ ॥
ನೀತಿ ನಿಪುಣೆಯರಾ ಪುರದ ಶ್ರಾವಕಿಯರ । ರೀತಿಯನೇನೆಂದು ಪೇಳ್ವೆ ॥ (133)

ಇಂತೊಪ್ಪುವಾನಗರದ ಮಧ್ಯದೊಳಗೆ ಭೂ । ಕಾಂತನ ರಾಜ ಮಂದಿರವು ॥
ಕಂತುವಿನರ ಮನೆಯಂತೊಪ್ಪುತಿಹುದ ನಾ । ನೆಂತು ಬಣ್ಣಿಪೆನದನು ॥ (134)

ಪಳುಕಿನ ಭಿತ್ತಿಯೊಳೆಸವ ಪದ್ಮರಾಗದ । ತೊಲೆ ಮರಕತ ಮಣಿ ಗಂಬ ॥
ಕುಲಿಶದ ಬೋದಿಗೆ ಹರಿನೀಲ ಮಣಿಮಯ । ನೆಲಗಟ್ಟನಿಂದೊಪ್ಪುತಿಹುದು ॥ (135)

ಭೋಜನ ಶಾಲೆ ಆಯುಧ ಶಾಲೆ ಸೊಬಗಿಂದ । ರಾಜಿಪ ನಾಟಕಶಾಲೆ ॥
ಶ್ರೀ ಜಿನಗೇಹ ಮಜ್ಜನ ಶಾಲೆಯಿಂದ । ರಾಜಮಂದಿರ ವೊಪ್ಪುತಿಹುದು ॥ (136)

ಸಣ್ಣಚಿರಣಿ ಗೆಲಸುಗಳಿಂದ ಸೊಬಗಾಂತ । ಬಣ್ಣದ ಚಾವಡಿಯಿಹುದು ॥
ಕಣ್ಣೆತ್ತಿ ನೋಡುವ ಜನರ ಕಣ್ಮನವನು । ತಣ್ಣನೆ ತಣಿಪುವಂತಿಹುದು ॥ (137)

ಅದರಿಂದ ಮುಂದೆ ನಾಟಕ ಶಾಲೆ ಮದನನ । ಸದನದಂತೊಪ್ಪುತಲಿಹುದು ॥
ಅದರೊಳು ಸಗ್ಗದ ಸುದತಿಯರನು ಪೋಲ್ವ । ಮದವತಿಯರು ನರ್ತಿಸುವರು ॥ (138)

ಅದರ ಮುಂದಿಹುದು ಸಿಂಹಾಸನ ಮಂಟಪ । ಮದನನಾ ಸ್ಥಾನವೆಂಬಂತೆ ॥
ಅದರೊಳು ನಾನಾ ರತ್ನಖಚಿತವಾದ । ವಿದಿತ ಸಿಂಹಾಸನವಿಹುದು ॥ (139)

ಪಟ್ಟೆಯ ಮೇಲ್ಗಟ್ಟು ಮುತ್ತು ರತ್ನದ ಕುಚ್ಚು । ದಿಟ್ಟಿಗಾಶ್ಚರ್ಯ ಪುಟ್ಟಿಸುತ ।
ಗಟ್ಟಿಚಿನ್ನದ ಪುತ್ಥಳಿಗಳಿಂದಾಸಿಂಹ । ವಿಷ್ಟರಗಣ್ಗೆ ರಂಜಿಪುದು ॥ (140)

ಅದರಿಂದ ಮುಂದೆ ದಿವಾಣ ಸಗ್ಗದ ವೊತ್ತು । ಮೊದಲ ವಿಮಾನವ ಮುಟ್ಟಿ ॥
ಥಳಥಳಿಸುವ ಚಿನ್ನದ ಕಳಸಗಳಿಂದ । ಉರುಸೊಬಗಾಂತೊಪ್ಪುತಿಹುದು ॥ (141)

ಸುತ್ತಲು ರಾಣಿವಾಸಿಯರರ ಮನೆಗಳ । ಮೊತ್ತವಿಹುದು ಸೊಬಗಾಂತು ॥
ಉತ್ತಮ ಸುಕುಮಾರರರಮನೆ ನೃಪಗೃಹ । ದೊತ್ತಿನೊಳಹವು ಚೆಲ್ವಿಂದ ॥ (142)

ಜಾಂಬೂನದ ಮಯವಾದ ಮದಿಲುಸುತ್ತ । ಲಂಬರವನು ಚುಂಬಿಸುತ
ಜಂಬೂದ್ವೀಪದ ವಜ್ರವೇದಿಕೆಯೊ ಯಿ । ದೆಂಬಂತೆ ರಂಜಿಸುತಿಹುದು ॥ (143)
ರಾಜಾಂಗಣವಮುಂದೆ ರಾಜರಾಜರಿಗೆಲ್ಲ । ಸೋಜಿಗವನು ಪುಟ್ಟಿಸುತ ।
ರಾಜಿಸುತಿಹುದು ಮುಗಿಲಸುತ್ತ ಕಾಪಿನ । ತೇಜದೊಳೂರ ಗೃಹವಿಹವು । (144)
ಯಾಕೆನ್ನು ಬಹುಮಾತು ನಾಕಲೋಕವೆಬಂದು । ಶ್ರೀಕಾರಕಳದಾಕೃತಿಯು ॥
ತಾ ಕಂಡುಧರಿಸಿತೊಯೆಂಬಂತೆ ಲೋಕ ಕ । ನೇಕವಿಸ್ಮಯವ ಪುಟ್ಟಿಪುದು ॥ (145)
ಇದು ಶ್ರುತಸಾಗರ ಮುನಿರಾಯ ಶಿಷ್ಯ । ಚಮರ ಚಂದ್ರನು ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯೊ । ಳ್ಮೊದಲಸಂಧೀ ಶುಭವಸ್ತು ॥ (146)

(ಮೊದಲನೆಯ ಸಂಧಿ ಸಮಾಪ್ತಂ)

## ಎರಡನೆಯ ಸಂಧಿ-

ಆದಿ ಜಿನೇಶನ ಸುಕುಮಾರನಣ್ಣನೊ । ಳ್ಕಾದಿಗೆಲಿದ ಬಲುಧೀರ ॥
ಮೇದಿನಿ ಜನಕೆ ಮಂದಾರ ನಮ್ಮನು ಕಾಯೊ । ಆದರದಿಂ ಗುಮ್ಮಟೇಶ ॥ (1)
ಅದನಾಳ್ವ ನೂತನ ಮದನ ಸದ್ಗುಣಗಣ । ಸದನ ಸುಧಾಕಾ[ನ]ವನ ॥
ಕದನದೊಳದಿರಾಂತ ವೈರಿ ಮಸ್ತಕ ಶೂಲ । ಚದುರ ಶ್ರೀ ಪಾಂಡ್ಯ ನೃಪಾಲ ॥ (2)
ಉತ್ತರ ಮಧುರೆಯ ದೊರೆಗಳ ಕುಲದೀಪ । ಚಿತ್ತಜ ಸನ್ನಿಭ ರೂಪ ।
ಚಿತ್ತರವಾದ ಬಿರುದಿನ ಕಲಾಪರಾ । ಜೋತ್ತಮ ಶ್ರೀ ಪಾಂಡ್ಯ ಭೂಪ ॥ (3)
ಅರಿರಾಯ ಗಜ ಗಂಡಭೇರುಂಡ ಗರ್ವಿಪ । ಪರರಾಯಗಿರಿ ವಜ್ರದಂಡ ॥
ತರುಣಿಯರಿಂಗಿ[ತ್ರ]ವರಿವ ಪ್ರಚಂಡನು । ಜ್ವರಿಪ ತಿಮಿರ ಮಾರ್ತಾಂಡ ॥ (4)
ಉರದೊಳು ಸಿರಿ ಭುಜದೊಳು ವೀರಲಕ್ಷ್ಮಿಯು । ಸ್ಥಿರವಾಗಿ ನಿಂದುವ ಕಂಡು ॥
ವರಕೀರ್ತಿ ಲಕ್ಷ್ಮಿಯಾಲಿಂಗನ ಕವಕಾಶ । ದೊರೆಯದೆ ದೂರದೊಳಹಳು ॥ (5)
ಆತನ ರೂಪಿಂಗೆ ಸೋಲದ ಸತಿಯರ್ಗೀ । ಭೂತಳದೊಳಗಿಲ್ಲವೆನಲು ॥
ಪ್ರೀತಿಯಿಂದವನ ನೊಡಗೂಡಿದ ಸತಿಯರ । ರೀತಿಯ ನೇನೆಂದು ಪೇಳ್ವೆ ॥ (6)
ಕೊಟ್ಟ ಭಾಷೆಗೆ ತಪ್ಪನು ಸಮರದೊಳು ಹಿ । ಮ್ಮೆಟ್ಟನು ಪರನಾರಿಯರನು ॥
ದಿಟ್ಟಿದೆರೆದು ನೋಡನು ಕೆರಮಾಸೆಯ । ಪಟ್ಟವರ್ಧನ ಪಾಂಡ್ಯರಾಯ ॥ (7)
ಶ್ರೀ ಸೋಮ ಸೂರ್ಯ ಕುಲೋತ್ತಂಸ ಜಗದೊಳು । ಮಾಸದ ಕೀರ್ತ್ಯವತಂಸ ॥
ವಾಸಿಯಿಂದಿ[ದಿ]ರಾದ ವೈರಿಕುಲಧ್ವಂಸ । ನಾಸಿಗನಾ ರಾಜಹಂಸ ॥ (8)
ಸುರಪತಿ ಶತಮನ್ಯು ವಹ್ನಿತನವವಿನಿತೆ । ಪರಿಕಿಸೆಯಮ ದಂಡಧರನು ।
ನಿರುತಿಜ ರಾಕ್ಷಸ ವಾರುಣಿ ಶಕ್ತನ । ಮರುತ ಚಂಚಲನು ವಾಯವ್ಯ ॥ (9)
ಸಿರಿಯಿದ್ದರೇನು ಧನದ ಕುಬೇರಶಂ । ಕರ ಪಶುಪತಿಯಂದವನು ॥
ಪಂಕಿಸಿ ಬಿಟ್ಟ ಮಹಾ ಲಕ್ಷ್ಮೀಯವನೊಳು । ಸ್ಥಿರವಾಗಿ ನಿಂದಳೇನೆಂಬೆ ॥ (10)
ಅರಿರಾಯರ ಗಂಡ ಡಾವಣಿಯೆಂದೆಂಬ । ಬಿರುದಿನ ಬಲು ಮೊನೆಗಾರ ॥
ದೊರೆರಾಯ ವೀರ ಕುಮಾರ ಪಾಂಡ್ಯೇಂದ್ರಗೆ । ಸರಿಯಹ ದೊರೆಗಳನ್ನುಂಟೆ ॥ (11)
ನವನಾಟಕಶಾಲೆಯ ರಾಯರೆನಿಪಭ । ನವಬಿರುದಾಂತ ನಿಶ್ಶಂಕ ॥
ಕವಿಜನ ಕೈರವ ರತ್ನ ಶಶಾಂಕನೆಂ । ದವನ ಬಣ್ಣಿಪುದೀ ಲೋಕ ॥ (12)

ಆತನ ವೀಳ್ಯದ ರಸಸೋಂಕೆ ಮೈಬಣ್ಣ । ನೂತನವರ್ಣ ವಪ್ಪಂತೆ ॥
ನೂತನ ವಹುದಾ ದೊರೆಯು ಸಮ್ಯಕ್ತ್ವದ । ರೀತಿಯನೇನೆಂದು ಪೇಳ್ವೆ ॥ (13)

ನಾನಾಯುಜ ಕಾಂಭೋಜ ಬಾಹ್ಲಿಕವೆಂಬ । ನಾನಾತೆರದ ಜಾತ್ಯಶ್ವ ॥
ಭಾನು ಬಿಂಬದ ಕುದುರೆಗಳ ಧಿಕ್ಕರಿಸುತ । ಆ ನರನಾಥ ಗೊಪ್ಪಿಹವು ॥ (14)

ದಿಗ್ಗಜಗಳೊಳು ಕಾದುವೆವೆಂದು ತಮ್ಮಯ । ನಿಗ್ಗವನು ಕೊಡುತಿರ್ಪ ॥
ಸಗ್ಗದಾನೆಗೆ ಸರಿಮಿಗಿಲೆನಿಸುವ ಕಜ । ವ್ರೊಗ್ಗಿಹವಾ ನೃಪನೊಳಗೆ ॥ (15)

ಆನೆಯು ಸಾಲೆ ಕುದುರೆಗಳ ಸಾಲೆಗ । ಳಾನರನಾಥ ಸಾಲಯುವ ॥
ಏನೆಂಬೆನೆಡಬಲದೊಳ ಗೊಪ್ಪುತಿಹವ । ತ್ಯಾನಂದವನು ಪುಟ್ಟಿಸುತ ॥ (16)

ಮಂತ್ರಿ ಪುರೋಹಿತ ಕರಣಿಕ ಗಣಕನು । ಮಂತ್ರಪಾದಿಗಳು ಭೈಷಜ್ಯ ॥
ತಂತ್ರಿಗಳಂದಾ ನೃಪನೊಪ್ಪುತಿಹ ತಳ । ತಂತ್ರದ ಮಾರ್ಬಲಗೂಡಿ ॥ (17)

ಹರಿಯನಂದಕೆ ಸುರಪತಿಯ ವಜ್ರಾಯುಧ । ಹರನ ತ್ರಿಶೂಲಗಳವನಾ ॥
ಕರವಾಳಗೆಣೆಯಲ್ಲವೆನೆಯುವಗೆ ಸಂ । ಗರದೊಳಗಿದಿರಹರಾರು ॥ (18)

ಹರಿವ ಹಾವಾದರು ಉರಿವ ಕಿಚ್ಚಾದರು । ನರನಾಥ ನಾಣೆಯೆಂದೆನಲು ॥
ಹರೆಯದೆ ಉರಿಯದೆ ನಿಂತಿಕವೆನೆ ಮಿಕ್ಕ । ಧರಣಿಪಾಲಕರ ಮಾತೇನು ॥ (19)

ತುರಗವ ನೇರಿ ದಾರೆಗಳಂದ [ತೋರಿಪ ?] । ಪರಿಪರಿ ವಿತಾಯದಿಂದ ॥
ತಿರುಗಿಸುವರು ಗತಿಯಿಂದ ದುವ್ವಾಳಿಪ । ನರನಾಥ ಬಾಹ್ಯ ವೀಥಿಯೊಳು ॥ (20)

ಮಾಡ ಸನ್ನೆದೋರಿ ದುವ್ವಾಳಿಸಿ ರಿಪುಗಳ । ಗಡಿಮುಟ್ಟದಾಳ ಮಾಡುವನು ॥
ನಡನಡ ನಡುಗಿ ಮನ್ನೆಯರೆಲ್ಲ ಕಪ್ಪವ । ಕೊಡುವರಾ ಪೊಡವಿ ಪಾಲಕಗೆ ॥ (21)

ಆನೆಯನೇರಿ ಅಂಕುಶವಾಂತು ಕರದೊಳು । ತಾನಮರೇಂದ್ರ ನಂದದೊಳು ॥
ನಾನಾ ವಾದ್ಯ ಸೂಳ್ಳೈಕೆ ಮುಂಗಡೆಯೊಳು । ಆನರನಾಥ ನೈದುವನು ॥ (22)

ತುರಗವ ಜೋಡಿಸಿ ಕಟ್ಟಿದ ರಥದೊಳು । ತರಣಿಮಂಡಲವಂತೆ ತಾನು ॥
ಬರೆಕಂಡು ಕಾಣಿಕೆಗಳ ಕೊಡೆ ಪೌರರು । ತರಿಸಿ ವೀಳ್ಯವ ಕೊಡಿಸುವನು ॥ (23)

ಏನು ಕಾರಣ ಬಂದಿರಿಮ್ಮ ಕಾಪ್ಪರೆ ನಿಮ । ಗೇನು ಬೇಸರು ಪೇಳರೆಂದು ॥
ತಾನಲ್ಲಿ ರಥವನು ನಿಲಿಸಿ ಮನ್ನಿಸುವನು । ದೀನಾನಾಥರ ಕಂಡು ॥ (24)

ಮುಂದೆ ಕಾಲಾಳು ಗಜಗಳೆಯ್ದುತಿರೆ ತನ್ನ । ಹಿಂದೆಡೆ ಬಲದೊಳು ತುರಗ ॥
ಸಂದಣಿಸುತ ಬರೆ ಕಟ್ಟಿಗೆಯರು ಜೋ । ಯೆಂದು ಬಾಗಲನು ಮಾಡುವರು ॥ (25)

ಕೇರಿ ಕೇರಿಯೊಳು ಮುಗಿಲು ಮಾಡವನೇರಿ । ನಾರಿಯರೈತಂದು ನೋಡಿ ॥
ಧಾರಿಣಿ ಪತಿಯುವರತ್ತ ನಿಟ್ಟಿಸಿ ನೋಡ । ನಾರವನಂತೆ ನಿಸ್ಪೃಹರು ॥ (26)

ಬಂದು ಕೈಯೆತ್ತಿ ಕೊಂಡಾಡುವ ಪಾಠಕ । ವೃಂದಕೆ ಕೈಲಾಗು ಗೊಡುತ ॥
ಮಂದಿ ಕಾದುರೆಗಳ ಸಂಬಾಳಿಸುತಲಾ । ನಂದದೊಳೈದುವ ನೃಪನು ॥ (27)

ಇಂತು ಸಾಮ್ರಾಜ್ಯ ಸುಖವನನು ಭವಿಸುತ । ಯೆಂತು ಧರ್ಮವ ಮಾಡಲೆಂದು ॥
ಚಿಂತಿಸಿ ತನ್ನ ಮನದೊಳೊಂದು ದಿನದೊಳು । ಕಂತುಸನ್ನಿಭ ಪಾಂಡ್ಯರಾಯ ॥ (28)

ಗಳಿಸಿದರ್ಥಕೆ ಫಲವಾವುದೆಂದರೆ ಧರ್ಮ । ದೊಳು ಬಿತ್ತಿ ಪುಣ್ಯಫಲವನು ॥
ಗಳಿಸದವನ ಜನ್ಮ ವ್ಯರ್ಥವೆಂದವನು ತ । ನ್ನೊಳಗೆ ತಾನಿಂತು ಚಿಂತಿಸಿದ ॥ (29)

ಧರ್ಮದಿಂದಲೆ ರಾಜ್ಯ ಸುಖ ಸಂಪದಂಗಳು । ಧರ್ಮದಿಂದಲೆ ಕುಲರೂಪು ॥
ಧರ್ಮದಿಂದಲೆ ಭೋಗೋಪಭೋಗಗಳೆಂದು । ನಿರ್ಮಲಮನದಿ ಚಿಂತಿಸಿದ ॥ (30)

ನವನಿಧಿ ಪದಿನಾಲ್ಕು ರತ್ನಂಗಳೊಡೆತನ । ವಿವಿಧ ವಿಭವ ದೊಡಗೂಡಿ ॥
ರವಿ ಮಂಡಲವ ನಿಂದಿಪ ಚಕ್ರರತ್ನದಿಂ । ದಿವಿಜವಿದ್ಯಾಧರರಿಂದ ॥ (31)

ಕಪ್ಪವ ತೆಕ್ಕೊಂಡಾರು ಖಂಡವನಾಳ್ವ । ದರ್ಪದ ಸಂಪದವೆಲ್ಲ ॥
ಒಪ್ಪುವ ಜಿನಧರ್ಮದ ಫಲವೆಂದು ಮುಂ । ದಪ್ಪ ಫಲಗಳ ಚಿಂತ್ರಿಸಿದ ॥ (32)

ಸುರಲೋಕದೊಳು ಪುಟ್ಟಿ ನೆರೆದಷ್ಟ ಗುಣದೊಳು । ಸುರ ಸತಿಯರ ನೊಡಗೂಡಿ ॥
ಪಿರಿದಾದ ಸುಖವ ಪಲವು ಕಾಲ ಭೋಗಿಪ । ಸಿರಿ ಜಿನ ಧರ್ಮದ ಫಲವು ॥ (38)

ಮೂಜಗದರಸುಗಳೆಲ್ಲರ ಕೈಯಿಂದ । ಪೂಜಿಸಿ ಕೊಂಬ ಸಂಪದವು ॥
ಶ್ರೀ ಜಿನಧರ್ಮದ ಫಲವೆಂದು ಮನದೊಳು । ರಾಜಾಧಿರಾಜ ಚಿಂತಿಸಿದ ॥ (34)

ಅವಿರುದ್ಧವಾಗಿ ಧರ್ಮಾರ್ಥ ಕಾಮಂಗಳ । ನವಧರಿಸುವನೆ ಕೃತಾರ್ಥ ॥
ಅವನಿಗಲ್ಲದೆ ಸ್ವರ್ಗ ಮೋಕ್ಷ ಸುಖಂಗಳು । ಸಮನಿಸದೆಂದು ಚಿಂತಿಸಿದ ॥ (35)

ಮಂತ್ರಣ ವೇಳೆನ್ನು ಸಭೆಯೊಳು ಮಂತ್ರಿಗ । ಳಂತರಂಗವನು ಶೋಧಿಸುತ ॥
ಇಂತೆಂದು ಕರೆಯಲಟ್ಟಿದನು ಮಂತ್ರಿಗಳ ಭೂ । ಕಾಂತ ಶ್ರೀ ಪಾಂಡ್ಯರಾಜೇಂದ್ರ ॥ (36)

ಬಂದು ಸಿಂಹಾಸನ ದೊಳು ಕುಳಿತಮರೇಂದ್ರ । ನಂದದೊಳಾ ನೃಪವರನು ॥
ಮಂದಿ ಕುದುರೆಗಳ ಭಾರಿಯ ಮಾಡಿಸಿ । ಬಂದು ಕೈಮುಗಿದರು ನೃಪಗೆ ॥ (37)

ಉಚಿತಾಸನಗಳ ಕೊಡಿಸುತ ತಾ ರತ್ನ । ಖಚಿತ ಸಿಂಹಾಸನದೊಳಗೆ ॥
ರಚನೆಯಿಂದೋಲಗವಾಗಿ ಪ್ರಸಂಗವ । ಸಚಿವರೊಡನೆ ಮಾಡುತಿರ್ದ ॥ (38)

ಕನಕದಂಡೆಯ ಚಾಮರಗಳ ಢಾಳಿಪ ವಾರ । ವನಿತೆಯ ರೆಡಬಲದಿ ॥
ಜನಪತಿ ಕ್ಷೀರ ಸಮುದ್ರ ಮಧ್ಯದ ವಿಷ್ಣು । ವಿನ ಪೋಲ್ತು ಸಭೆಯೊಳೊಪ್ಪಿದನು ॥ (39)

ಮಾಂಡಲಿಕರ ಮಂತ್ರಿಗಳ ಸಾಮಂತರ । ದಂಡನಾಯಕರ ಮಧ್ಯದೊಳು ॥
ಖಂಡೆಯವನು ಕೈಯೊಳಗಾಂತು ಕುಸುಮ ಕೋ । ದಂಡನಂದದಿಯೊಪ್ಪಿದನು ॥ (40)

ಪರಿಷತ್ ತ್ರಯದಂತೆ ಮಾಂಡಲಿಕರು ಮಂತ್ರಿ । ಸಾಮಂತರೆಲ್ಲರ ಕೂಡಿ ॥
ಸುರಪತಿ ದೇವ ಸಭೆಯೊಳೊಪ್ಪುವಂತಾ । ನರಪತಿ ಸಭೆಯೊಳೊಪ್ಪಿದನು ॥ (41)

ಹಡಪ ಹಾವುಗೆ ಕುಂಚ ಕಾಳಂಜಿ ಮುಂತಾದ । ಪೊಡವಿ ಪಾಲಕರ ಚಿಹ್ನಗಳ ॥
ಪಡೆದೆಡಬಲದ ಊಳಗದ ವೆಣ್ಗಳು ನಿಲೆ । ಕಡುಸೊಬಗಿಂದ ಲೊಪ್ಪಿದನು ॥ (42)

ಕೈಯೆತ್ತಿ ಪಾಠಕ ನಿಕರ ಕೊಂಡಾಡಲು । ಮೈಯುಬ್ಬುವಂತೆ ಬಿರುದನು ॥
ಅಯ್ಯ ಜೀಯೆಂದು ಮಂತ್ರಿಗಳು ಬಿನ್ನವಿಸಲು । ವೊಯ್ಯನೆ ಕಿವಿ ಗೊಡುತಿಹನು ॥ (43)

ಜಟ್ಟಿಗಾಳಗದ ವಿನ್ನಣವನು ನೋಡುತ । ನಾಟ್ಯದತಾ ನೃತ್ಯದಿರವ ॥
ಕಟ್ಟಳೆಗಳ ಲಾಲಿಸಿ ಪರ ನೃಪತಿಗ । ಳಟ್ಟಿದೋಲೆಯ ನೋಡಿಸುತ ॥ (44)

ಕವಿಗಳ ಸರಸ ಕವಿತ್ವವ ಲಾಲಿಸಿ । ಯವರಿಗುಚಿತಗಳ ಕೊಡುತ ॥
ಸವಿಯಾಗಿ ಪಾಡುವ ಸಂಗೀತ ಗೋಷ್ಠಿಗೆ । ಕಿವಿ ಗೊಡುತಾ ನೃಪನಿಹನು ॥ (45)

ಮತಮತಗಳ ಪರೀಕ್ಷೆಯನು ಮಾಡುತ ಜಿನ । ಮತದ ವಾದಿಗಳ ಮನ್ನಿಸುತ ॥
ಹಿತಮಿತ ಮಧುರ ಗಂಭೀರ ವಚನವನು । ಕ್ಷಿತಿಪತಿ ನುಡಿಯುತಲಿಹನು ॥ (46)

ಇಂತು ಪ್ರಸಂಗವ ಕೇಳುತ ಮಂತ್ರಿಗ । ಳಂತರಂಗವನು ಶೋಧಿಸುತ ॥
ದಂತ ಪಂಙ್ಕ್ತಿಯ ಕಾಂತಿ ಪಸರಿಸೆ ದೆಸೆಗಳ । ನಿಂತು ಮಂತ್ರಿಗಳ ಕೇಳದನು ॥ (47)

ಧರ್ಮಾರ್ಥ ಕಾಮಂಗಳೊಳಗಾವುದು ಮುಖ್ಯ । ಸ್ವರ್ಮೋಕ್ಷವಾವುದರಿಂದ ॥
ನಿರ್ಮತ್ಸರದಿ ಪೇಳ ನೀವೆಂದು ನರನಾಥ । ನಿರ್ಮಲ ಮನದಿ ಕೇಳದನು ॥ (48)

ಆ ಸಮಯದೊಳೊರ್ವ ಮಂತ್ರಿ ಪೇಳದನು ವಿ । ಲಾಸಕ್ಕೈಮಿಗೆ ನೃಪನೊಡನೆ ॥
ಲೇಸ ಕೇಳದೆ ಸ್ವಾಮಿ ಸುಖವೆ ಪ್ರಧಾನವು । ವಿಸುಪರಿಯಲಿ ನೋಡಿವರು ॥ (49)

ಬಿತ್ತಿ ಬೆಳೆದ ಪಣ್ಣ ಸೇವಿಸುವವರಿ । ನ್ನುತ್ತಮ ಪಣ್ಣನೆ ಮೆಲುವ ॥
ಚಿತ್ತೈಸು ಸಾಮಿ ಮನುಜ ಶ್ರೇಷ್ಠನವನಿಗೆ । ಸದ್ಯಃ ಫಲವುಧರ್ಮವರನ ॥ (50)

ಲೋಕವೆಲ್ಲವು ಸುಖವನೆ ಬಯಸುವರದು । ಲೌಕಿಕವಲ್ಲ ನರೇಂದ್ರ ॥
ನೀಕಂಡು ಕೇಳಯು ನಮ್ಮ ಕೇಳುವವಿದು । ಲೌಕಿಕವಾಗಿ ಕಾಣುತಿದೆ ॥ (51)

ತಪದಿಂದ ಕೆಲಬರು ಸುಖವ ಪಡೆಯಲೆಂದು । ಅಸುವಿನಾಸೆಯನು ಬಿಡುವರು ॥
ತಪವೇಕೆ ಸುಖತನ್ನ ಕೈವಶವಾದಮೇ । ಲಪವರ್ಗಚಿಂತೆಯದೇಕೆ ॥ (52)

ಎನಲು ಮತ್ತೊರ್ವ ಸಚಿವನಿಂತು ನುಡಿದನು । ಜನಪತಿಗಿದು ಮೆಚ್ಚಲ್ಲ ॥
ನನೆಗಳಲ್ಲದೆ ಫಲವೆಂತಹುದೆಂದು ನೀ । ನನು ಮಾನಿಸೈ ಮನದೊಳಗೆ ॥ (53)

ಅರ್ಥವಿಲ್ಲದ ನರಗೆಲ್ಲಿಯ ಧರ್ಮವು ಮ । ತ್ತರ್ಥದಿಂ ಕಾಮ ಸುಖಗಳು ॥
ವ್ಯರ್ಥವಹುದು ಧರ್ಮ ಕಾಮಗಳಗೆ ಮುಖ್ಯ । ವರ್ಥವೆಂದೊರ್ವನುಡಿವನು ॥ (54)

ಅರ್ಥವುಳ್ಳವನೆ ಲೋಕದೊಳತಿ ಮಾನ್ಯ ಮ । ತ್ತರ್ಥವುಳ್ಳವನೆ ತಾ ಧನ್ಯ ॥
ಅರ್ಥವಿಲ್ಲದವನೆ ಸಾಮಾನ್ಯ ಜನ್ಮನಿ । ರರ್ಥಕವವಗವನೀಶ ॥ (55)

ಇದು ತಾನು ಮೆಚ್ಚಲ್ಲ ನೃಪಗೆಂದು ಮತ್ತೊರ್ವ । ಸದಮಲ ಮಂತ್ರಿ ತಾ ನುಡಿದ ॥
ಹೆದರದೆ ಬಿನ್ನವಿಸುವೆ ಲಾಲಿಸು ಸ್ವಾಮಿ । ಇದನು ಚೆನ್ನಾಗಿ ಚಿತ್ತದೊಳು ॥ (56)

ಮರನಿಲ್ಲದಿದ್ದರೆ ಕುಸುಮ ಫಲಂಗಳ । ಗಿರಪೆತ್ತಣಿಂದ ಬಂದಪುದು ॥
ಮರನ ಕಡಿದು ದುರುಳರು ಪುಷ್ಪ ಫಲಗಳ । ನಿರದೆ ಸೇವಿಸುವರೆ ಸ್ವಾಮಿ ॥ (57)

ಧರ್ಮವ ಮರೆದು ಕೆಲಬರರ್ಥ ಕಾಮವ । ದುರ್ಮತಿಗಳು ಬಯಸುವರು ॥
ಕರ್ಮಿಗಳವರು ಮುಂದಣ ಭವದೊಳಗಿಂತು । ಸ್ವರ್ಮೋಕ್ಷ ಸುಖವ ಪಡೆವರು ॥ (58)

ಹಾಲನು ಮೆಚ್ಚದ ಮಾರ್ಜಾಲನಂದದಿ । ಮೇಲನರಿಯದೆ ಕೆಲಬರು ॥
ಲೋಲುಪರಹರರ್ಥ ಕಾಮಸುಖದೊಳು ಭೂ । ಪಾಲಕರ ವಿವೇಕದಿಂದ ॥ (59)

ಅದರಿಂ ಧರ್ಮವೆ ಕಾಮಾರ್ಥಕೆ ಮೊತ್ತ । ಮೊದಲೆಂದು ಪೇಳ್ದನಾ ಸಚಿವ ॥
ಅದನು ಲಾಲಿಸಿ ತನ್ನ ಮನ ಮೆಚ್ಚಿ ಮಂತ್ರಿಗೆ । ಪದಕವನಿತ್ತು ಮನ್ನಿಸಿದ ॥ (60)

ಭರತೇಶ್ವರ ಮೊದಲಾದ ಚಕ್ರಿಗಳೆಲ್ಲ । ಪರಧರ್ಮವೇ ಮುಖ್ಯವೆಂದು ॥
ವಿರಚಿಸಿ ಮನ್ನಿಸಿ ಕೇವಲ ಪೂಜೆಯ । ಬಳಿಕರ್ಥ ಕಾಮಂಗಳನು ॥ (61)

ಎಂದು ತನ್ನಯ ಮನದೊಳಗಿದ್ದರ್ಥವ । ನೆಂದು ಪೇಳಿದನು ಭೂವರಗೆ ॥
ತಂತು ನಿವಾಳಿಯ ನಿಟ್ಟ ಭೂಭುಜರೆಲ್ಲ । ಬಂದೆರಗಿದರವನಡಿಗೆ ॥ (62)

ಅವರ ಶಿರವ ತನ್ನ ಕೈಯಿಂದಲೆ ಯೆತ್ತಿದ । ತ್ತವರಿಗುಚಿತಗಳನಡಿದ ॥
ತವಕದಿ ಕಳುಹಿಸಿದನು ವೀಳ್ಯವ ಕೊಟ್ಟ । ಭುವನೈಕ ವೀರಪಾಂಡ್ಯೇಂದ್ರ ॥ (63)

ದಾನ ಪೂಜೆಗಳು ಶೀಲೋಪ ವಾಸಗಳೆಂದು । ನಾನಾ ತೆರನುಂಟು ಧರ್ಮ ॥
ನಾನಿದರೊಳಗಿನ್ನೇನ ಮಾಡಲಿಯೆಂದು । ತಾನುಯೋಚಿಸಿದ ನರೇಂದ್ರ ॥ (64)

ಉಪವಾಸ ಶೀಲಗಳೆಮಗೆ ಘಟಿಸವೀಗ । ತಪವಿದ್ದಲ್ಲದೆ ಮಿಕ್ಕ ।
ನೃಪಧರ್ಮದೊಳು ದಾನ ಪೂಜೆ ಮುಖ್ಯಗಳೆಂದು ನಿ । ಷ್ಕಪಟ ಮನದಿ ಚಿಂತಿಸಿದನು ॥ (65)

ಜಿನಚೈತ್ಯಾಲಯ ಬಿಂಬಗಳನು ನಾನು । ಅನುಮಾಡಿಸಿ ಪ್ರತಿಷ್ಠೆಯನು ॥
ಜನರೆಲ್ಲ ಪೊಗಳ್ವಂತೆ ವಿರಚಿಸ ಬೇಕೆಂದು । ನೆನೆದ ತನ್ನಯ ಮನದೊಳಗೆ ॥ (66)

ಕಾಂಚನ ರತ್ನ ಜಟಿತ ಮುತ್ತುರಿತ್ತಾಳಿ । ಕಂಚು ಮುಂತಾದವರಿಂದ ॥
ಪಂಚಮ ಕಾಲದೊಳಗೆ ಪ್ರತಿಮೆಯಮಾಡೆ । ಚಂಚಲದಿಂದವನುಳಿವು ॥ (67)

ಶಿಲೆಯೊಳಗೊಂದು ಬಿಂಬವನು ತಿದ್ದಿಸಿದರೆ । ನೆಲೆಗೊಂಡು ನಿಲುವುದು ಕೀರ್ತಿ ॥
ಕಲಿಯುಗದೊಳಗೊಂದು ಬಲುದೊಡ್ಡ ಬಿಂಬವ । ನಿಲಿಸುವಯತ್ನವ ನೆನೆದ ॥ (68)

ತನ್ನರಮನೆಯ ಬಲದ ಭಾಗದೊಳಗೊಂದು । ಉನ್ನತ ಗಿರಿಯೊಪ್ಪುತಿಹುದು ॥
ತನ್ನ ಸೊಬಗಿನಿಂದ ಕೈಲಾಸಗಿರಿಯುಮ । ಹೋನ್ನತಿಕೆಯನು ಜರೆವುದು ॥ (69)

ಮುನ್ನತನ್ನೊಳು ನಿಂದ ಗುಮ್ಮಟ ಸ್ವಾಮಿಯ । ನಿನ್ನೊಮ್ಮೆ ಧರಿಸ ಬೇಕೆಂದು ॥
ಮುನ್ನವ ಕೈಲಾಸಗಿರಿ ಬಂದು ನಿಂತಿತೆಂ । ದುನ್ನತ ಗಿರಿ ಯೊಪ್ಪುತಿಹುದು ॥ (70)

ಅಲ್ಲಲ್ಲಿ ವಜ್ರವೈಡೂರ್ಯ ಪುಟ್ಟುವ ಕಣಿ । ಅಲ್ಲಲ್ಲಿ ಪರುಷದ ಕಣಿಯು ॥
ಅಲ್ಲಲ್ಲಿ ಸಿದ್ಧರಸದ ಕೂಪವಾನಗ । ದಲ್ಲಿಹುದನೇನೆಂಬೆ ॥ (71)

ಕರಿದಾದ ಚಿತ್ರ ಮೂಲಗಳುಂಟು ಸತ್ಪುಣ್ಯ । ಪುರುಷರಿಗಲ್ಲದೆ ಮಿಕ್ಕ ॥
ನರರಿಗೆ ಕಾಣಿಸವವು ಬ್ರಹ್ಮರಾಯನ । ಕರುಣ ಪುಳ್ಳವರ್ಗೆ ಗೋಚರವು ॥ (72)

ಅಂದೀ ಸ್ವಾಮಿಯ ಮಜ್ಜನ ಜಲದಿಂದ । ಮಿಂದು ಪವಿತ್ರನಾಯಿತ್ತಲ್ಲ ॥
ಎಂದು ಮಂದರಗಿರಿಯಾಗಿರಿ ಯಂದದಿ । ಬಂದು ನಿಂದಂತೊಪ್ಪುತಿಹುದು ॥ (73)

ಶ್ರೀಗುರು ಲಲಿತ ಕೀರ್ತ್ಯಾಚಾರ್ಯರೊಡನೆ ತಾ । ನಾಗಿರಿ ಗಭಿ ಮುಖನಾಗಿ ॥
ಪೋಗಿ ನೋಡಲು ವಜ್ರ ಶಿಲೆಯೊಂದು ಕಾಣಿಸಿ । ತಾಗುರುವಿನ ಕಣ್ಗೆ ಮೊದಲು ॥ (74)

ಇದರಿಂದ ಬಿಂಬವ ತಿದ್ದಿಸ ಬಹುದೆಂದು । ಮದನಾರಿ ಮುನಿರಾಯನುಸಿರೆ ॥
ಮುದದಿಂದ ಚಿತ್ತೈಸಲದಕೆ ಸಂತಸ ಬಟ್ಟ । ಪದಕೆರಗಿದನಾ ರಾಯ ॥ (75)

ಧರ್ಮವೆ ವೃದ್ಧಿಯಾಗಲಿ ನಿನಗೆಂದತಿ । ಕೂರ್ಮೆಯಿಂದಾ ನೃಪವರನ ॥
ನಿರ್ಮಲ ಮುನಿಪತಿ ಹರಸಲಾ ನುಡಿಗೇಳ್ದು । ನೂರ್ಮಡಿಯುಬ್ಬಿದನವನು ॥ (76)

ದೇವದುಂದುಭಿಗಳು ಮೊಳಗಿದುವಾಕ್ಷಣ । ನಾಭಿಭುವಿನ ಪುಣ್ಯದಿಂದ ॥
ಪೂವಿನ ಮಳೆಗರೆದುದು ಪುಣ್ಯವಂತರಿ । ಗಾವುದು ಸಾಧ್ಯವವಲ್ಲ ॥ (77)

ಜಯ ಘಂಟೆ ಢಣರೆಂದು ದಾಗಮಯದೊಳ್ಸಯ । ಜಯವೆಂಬೀಘೋಷಣೆಯು ।
ಧ್ವನಿಯಿಂದ ಲಾವುನಿ ಹರಸಿದ ಹರಕೆಯು । ಫಲವೆಂದನಾ ನೃಪವರನು ॥ (78)

ಜಲಗಂಧಾಕ್ಷತೆ ಪುಷ್ಪನೈವೇದ್ಯ ದೀಪ । ವಿಲಸಿತ ಧೂಪ ಸತ್ಫಲದಿಂ ॥
ಚೆಲುವರ ದೇವ ತಾಶಿಲೆಯು ಪೂಜಿಸಿದನು । ವೊಲಿದು ತಾ ಸಂತೋಷದಿಂದ ॥ (79)

ಅಲ್ಲಿಂದ ನಾನಾ ವಾದ್ಯ ಸೂಳೈಸಲು । ಸಲ್ಲೀಲೆಯಿಂದರನುನೆಗೆ ॥
ಉಲ್ಲಾಸ ಮನದಿಂದ ಬಂದು ಪೊಕ್ಕನು ಭೂ । ವಲ್ಲಭ ಬೀಳ್ಕೊಟ್ಟು ನೃಪರ ॥ (80)

ನಿತ್ಯ ಹವನ ಸಿದ್ಧ ಚಕ್ರಮುಂತಾದ ಸ । ತ್ಕೃತ್ಯವ ಮಾಡಿಸಿ ಬಳಿಕ ॥
ಸತ್ಯಸದಾಚಾರ ಸಂಪನ್ನನಾನೃಪ । ನಿತ್ಯದಾನಗಳನು ಕೊಟ್ಟು ॥ (81)

ಯತಿಗಳ್ಗೆ ಚರಿಗೆಯು ಮಾಡಿಸಿದಲ್ಲದೆ । ಪ್ರತಿ ದಿನ ತಾನುಣ್ಣೆನೆಂಬ ॥
ವ್ರತವುಳ್ಳುದಂದು ಖಂದು ಧೋತ್ರವನುಟ್ಟು । ಕ್ಷಿತಿಪತಿಯತಿಗಳ ಬರವ ॥ (82)

ಚಿನ್ನದ ಗಿಂಡಿಯೊಳ್ಪ್ರಾಸೂಕ ಜಲವನು । ತನ್ನ ಕೈಯೊಳಗಾಂತು ನೃಪನು ॥
ಮುನ್ನಿನ ದಾನ ಶ್ರೇಯಾಂಸನಂದದಿ ಕಡು । ಜನ್ನಣದಿಂ ನಿಂದು ನೋಡಿ ॥ (83)

ನೊಗದಂತರ ಭೂಮಿಯೊಳು ದೃಷ್ಟಿಯು ನಿಟ್ಟು । ಬೆಗಲೊಳು ಬಲಗೈಯು ನಿಟ್ಟು ॥
ಮಿಗೆಮಂದಗತಿಯಿಂದ ಯತಿಯೊರ್ವನೆಡಗೈಯೊ । ಳಗೆ ಕುಂಚಗುಂಡಿಗೆವಿಡಿದು ॥ (84)

ಚಿತ್ತೈಸುತಿರೆ ಕಂಡು ತಾನಿದಿರ್ಗೊಂಡು ಭೂ । ಪೋತ್ತಮನಾಮುನಿವರನ ॥ .
ಸುತ್ತಿಮೂವಳ ಸಿಂದಲುದಕ ಶುದ್ಧಿಯನು ವ । ರ್ಗಿತ್ತು ನಿಲ್ಲಿಸಿ ಭಕ್ತಿಯಿಂದ ॥ (85)

ಅರಮನೆಗೈದಿಸಿ ಆರತಿಗಳನು ತ । ನ್ನರಸಿಯರಿಂದೆತ್ತಿಸಿದನು ॥
ಗುರುಭಕ್ತಿಯೆಂಬುದು ಮುಕ್ತಿಗೆ ಭುಕ್ತಿಯೆಂ । ದರಸನಿವಾಳಿಯು ನಿಟ್ಟು ॥ (86)

ಉನ್ನತಾಸನವಿತ್ತು ಪ್ರಾಸೂಕ ಜಲವನು । ಚಿನ್ನದ ಗಿಂಡಿಯೊಳ್ತುಂಬಿ ॥
ತನ್ನ ಪಟ್ಟದರಾಣಿಯರೆಲ್ಲಾ ಮುನಿಪನ । ಚೆನ್ನಡಿದಾವರೆಗಳನು ॥ (87)

ಕರದಿಂದ ತೊಳೆದು ಪಾದೋದಕವನು ತನ್ನ । ಶಿರದೊಳು ತಳದು ಕೊಂಡದನು ॥
ಪರಿಪರಿ ಯರ್ಚನೆಯಿಂದ ಪೂಜಿಸಿ ಮುನಿ । ವರಗೆ ನಮ ಸ್ಕಾಂಗವೆರಗಿದ ॥ (88)

ಹಸ್ತ ಶುದ್ಧಿಯನು ಮಾಡಿಸಿದನು ಬಳಿಕ ಪ್ರ । ಶಸ್ತವಸ್ತುಗಳಿಂದ ನೃಪತಿ ॥
ಪ್ರಸ್ತುತ ಹಿತಮಿತ ಮಧುರ ವಚನದಿಂದ । ವಸ್ತುಕಾರಗಳನು ತರಿಸಿ ॥ (89)

ಭಕ್ತಿಯಿಂದಾಮುನಿವರಗಾ ನೃಪಸಿದ್ಧ । ಭಕ್ತಿಯು ಬಿನ್ನಯಿಸಿದನು ॥
ಭುಕ್ತಿ ಪತ್ಯಾಖ್ಯಾನವನು ನಿಷ್ಠಾಪಿಸಿ । ಭುಕ್ತಿಗೆ ಪಾಣಿಪಾತ್ರವನು ॥ (90)

ಸವರಿಸಿ ಕಾಯೋತ್ಸರ್ಗದಿಂದಾ ಮುನಿ । ಮಿಸುಕದತ್ತಿತ್ತ ದೃಷ್ಟಿಯನು ॥
ಒಸೆದಿತ್ತು ಪಾಣಿಪಾತ್ರದೊಳಡೆ ಢಣರೆಂ । ದುಸುರಿತು ಜಯಘಂಟೆಯಾಗ ॥ (91)

ತ್ರಿಕರಣಶುದ್ಧಿಯಿಂದಾ ನೃಪನವರ್ಗೆ ಪ್ರಾ । ಸುಕನಿರವದ್ಯಾಹಾರವನು ॥
ಸಕಲ ಸುಖಕೆ ಸಂಚಕಾರವನೀವಂತೆ । ಅಕಲಂಕಚರಿತನೆತ್ತಿದನು ॥ (92)

ನವವಿಧ ಪುಣ್ಯ ಸಪ್ತವಿಧದ ಭಕ್ತಿಗಳಿಂ । ದವನಿಪಾಲಕನಾ ಮುನಿಗೆ ॥
ದಿವಿಜರು ಪೊಗಳೆ ನಿರಂತರಾಯುವನಾಗ । ಸುವಿವೇಕದಿಂದ ಮಾಡಿಸಿದ ॥ (93)

ಉದರದೊಳರ್ಧವ ನಾನಾ ಖಾದ್ಯಗಳಿಂ । ದದರೊಳಗೊಂದು ಭಾಗವನು ॥
ಒದವಿದ ಪಾನಗಳಿಂ ತುಂಬಿ ನಾಲ್ಕನೆ । ಯುದನುಳುಹಿದನಾ ವಾತಗತಿಗೆ ॥ (94)

ಹಿತಮಿತ ನಿರವದ್ಯಾಹಾರವ ಕೊಂಡು । ಯತಿಪತಿ ಮುಖ ಶುದ್ಧಿಗೈದು ॥
ನುತಭಕ್ತಿ ಪ್ರತ್ಯಾಖ್ಯಾನವ ಶ್ರೀಜಿನ । ಮತದೊಳು ಪೇಳ್ದಂತೆ ಮಾಡಿ ॥ (95)

'ಅಕ್ಷಯ ದಾನ ಸತ್ಫಲ ಮಸ್ತು 'ಯೆಂದು ಮು । ಮುಕ್ಷು ಪರಸಲದ ಕೇಳಿ ॥
ಆಕ್ಷಣದೊಳು ಮುಕ್ತಿ ಸುಖವೆ ಕೈಸಾರ್ದಂ । ತಾಕ್ಷಿತಿಪತಿ ಹರುಷದೊಳು ॥ (96)

ಪಂಚಮುಷ್ಟಿಯೊಳು ನಮೋಸ್ತು ಯೆಂದೆನಲು ಪ್ರ । ಪಂಚವಿಲ್ಲದೆ ಮುನಿರಾಯ ॥
'ಪಂಚಮಗತಿ ಸಿದ್ಧಿರಸ್ತುಂ'ದು ಹರಸಿದ । ಕುಂಚವ ಮಂಡೆಯೊಳಿಟ್ಟು ॥ (97)

ಆ ಗುರುವಿನ ಕಮಂಡಲವ ಕೈಯೊಳಗಾಂತು । ಭೋಗಿಗಳರಸ ಬೆಂಗಡೆಯ ॥
ರಾಗದಿಂದಡಿಯಿಟ್ಟು ಬರುತಿದ್ದ ತಾ ರಾಜ । ಯೋಗಿ ಯೆಂಬಂತೆ ನೋಳ್ಪಗೆ ॥ (98)

ಮುಕ್ತಿ ಕಾಂತೆ ಕುಚ ಕುಂಭದೊಳಗೆ ರಾಗ । ಯುಕ್ತ ನಪ್ಪುದರಿಂದ ನೃಪತಿ ॥
ಭಕ್ತಿಯಿಂದಾಮುನಿಪನ ಕಮಂಡಲದೊಳಾ । ಸಕ್ತನಾದನು ಪಿಡಿವಲ್ಲಿ ॥ (99)

ಇಂತು ರಾಜಾಂಗಣ ಪರಿಯಂತ ತಾನೆಯ್ದಿ । ಕಂತುವಿಜಯ ಮುನಿವರನ ॥
ಸಂತೋಷದಿಂದ ಕೈಮುಗಿದು ಕಳುಹಿಸಿ ಭೂ । ಕಾಂತ ತಿರುಗಿದ ಮಂದಿರಕೆ ॥ (100)

ಮುನಿಜನಕಾಹಾರವಿತ್ತು ಶೇಷಾನ್ನವ । ನನುದಿನ ಭುಂಜಿಪ ಭವ್ಯ ॥
ಜನರ ಮನೆಯೊ ಮಹಾಲಕ್ಷ್ಮಿಸಂತತ । ವನುರಾಗದಿಂದಿರುತಿಹಳು ॥ (101)

ಉತ್ತಮ ಮುನಿಗಳಿಗಾಹಾರವನಿತ್ತು । ಮತ್ತೆ ಭವ್ಯರ ಗೃಹದೊಳಗೆ ॥
ಪತ್ತುಬಿಡದೆ ಧನಕನಕ ಧಾನ್ಯಂಗಳ । ಮೊತ್ತನಿಹುದು ಚೋದ್ಯವಲ್ಲ ॥ (102)

ಇಂದು ಮಹಾಲಾಭ ದೊರೆಕೊಂಡಿತೆಮಗೆಂದು ಮಂದಿರವನು ಪೊಕ್ಕನೃಪತಿ ॥
ಒಂದೆ ಪಂತಿಯೊಳುಣಬೇಕು ನಾವೆಲ್ಲ ವ । ರೆಂದು ಕರೆಸಿ ರಾಣಿಯರ ॥ (103)

ರಾಣಿಯರೆಲ್ಲ ಸಿಂಗರವಾಗಿ ನೆರೆದು ನೆ । ರಾಣೆಯ ಬೊಂಬೆಗಳಂತೆ ॥
ಪ್ರಾಣಕಾಂತನ ಬಳಗೈ ತಂದರವರ ಬಿ । ನ್ನಾಣವನೇನ ಪೇಳುವೆನು ॥ (104)

ನುಣ್ಣಿಸಿ ಬಾಚಿಕಟ್ಟಿದ ತೋರದುರುಬಿಗೆ । ಸಣ್ಣ ಮಲ್ಲಿಗೆ ಹೂವ ಮುಡಿದು ॥
ಕಣ್ಣಿಗೆ ಕಾಡಿಗೆ ಯೆಚ್ಚಿ ಪಣೆಯೊಳು । ಸಣ್ಣ ಕಸ್ತೂರಿ ಬೊಟ್ಟ ತಾವಿಟ್ಟು ॥ (105)

ಮುತ್ತಿನ ಬೊಟ್ಟು ಕಡಗ ಕಂಠಮಾಲೆಯ । ಕೆತ್ತಿಗೆ ಯೋಲೆಯ ನಿಟ್ಟು ॥
ಮತ್ತ ಮರಾಳಗಮನೆಯರು ಬಂದರು । ಚಿತ್ರಜನರಸಿಯರಂತೆ ॥ (106)

ಸಣ್ಣವಣ್ಣವ ನಿರಿವಿಡಿದುಟ್ಟು ಮೈಗೆಕ । ಮ್ಮೆಣ್ಣೆಯ ನುಂಪಿಟ್ಟು ಕಚವ ॥
ಯೆಣ್ಣೆ ಗಂಟಿಕ್ಕಿ ಸಿಂಗರವಾಗಿಕೆಲಬರು । ಪಣ್ಣವಣ್ಣೆಯೊಳೈದಿದರು ॥ (107)

ಮಿರುಗುವ ಮೈಬಣ್ಣ ಉಟ್ಟುದುಕೂಲದ । ಹೊರಹೊಮ್ಮಿ ಸೂಸುತಲಿರಲು ॥
ಶರದದ ಮೇಘದೊಡ್ಡಿನೊಳು ಮಿಂಚುವ ಮಿಂಚಿ । ನಿರವಾಂತು ದೊಗ್ಗಿನೊಳೆಯ್ದಿ ॥ (108)

ಚರಣದಂದುಗೆಯಂದುಗೆಯಾಗೆ ಕುಚಕುಂಭ । ಊರುಕುಂಭಸ ಲವಾಗೆ ॥
ಬರೆದ ಕಪೋಲ ಪತ್ರಿಕೆ ಮದದಂತಿರೆ । ಸ್ಮರದಂತಿಯಂತೆಯ್ಸಿದರು ॥ (109)

ಪೊಳೆವ ಹೊಂಬಳೆದೊಡೆಯ ಪಿಡಿನಡುವಿನ । ಕಳಶಕುಚದ ನಳತೋಳ ॥
ಕಳಕಳಸುವ ಮುದ್ದುಮೊಗದ ಕೋಮಲೆಯರಂ । ದೆಳಸಿದರಾನೃಪನೆಡೆಗೆ ॥ (110)

ಪೂಸರಗಳನು ಕಾಣಿಕೆಗೊಟ್ಟು ತಮ್ಮವಿ । ಲಾಸದೊಳಾ ನೃಪವರನ ॥
ಕೇಸಡಿಗೆರಗಿ ಪರಕೆಯಾಂತು ನಿಂವರಂ । ದಾಸತಿಯರು ಸೊಬಗಿಂದ ॥ (111)

ಪತಿಭಕ್ತಿಗರಸನು ಮೆಚ್ಚಿ ಸಂತಸವಟ್ಟು । ಸತಿಯರೊಳಂತೆಂದು ನುಡಿದ ॥
ಯತಿಭುಕ್ತಿಯಾದ ಶೇಷಾನ್ನವ ನಾವೆಲ್ಲ । ರತಿಮುದದಿಂದುಣ್ಣಬೇಕು ॥ (112)

ಹಿಂದು ಪಂಕ್ತಿಯೊಳೆಂದು ನುಡಿವ ನೃಪತಿ । ಗಂದು ಪಟ್ಟದರಾಣಿಯೊಲಿದು ॥
ಮಂದಹಾಸದೊಳಂತೆಂದು ಬಿನ್ನವಿಸಿದ । ಳ್ಬಂದು ಭೂವರಗೆ ಕೈಮುಗಿದು ॥ (113)

ಯತಿಗಳ ಶೇಷಾನ್ನ [ನಮಗೆ] ತಮಗೆ ರಾಜ । ಪತಿಯ ಶೇಷಾನ್ನವು ನಮಗೆ ॥
ಅತಿಶಯ ಭುಕ್ತಿ ಯೆಂದಾಡಿದಳಾ ಮಹಾ । ಸತಿಪತಿ ಭಕ್ತಿಯಿಂದಾಗ ॥ (114)

ಆನುಡಿಗೇಳ್ದು ಹಾಗೌದು ಯೆಂಜಿನದಿನ । ಮಾನಿನಿಯರನೊಡಗೊಂಡು ॥ .
ನಾನುಣ್ಣಬೇಕೆಂದು ಪ್ರೀತಿಪುಟ್ಟಿದುದೊಂದ । ನೀನು ಮನ್ನಿಸಬೇಕು ರಮಣಿ ॥ (115)

ಎಂದು ಪೇಳದ ಪತಿಗುತ್ತರವನು ಕೊಡೆ । ಲೆಂದು ಬಾಯ್ದೆರೆವ ವೇಳೆಯೊಳು ॥
ಬಂದುಪಚರಿಸಿಯಾಲಿಂಗಿಸಿ ಕೈವಿಡಿ । ದಂದು ಕರೆಯಲಾ ನೃಪತಿ ॥ (116)

ಎಂದು ನಿರೂಪವ ಮೀರಿದರೆಮ್ಮಯ । ಪತಿವ್ರತ ತನಕದು ಭಂಗ ॥
ಪತಿಗಿಕ್ಕಿದರಮೇಲೆ ನಮಗಿಕ್ಕದರೆಯತಿ । ಪತಿಯ ಶೇಷಾನ್ನನಾಯ್ತೆಮಗೆ ॥ (117)

ಎಂದು ನೆನೆದು ತಮ್ಮ ಮನದೊಳಗಾಸತಿ । ಯೆಂದೊಡಂಬಟ್ಟು ರಾಣಿಯರ ॥
ಸಂದಣಿಯೊಳು ರಾಯನೊಂದಾಗಿ ಬಂದಳಾ । ನಂದದಿಂದೊಳಮಂದಿರಕೆ ॥ (118)

ಭೋಜನಶಾಲೆಯೊಳಗೆ ಚಿನ್ನಬೆಳ್ಳಿಯ । ರಾಜಿಸುವಟ್ಟಣಿಗೆಗಳ ॥
ಓಜೆಯೊಳಿಡೆ ಮಾಡಿದನ್ನವ ಚಿನ್ನದ । ಭಾಜನಗಳ ನಿಡಿಸಿದರು ॥ (119)

ಅಳಿಯಂದಿರನು ಕುಮಾರ ವರ್ಗವನಾಗ । ಕಳುಹಿಸಿ ಕರೆಸಿ ಭೂಪಾಲ ॥
ತಳುವಿಲ್ಲದವರಿಗು ಯೆಡೆಮಾಡಿಸಿದರಾಜ । ಕುಲತಿಲಕನು ಪಾಂಡ್ಯರಾಯ ॥ (120)

ಕನ್ನಡದೊಳು ಪಟ್ಟದರಾಣಿ ಮುಂತಾದ । ಚಿನ್ನೆಯರನು ಬಳಿವಿಡಿದು ॥
ತನ್ನ ಬಲದೊಳು ಕುಮಾರ ವರ್ಗವನತಿ । ಬಿನ್ನಣಿಯಿಂ ಬಳವಿಡಿದ ॥ (121)

ಬುಧರೋಹಿಣಿಯರ ಮಧ್ಯದೊಳೊಪ್ಪುವ । ವಿಧುಬಿಂಬದಂತಿರ್ದನಾಗ ॥
ಸಭೆಗೆಣೆಯೆಣಿಸುವ ದಿವ್ಯಾಹಾರವತಂದು । ವಿಧುಮುಖಿಯರು ಬಡಿಸಿದರು ॥ (122)

ಕರಚೆಲುವಿಂದ ಸಿಂಗರವಾಗಿ ದುಗುಲವ । ನಿರಿವಿಡಿದುಟ್ಟು ನಾರಿಯರು ॥
ಪರಿಕರಗಳ ತಂದು ಬಡಿಸಿದರೆಡೆಯೊಳು । ತೆರಪಿಲ್ಲಪೆಂಬ ಮಾಳ್ಕೆಯೊಳು ॥ (123)

ಉಪ್ಪು ಉಪ್ಪಿನಕಾಯಿ ತಾಳಲ ಪಾಯಸ । ಪೊಪ್ಪುವ ಕಜ್ಜಾಯಗಳನು ॥
ತಪ್ಪದೆ ಸೇರುವೆಯಿಂದ ಬಡಿಸಿ ಹೆರೆ । ದುಪ್ಪವ ತಂದಿಕ್ಕಿದರು ॥ (124)

ರಸಭರಿತಗಳಾದ ದಿವ್ಯಾಹಾರವ ತನ್ನ । ಸೊಸೆಯಿಂದಿರು ತಂದು ಬಡಿಸಿ ॥
ರಸಿಕರ ದೇವನಾರೋಗಣೆಯನು ಮಾಡ । ಲೆಸಗಿದನತಿ ಮುದದಿಂದ ॥ (125)

ಪಂಚನಮಸ್ಕಾರವನು ಭಾಷಿಸಿ ತನ್ನ । ಪಂಚಪ್ರಾಣಾಹುತಿಗೊಟ್ಟು ॥
ಮುಂಚೆ ಮುನಿಯ ಶೇಷನ್ನವನುಣಲು ಪ್ರ । ಪಂಚವಿಲ್ಲದೆ ಕುವರರಿಗೆ ॥ (126)

ಎಲ್ಲರಿಗಪ್ಪಣೆಯನು ಕೊಟ್ಟು ತನ್ನಯ । ವಲ್ಲಭೆಯರನುಣ ಹೇಳಿ ॥
ಸಲ್ಲೀಲೆಯಿಂದಾ ಪೋಷಣವನು ಕೊಂಡು । ಬಲ್ಲವರ‍ಸ ಭುಂಜಿಸಿದ ॥ (127)

ಸಣ್ಣಕ್ಕಿಯೋಗರ ಸವಿಯಾದ ತೋವೆಯನು । ಬೆಣ್ಣೆಗಾಸಿದ ತುಪ್ಪವನು ॥
ಬಣ್ಣದುಟಿಯ ಭಾಮೆಯರು ತಂದು ಬಡಿಸಿದ । ಗಿಣ್ಣಲು ತುಂಬುವಂದದೊಳು ॥ (128)

ತುಪ್ಪದೊಳಗೆ ಹದವರಿದು ತಾಳಿಸಿದ ಕಮ್ಮ । ನಪ್ಪ ಹಪ್ಪಳ ಸಂಡಿಗೆಗಳ ॥
ವೊಪ್ಪದೊಳಗೆಯಿಕ್ಕಿ ಪಳದ್ಯವ ಬಡಿಸಲು । ಚಪ್ಪರಿದುಣುತಿರ್ದರಾಗ ॥ (129)

ಕನೆವೊಸರಶನವ ನುಂಡರುಪ್ಪಿನ ಕಾಯ । ತನಿರಸಗಳನು ಸೇವಿಸುತ ॥
ಮನವ್ರೊಲಿದುಂಡು ರಸಾಯನ ಪಾನಕ । ವನು ಸೇವಿಸಿದ ರತಿಯಿಂದ ॥ (130)

ವೊದಲೊಳು ಮಧುರಾಹಾರವ ಭುಂಜಿಸಿ । ತದನಂತರ ಲವಣಾಮ್ಲ ॥
ವುದಿದಾಹಾರವನುಂಡು ಕಟುಕತಿಕ್ತ । ವೊದವಿದ ಪರಿಕರಗಳನು ॥ (131)

ಕಡೆಯೊಳು ಸೇವಿಸಿ ಚಿನ್ನದ ಗಿಂಡಿಯ । ಪಿಡಿದು ಕ್ಷೀರವ(ತ್ತೆ) ಕ್ಕೊಂಡುಬಳಿಕ ॥
ಪಡಿಗದೊಳಗೆ ಕೈದೊಳೆದು ಮುಕ್ಕುಳಿಸಿದ । ಪೊಡವಿಯಾಣ್ಮರಿಗಿದು ಭುಕ್ತಿ ॥ (132)

ಜಿನಸಿದ್ಧ ಶರಣೆಂದು ಪಂಚನಮಸ್ಕಾರ । ವನುನೆನೆದಾ ಭೂಪರನು ॥
ವನಿತೆಯರಿಗೆ ಕುವರರಿಗೆ ಕರ್ಪುರ ವೀಳ್ಯ । ವನು ಕೊಡಿಸಿದನಾ ನೃಪತಿ ॥ (133)

ಇಂದೆಮ್ಮ ಜನ್ಮ ಸಫಲವಾಯ್ತು ಯೆಲೆ ಸ್ವಾಮಿ । ಯೆಂದು ಕೈಮುಗಿದು ಕಾಂತೆಯರು ॥
ಬಂದರು ಬೀಳ್ಕೊಂಡು ನೃಪನರಮನೆಯೊಳಾ । ನಂದದೊಳಿರುತಿರ್ದನಾಗ ॥ (134)

ಇದು ಶ್ರುತಸಾಗರ ಮುನಿರಾಜನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯೊ । ಳೊದವಿದೆರಡನೆಯ ಸುಸಂಧಿ ॥ (135)

(ಎರಡನೆಯ ಸಂಧಿ ಸಮಾಪ್ತಂ.)

## ಮೂರನೆಯ ಸಂಧಿ.

ಎಲ್ಲದೇವರಿಗೆ ನೀನಗ್ಗಳ ನೆಂಬುದ । ಸೊಲ್ಲಿಸುತಿದೆ ದಿವ್ಯ ದೇಹ ॥
ಬಲ್ಲಿದ ಗುಮ್ಮಟಸ್ವಾಮಿ ನಿನ್ನಯ ಪಾದ । ಪಲ್ಲವಕಾನೆರಗುವೆನು ॥ (1)

ದಶತಳವನು ಬಲ್ಲ ಶಿಲ್ಪಿಗಳನು ಕುಲ । ಕುಶಲ ಕೋವಿದರನು ಕರೆಸಿ ॥
ದಶದಿಕ್ಕಿನೊಳು ಕೀರ್ತಿ ಪಸರಿಸಿ ನಿಲ್ವಂತೆ । ಶಶಿಸಮಶಾಂತ ಭೂಕಾಂತ ॥ (2)

ಅವರನು ಮನ್ನಿಸಿ ವಸ್ತ್ರ ಭೂಷಣದಿಂ । ದವರೊಳಗಿಂತು ನುಡಿದನು ॥
ಸುವಿವೇಕದಿಂದ ಗುಮ್ಮಟ ಸ್ವಾಮಿಯ ಚೆಲ್ವಿ । ನವಯವಗಳ ತಿದ್ದಬೇಕು ॥ (3)

ಎಂದುಪೇಳದರಾಯ ನೊಡನೆ ಶಿಲ್ಪಿಗಳೆಲ್ಲ । ರೊಂದಾಗಿ ಯೋಚಿಸಿ ಬಳಿಕ ॥
ನಿಂದು ಕೈಮುಗಿದೋರ್ವ ಕೋವಿದ ಶಿಲ್ಪಿಯಿಂ । ತೆಂದು ಬಿನ್ನವಿಸಿದನಾಗ ॥ (4)

ಪುರು ಪರಮೇಶನ ಸುತನು ಮಂದರ ಧೀರ । ಕರುಣಾಕರಧಿ ಗಂಭೀರ ॥
ಊರು ಪುಣ್ಯಸಾಗರ ಗುಮ್ಮಟ ಸ್ವಾಮಿಯ ಚೆಲ್ವ । ಸುರಶಿಲ್ಪಿಗಳಾವೆ ತಿದ್ದುವರೆ ॥ (5)

ರಾಜಿಪ ಪೌದನ ಪುರದೊಳು ಭರತೇಶ । ಈ ಜಿನಬಿಂಬವ ಮುನ್ನ ॥
ಓಜೆಯೊಳ್ಮರಕತ ಮಣಿಯಿಂದ ತಿದ್ದಿಸಿ । ಮೂಜಗದೊಳು ಕೀರ್ತಿವಡೆದ ॥ (6)

ಬಳಿಕ ಬೆಳ್ಗೊಳದೊಳು ಚಾಮುಂಡರಾಯನು । ತೊಳಗುವ ಗುಮ್ಮಟ ಜಿನನ ॥
ಹೊಳಹನು ತಿದ್ದಿಸಿ ಪೂಜಿಸಿ ಕೀರ್ತಿಗೆ । ನೆಲೆಯಾದ ನೀಜಾಗವಲ್ಲಿ ॥ (7)

ಕಲಿಯುಗದೊಳಗೀ ಬಿಂಬವ ತಿದ್ದಿಸಿ । ನಿಲಿಸಲು ನಿನ್ನಯ ಕೀರ್ತಿ ॥
ಪಳುಕಿನ ಕೊಡದ ಸೊಡರಿನಂತೆ ಮೂಲೋಕ । ದೊಳಗು ಪೊರಗು ಪಸರಿಪುದು ॥ (8)

ಎಂದಾಶಿಲ್ಪಿ ಬಿನ್ನವಿಸಲವಕೆ ಯಾ । ನಂದಿಸಿ ಪಾಂಡ್ಯ ರಾಜೇಂದ್ರ ॥
ಮಂದಹಾಸ ಬಾಯಿಂದು ಕರೆದವ । ಗಂಚಿತ್ರ ದಿವ್ಯ ಭೂಷಣವ ॥ (9)

ಮೂರ್ತಿಯೊಳಗೆ ಚೆಲ್ವಿಗೆ ಸ್ಪಷ್ಟದಲ್ಲದೆ । ಕೀರ್ತಿ ನಿಲ್ಲದು ಜಗದೊಳಗೆ ॥
ಕೀರ್ತಿಗೆ ನೀನೆ ಕಾರಣವೆಂದವನೊಳು । ಕೂರ್ತು ನುಡಿದನಾ ನೃಪತಿ ॥ (10)

ಎಮ್ಮಒಲ್ಲಂದದಿ ತಿದ್ದುವೆವೀ ಜಿನ । ಗುಮ್ಮಟ ಸ್ವಾಮಿಯ ರೂಪ ॥
ನಿಮ್ಮಯ ಪುಣ್ಯೋದಯವೆಮಗೆ ಸಹಾಯವೆಂ । ದೊಮ್ಮನದಿಂದವ ಪೇಳ್ದ ॥ (11)

ಅವರಿಗೆ ಸ್ನಾನ ಭೋಜನ ವೀಳ್ಯಮುಂತಾದ । ವಿವಿಧೋಪಚಾರಕೆ ತನ್ನ ॥
ಕುವರನಿ ಗಪ್ಪಣೆಯನು ಕೊಟ್ಟು ದಿನದಿನ । ವವಧರಿಸುವನು ತಾ ಪೋಗಿ ॥ (12)

ದಿನದಿನ ತನಗೆಡೆ ಮಾಡುವ ಪರಿಕರ । ವನು ಕೊಟ್ಟು ಕಳುಹಿಸಿಯವರ ॥
ಮನವನು ಸೆರೆಗೆಯ್ವ ವಿನಯೋಪಚಾರಕೆ । ಜನವಶ್ಯವಪ್ಪುದೊಂದರಿಯೆ ॥ (13)

ಅಮೃತವಾಣಿಗಳೆಂದೆನಿಸುವ ಜೋಯಿಸರನು । ಕ್ರಮ ಪರಿವಿಡಿಗಳಬಲ್ಲ ॥
ಸಮಯದಲಿ ವಿದ್ವಜ್ಜನರನು ಮನಸಿಜೋ । ಪಮಕರೆಸಿದನಾಗ ಬೇಗ ॥ (14)

ನೀವೆಲ್ಲರು ನಮಗಾಪ್ತರೆಂಬುದರಿಂದ । ನಾವು ನಿಮ್ಮನು ಕರೆಸಿದೆವು ॥
ಕೋವಿದರಾಗಿ ಹಿತವ ನುತಿಸುವರೀ । ಭೂವಳಯದೊಳು ದುರ್ಲಭವು ॥ (15)

ಅದು ಕಾರಣ ನೀವು ನಮಗುತ್ತರೋತ್ತರ । ಸದಮಲ ಸುಖ ಸಾಮ್ರಾಜ್ಯ ॥
ಒದವಿಬಪ್ಪಂತೀ ಸ್ವಾಮಿಯ ಕಾರ್ಯಕ್ಕೆ । ಮುದದಿಂದ ಲಗ್ನವ ನೋಡಿ ॥ (16)

ಏಕವಿಂಶತ್ರಿದೋಷ ಸೋಂಕದ ಲಗ್ನವ । ನೇಕವಿಧದಿ ಕಂಡು ಪೇಳೆ ॥
ಶ್ರೀ ಕಾರಕಳಕು ನಮಗು ಕ್ಷೇಮ ವಪ್ಪಂತೆ । ಲೋಕದೊಳ್ಕೀರ್ತಿ ನಿಲ್ವಂತೆ ॥ (17)

ಎಂದು ಭೂಕಾಂತ ವಿದ್ವಜ್ಜನ ಜೋಯಿಸ । ರೊಂದಾಗಿ ಪೇಳ್ವ ವೇಳೆಯೊಳು ॥
ಮುಂದಣ ಲೇಸನು ಸೂಚಿಪಂದದಿ ಭೇರಿ । ಧಂಧಂಧಣರೆಂದುದಾಗ ॥ (18)

ಅವರು ನಾನಾ ಸಂಹಿತೆಗಳ ಮಾರ್ಗವ । ಸುವಿವೇಕದಿಂದ ನಿಶ್ಚೈಸಿ ॥
ಭವಹರ ಜಿನನ ಶಿಲಾ ಮುಹೂರ್ತಕೆ ತಕ್ಕ । ಪ್ರವರಲಗ್ನವನು ಪೇಳಿದರು ॥ (19)

ಆಗ ಮುಹೂರ್ತ ಕಾಣಿಕೆಯನು ಕೊಡಿಸಿ ಚೆ । ನ್ನಾಗಿ ಮನ್ನಿಸಿ ಜೋಯಿಸರ ।
ಶ್ರೀಗುರು ಲಲಿತ ಕೀರ್ತ್ಯಾಚಾರ್ಯರಬಳಿ । ಗಾಗ ಸಂತಸ ದೊಳೈದಿದನು ॥ (20)

ಜಿನಚೈತ್ಯಾಲಯವನು ಮೂರುಮೆತಾಬಲಗೊಂಡು ಮ । ತ್ತನಘ ಜಿನೇಶ್ವರಗೆರಗಿ ॥
ಜನಪತಿ ಹಲವು ನುತಿಗಳಿಂದ ನುತಿಸಿದ । ಮನವೊಲ್ದು ಕೈಗಳ ಮುಗಿದು ॥ (21)

ಸ್ವಾಮಿಯೆನ್ನಯ ಬಿನ್ನಪವನು ಲಾಲಿಸಬೇಕು । ಯೀ ಮಹಾಕಾರ್ಯವ ನಾನು ॥
ಪ್ರೇಮದಿಂದೆಸಗಿದೆ ಯಿದಕೆ ನಿರ್ವಿಘ್ನವ । ನೀ ಮಾಡಿ [ಸಲಹೊ] ಯೆನ್ನಯ್ಯ ॥ (22)

ಗೋವರ್ಧನ ಗಿರಿಯನು ನಾರಾಯಣ । ಪಾವನ ಕೈಲಾಸಗಿರಿಯ ॥
ರಾವಣನೆತ್ತಿದ ನಿನ್ನಯ ಪಾದವನಂಬ । ಲಾವುದು ಸಾಧ್ಯವದಲ್ಲ ॥ (23)

ಕೃತ ಕೃತ್ಯ ನೀನಾ . . . . ದರುಯೆನ್ನಭಿ । ಮತವನು ನೀನೊಲಿದಿತ್ತು ॥
ಕ್ಷಿತಿಯೊಳು ಭಕ್ತವತ್ಸಲನೆಂಬ ಬಿರುದನು । ಪ್ರತಿಪಾಲಿಸೆನ್ನಯ ತಂದೆ ॥ (24)

ಗರುಡನನೊಲಿದು ಧ್ಯಾನಿಸಿ ಜಪಿಸಲು ದುಷ್ಟ । ಗರಳವೆಲ್ಲವು ಪರೆವಂತೆ ॥
ನಿರಘ ನಿನ್ನನು ಬೆಸಗೊಂಡ ಭವ್ಯರಪರಿ । ಹರಿಸುವದೊಂದರಿದೆ ॥ (25)

ದೇವೇಂದ್ರ ಧರಣೇಂದ್ರ ಚಕ್ರವರ್ತಿಗಳೆಲ್ಲ । ದೇವಪೂಜಿಸಿ ನಿನ್ನಪದವ ॥
ಆ ವಿಭವಕೆ ಕರ್ತರಾದರೆಂದೆನಲೆನ್ನ । ನೀವಿಭವವ ನೀವ ದರಿದೆ ॥ (26)

ಎಂಬ ನಂಬುಗೆಯೆನ್ನ ಮನದೊಳಗುಂಟದ । ನಿಂಬಾಗಿ ಬಿನ್ನವಿಸುವರೆ ॥
ನಾ ಬಾಲಕನದರಿಂದೆನ್ನ ನುಡಿಯ ದಿ । ಗಂಬರ ನಾಥ ಲಾಲಿಪುದು ॥ (27)

ಎಂದು ನುತಿಸಿಯಾನಂದಾಶ್ರುಜಲದಿಂದ । ಮಿಂದು ಮತ್ತೊಮ್ಮೆ ಭೂವರನು ॥
ಮಿಂದು ಥೋತ್ರವನುಟ್ಟು ಜಿನಗಭಿಷೇಕವ । ನಂದು ಮಾಡಿಸಿದ ಸಂಭ್ರಮದಿ ॥ (28)

ಅಷ್ಟವಿಧಾರ್ಚನೆಯಿಂದಲರ್ಚಿಸಿ ಮತ್ತೆ । ಸಾಷ್ಟಾಂಗವೆರಗಿ ಜಿನನಿಗೆ ॥
ಅಷ್ಟ ಪ್ರಾರ್ಥನೆಗಳ ಮಾಡಿಕೊಂಡನು ತನ್ನಾ । ಭೀಷ್ಟವೆಲ್ಲವು ಸಲುವನಕ ॥ (29)

ಅನುಲೇಪನ ಮಾಲ್ಯ ಭೂಷಣ ವಸ್ತ್ರವಾ । ಹನ ಮುಂತಾದುವನೆಲ್ಲ ॥
ಜಿನನಾಥ ನಿಯಮಿಸಿಕೊಂಡನು ತನ್ನಯ । ಮನದೊಳಗಿನ್ನಿಂತೆಂದು ॥ (30)

ಕುಲಗುರು ಲಲಿತ ಕೀರ್ತ್ಯಾಚಾರ್ಯರಪಾದ । ಜಲಜವಿದ್ದಲ್ಲಿಗೈತಂದು ॥
ಸುಲಲಿತವಹ ಪುಣ್ಯಕೀರ್ತಿಗಳಿಮಗಾಗಲೆಂ । ದಲಘು ಭಕ್ತಿಯೊಳೆರಗಿದನು ॥ (31)

ಗುರುಗಳ ಪಾದಪೂಜೆಯ ಮಾಡಿ ಮತ್ತೊಮ್ಮೆ । ಚರಣಕಮಲಕೆರಗಿದನು ।
ಪರಕೆಯ ಶಿರದೊಳ(ಗಾಂ)ತು ತನ್ನಿಷ್ಟವ । ನೊರೆದನು ಗುರುವಿನ ಕೂಡೆ ॥ (32)

ಮುನ್ನ ತನ್ನಯ ಮನದೊಳಗೆ ದೇವನ ಮುಂ । ದುನ್ನಿಸಿಕೊಂಡ ವ್ರತಗಳ ॥
ಬಿನ್ನಹವನು ಮಾಡಿ ಯಾನೃಪಗುರುವಿನ । ಸನ್ನಿಧಿಯೊಳು ಕೈಕೊಂಡು ॥ (33)

ಪುರಜನ ಪರಿಜನ ಬಂಧು ಜನಂಗಳ । ನೆರವಿಯೊಳಾ ನೃಪವರನು ॥
ಗುರು ಜನರನು ಮುಂದು ಮಾಡಿಕೊಂಡಾಗ ತಾ । ಬರುತಿರ್ದನಧಿಕ ಲೀಲೆಯೊಳು ॥ (34)

ಅಂದು ಕೈಲಾಸಗಿರಿಯ ಭರತೇಶ್ವರ । ಬಂದೇರಿದಂತಾಗಿರಿಯ ॥
ಚಂದವ ನೋಡುತ ಬಂದೇರಿದನು ನೃಪ । ವೃಂದದ ಸಂದಣಿವೆರಸು ॥ (35)

ಶುಭಮುಹೂರ್ತದೊಳಾ ಶಿಲೆಯೊಳು ಭಕ್ತಿಯಿಂ । ದಭಿಷೇಕ ಪೂಜೆಯಮಾಡಿ ॥
ಅಭಿನವ ಮದನ ಪಾಂಡ್ಯೇಂದ್ರನಿಂದೆನ್ನಯ । ವಿಭವ ಸಾಫಲ್ಯವಾಯ್ತೆಂದ ॥ (36)

ಶಿಲ್ಪಿಗಳನು ಕರೆಯಿಸಿ ಪ್ರಾರಂಭ ಸಂ । ಕಲ್ಪವ ಮಾಡಿಸಿ ಶಿಲೆಯ ॥
ಕಲ್ಪವೃಕ್ಷವೆ ಕೈಬಿಟ್ಟಂತೆ ಕೊಟ್ಟನು । ಕಲ್ಪಿತ ಭೂರಿದಾನಗಳ ॥ (37)

ಇಂತು ಪ್ರಾರಂಭಿಸಿ ಅನುದಿನ ಶಿಲ್ಪಿಗ । ಳಂತರಂಗವನು ಶೋಧಿಸುತ್ತ ॥
ಸಂತೈಸುತಡಿಗಡಿಗವರ ಕೈಕರಣವ । ಸಂತಸ ನೋಡುತ್ತಲಿಹನು ॥ (38)

ಹೊಳಹನು ತಿದ್ದಿಸಿದನು ಮೊದಲೊಮ್ಮೆ ಯಾ । ಶಿಲೆಯೊಳಗಾ ಜಿನಪತಿಯ ॥
ಬಳಿಕಾಲಿಂಗವ ಗಿರಿಯುಗ್ರಕ್ಕೈದಿಪ । ಬಲುದೊಡ್ಡಯತ್ನವ ನೆನೆದ ॥ (39)

ಇಪ್ಪತ್ತು ಗಾಲಿಗಳಿಂದ ಸೊಬಗನಾಂ । ತೊಪ್ಪವ ಬಂಡಿಯನಾಗ ॥
ಉಪ್ಪರವಾಗಿ ಮಾಡಿಸಿದನು ಕಬೊರ್ನ್ನ । ದಪ್ಪದ ಕೀಲ್ಗಳಿಂ ಬಳಸಿ ॥ (40)

ಹತ್ತು ಸಾವಿರ ಸನ್ನೆಗಳಿಂದ ಬಿಂಬವ । ನೆತ್ತಿಸಿ ಬಂಡಿಗೈದಿಸಿದ ॥
ಕತ್ತ್ರದ ಮಿಣಿಗಳ ಜೋಡಿಸಿ ಜನರ ತಾ । ನಿತ್ತರದಲಿ ನಿಲ್ಲಿಸಿದನು ॥ (41)

ಅರಸು ಪ್ರಧಾನರು ದಂಡನಾಯಕರು ಮ । ತ್ತರಿಕೆಯ ರಾಜ ಮನ್ನೆಯರು ॥
ಕರಣಿಕ ಮುಂತಾದ ಪ್ರಜೆ ಪರಿವಾರಗ । ಳ್ಬೆರಸಿ ಪಿಡಿದರಾಮಿಣಿಯ ॥ (42)

ಭೋರೆಂದು ವಾದ್ಯ ಸೂಳೈಸಿತು ಜಯ ಘೋಷ । ಪೂರೈಸಿತು ದಿಕ್ತಟವ ॥
ಕೀರಿ ಬೊಬ್ಬಿರಿದರೊಂದೇ ಸನ್ನೆಯಲಿಯುವ । ರಾ [ರಾಭಟೆಯ] ನೇನೆಂಬೆ ॥ (43)

ಕದನಿಗಳೆದ್ದುವು ಸಾವಿರ ನೆಲನೆಲ್ಲ । ವದಿರುವಂದದಿ ನೃಪವರರು ॥
ಬೆದರುವಂದದಿ ತಾರೆಗಳೆಲ್ಲ ಭೂತಳ । ಕುದುರುವಂದದಿ ನಭದಿಂದ ॥ (44)

ಗಾಲಿಯ ಹಾರೆಗೆಣ್ಣೆಯ ಹೊಯ್ಸಿದನತಿ । ಲೀಲೆಯಿಂದವರ ಚೀತ್ಕಾರ ॥
ಭೂಲೋಕವನು ವ್ಯಾಪಿಸುವಂತೆ ನಿಜಕೀರ್ತಿ । ಮೂಲೋಕದೊಳಗೆ ನಿಲ್ವಂತೆ ॥ (45)

ಒಂದು ಗಾಲಿಗೆ ಹತ್ತು ಸಾವಿರ ಕಾಯನು । ಅಂದೊಡಸಿದನಾ ರಾಯ ॥
ಮುಂದುವರಿದು ಬಂಡಿ ನಡೆದುದಾದಿನದೊಳ । ಗೊಂದು ಮಾರು ಪರಿಯಂತ ॥ (46)

ಗಾಲಿಯ ಚೀತ್ಕಾರ ರಭಸಕೆ ದಿಗ್ಗಜ । ವಾಲಿ ಬೊಬ್ಬಿರಿದೋಡಿದುವು ॥
ಮೇಲೆ ಪರ್ವಿತು ಕೆಂದೂಳು ಸೂರ್ಯನರಶ್ಮಿ । [ಜಾಲ] ಮರೆಸಿತು ಆಕಾಶದಲ್ಲಿ ॥ (47)

ಧರೆಯನು ಪೊತ್ತಶೇಷನ ಪೆಡೆಯುಡುಗಿತ । ಬ್ಬರಕೆ ಕಂಪಿಸಿತುಭೂತಳವು ॥
ಶರಧಿಗಳದ್ದಳವಿದ್ದವೆಂದೆನಲದ । ರಾರವಣೆಯನು ಪೇಳ್ವೆನೆಂತು ॥ (48)

ಬಳಲಿಪರೆಲ್ಲ ನೀವೆಂದಾಗ ಪೇಳ್ದು ಭೂ । ತಳಪತಿ ಶೀತಳವಾದ ॥
ಜಲವನು ತರಿಸಿಕೊಟ್ಟವರಿಗೆ ಪಾನಕ । ಫಲಗಳ ತರಿಸಿದನಾಗ ॥ (49)

ಕುಡಿ ಮಜ್ಜಿಗೆ ಸಕ್ಕರೆಯ ಪಾನಕವನು । ಕೊಡಕೊಡದೊಳು ತುಂಬಿ ತರಿಸಿ ॥
ಪೊಡವಿಪಾಲಕ ಗಿಂಡಿಗಳ ತುಂಬಿಯುವರಿಗೆ । ತರಿಸಿಕೊಡಿಸಿದನಾಕ್ಷಣದಿ ॥ (50)

ಭೂರಿ ಜನಕೆ ಮತ್ತೆ ಕಡುಬು ಹೂರಿಗೆ ತುಪ್ಪ । ಗಾರಿಗೆಯೊಡೆ ಮುಂತಾದ ॥
ನಾರಕಜ್ಜಾಯವ ಕೊಡಿಸಿದನವನ ಉ । ದಾರ ಗುಣವನೆಂತು ಪೊಗಳ್ವೆ ॥ (51)

ಶ್ರೀಗಂಧ ಕರ್ಪೂರ ವೀಳ್ಯ ಮುಂತಾದುವ । ಭೋಗಿಗಳರಸ ಕೊಡಿಸಿದ ॥
ರಾಗರಸದೊಳೋಲಾಡಿದರವರೆಲ್ಲ । ತ್ಯಾಗವಲ್ಲವೆ ಲೋಕವಶ್ಯ ॥ (52)

ಸಾವಿರ ರಾಟೆಗಳನು ಹೂಡಿಸಿದನು ಮ । ತ್ತಾ ವಿಭು ಮರುದಿವಸದಲಿ ॥
ದೇವಟಂಡಿಯು ಬೆಟ್ಟವ ಸೇರುವಂತೆ ಮ । ಹಾ ವಿಭವದೊಳು ಭಾವಿಸಲು ॥ (53)

ಮುದ್ದಾನೆಗಳಿಂದ ಹಿಂದೆ ನೂಕಿಸುವನು । ಹೆದ್ದಗಳಿಂದ ಪ್ರೋತ್ಸಾಹ ॥
ಬದ್ಧವಣ್ಣೆಗಳು ಸೂಳೈಸಿದ ವರಿಗಳ । ಗದ್ದಳವನು ಪುಟ್ಟಿಪಂತೆ ॥ (54)

ಅಂದಿನ ದಿನದೊಳಗೆಂಟು ಮಾರನು ಬಂದು । ನಿಂದುದು ಬಂಡಿಮತ್ತಾಗ ॥
ಹಿಂದೆ ಪೇಳ್ದಂದದಿ ವಿನಯೋಪಚಾರವ । ನಂದು ಮಾಡಿಸಿದ ರಾಜೇಂದ್ರ ॥ (55)

ಈ ತೆರದೊಳಗೊಂದು ತಿಂಗಳು ಪರಿಯಂತ । ಭೂತಳ ಪತಿಸನ್ನಾಹದೊಳು ॥
ಪ್ರೀತಿಕೈಮಿಗೆ ಬಂದು ಬೆಟ್ಟದ ತುದಿಗೆ ನಾ । ನಾತೆರದಿಂದ ಲೆಯ್ದಿಸಿದ ॥ (56)

ಎಪ್ಪತ್ತು ಯೆರಡು ಕಂಬಗಳಿಂದ ಸೊಬಗನಾಂ । ತೊಪ್ಪುವ ಬಲುತೆರಪಾದ ।
ಚಪ್ಪರವನು ಮಾಡಿಸಿದ ಮೇಲ್ಗಟ್ಟನಿಂ । ದೊಪ್ಪವಡದು ರಂಜಿಸುವ ॥ (57)

ಅದರೊಳಗಾ ಬಿಂಬದ ಕೆಲಸವ ನತಿ । ಮುದದಿಂದಲನು ಮಾಡಿಸುತ್ತ ॥
ಚಮುರರ ದೇವ ಕುಮಾರ ಪಾಂಡ್ಯೇಂದ್ರನಂ । ದದರ ಬಿನ್ನಣವಲಾಲಿಸುತ ॥ (58)

ಒಂದು ವರುಷ ಮುಟ್ಟಿ ಯೋಗದೊಳಾದೇವ । ನಿಂದಾ ದೇಹವನೆ ತಿದ್ದಿಸಿದ ॥
ಮುಂದೆಸೆವ ಶರಣದೊಳಾಲತೆ ಯೊತ್ತಿಲಿ । ಚಂದವೆ ಕಾಣಿಸುತಿಹುದು ॥ (59)

ಮೇದಿನಿಯೊಳು ಪಾದಯುಗವ ಪತ್ತಿ । ಯಾದೇವನ ಭುಜ ಮುಟ್ಟಿ ॥
ಪೋದುವು ಲತೆಗಳು ಸುತ್ತಿಯಾ ಜಿನಪನ । ಭೇದವಿಜ್ಞಾನವಿನ್ನೆಂತೋ ॥ (60)

ಲತೆಯು ಪತ್ರದೊಳು ವರ್ಣಸರೆಮುಂತಾದತಿಶಯಗಳನು ತಿದ್ದಿಸಿದ ॥
ಪ್ರತಿಮೆಯಲ್ಲಿದು ಪ್ರತ್ಯಕ್ಷವಾ ಜಿನನೆಂದು । ಕ್ಷಿತಿಯೆಲ್ಲ ಪೊಗಳು ವಂದದೊಳು ॥ (61)

ನಾಸಾಗ್ರದೊಳಿಟ್ಟ ಸಮದೃಷ್ಟಿ ಧ್ಯಾನ ವಿ । ಲಾಸದಿಂ ಶಾಂತ ರಸವನು ॥
ಸೂಸುವ ನಗೆಮೊಗವಾಜಾನುಬಾಹುಗ । ಳಾಸುರಾಚರಿತ್ರ ಗೊಪ್ಪಿದುವು ॥ (62)

ಕೆಂಪಳರನು ಪೋಲ್ವ ಪಾದಪದ್ಮದೊಳು ಪೂ । ಣ್ಣೇಂದು ಪಲವು ರೂಪನಾಂತು ॥
ಬಂದು ನಿಂದಂತಾ ಸ್ವಾಮಿಯ ನಖಗಳು । ಕಂದು ಕುಂದಿಲ್ಲದೊಪ್ಪಿಹವು ॥ (63)

ಪ್ರೌಢೆ ಸರಸ್ವತಿ ಬಾಜಿಪ ವೀಣೆಯು । ಗಾಢಗುಂಡಿಕೆಗಳಂದದೊಳು ॥
ರೂಢಿವಡೆದು ಸೊಬಗಿಂದಾ ದೇವನ । ಗೂಢಗುಲ್ಫಗಳೊಪ್ಪಿದುವು ॥ (64)

ಅಂಗಜ ರಾಜನ ಬಿರುದಿನ ಕಹಳೆಯು । ಭಂಗಿಪ ಜಾನು ಜಂಘೆಗಳ ॥
ಶೃಂಗಾರವನೆಂತು ಬಣ್ಣಿಪೆ ನೋಳ್ಪರ । ಕಂಗಳ ಸೆರೆಗೆಯ್ಯುತಿಹವು ॥ (65)

ತೊಡೆಯೆಂದು ಮನಸಿಜ ರಾಯನ ಬಿರುದನು । ತೊಡೆಯಿಸಿದುವರಿಂದಲವಕೆ ॥
ತೊಡೆಯೆಂಬ ಪೆಸರಾದುವವರ ಚೆಲ್ವಿಕೆಯನು । ನುಡಿಯಲಿನ್ನಳವೆಂತೆಂದು ॥ (66)

ಮನಸಿಜ ಮದಗಜ ಸಿಂಹತಾನೆಂಬುದ । ನನುಕರಿಸುತ ತೋರುವಂತೆ ॥
ಘನ ನಿತಂಬಗಳೆಂಬ ಗಿರಿಯೇರಿ ಜಿನಪನ । ತನುಮಧ್ಯ ವೊಪ್ಪುತಲಿಹುದು ॥ (67)

ಲಾವಣ್ಯರಸ ಸಮುದ್ರದ ತೆರೆವಾಲೆಯು । ಭಾವದೊಳೊಪ್ಪುತಲಿಹುದು ॥
ಭಾವಿಸಿ ನೋಡುವ ಜನರಿಗೆ ತ್ರಿವಳಿಗ । ಳೀಪೇಳ್ವ ದೇವನ ಸೊಬಗ ॥ (68)

ಭಾವೆ ಸರಸ್ವತಿ ಕ್ರೀಡಿಪ ಗೊಳನಂತೆ । ಲಾವಣ್ಯ ರಸದಿಂದ ತುಂಬಿ ॥
ಆವಾಗ ಹೆಚ್ಚು ಕುಂದಿಲ್ಲದೆ ಸೊಬಗಿನಿಂ । ದೇವನ ನಾಭಿಯೊಪ್ಪಿಹುದು ॥ (69)

ಅಂತರಂಗದ ಲಕ್ಷ್ಮಿಯೊಡ್ಡೋಲಗ ಶಾಲೆ । ಯಂತೆ ವಿಶಾಲತೆಯಿಂದ ॥
ಸಂತತ ವಕ್ಷಸ್ಥಳ ವೊಪ್ಪುತಿಹುದದ । ನೆಂತೆಂದು ವರ್ಣಿಪೆ ನಾನು ॥ (70)

ಜಿನನೆಂಬ ಕಲ್ಪವೃಕ್ಷದ ಬೀಳಲ್ಗಳ । ನನುಕರಿಸುತ ತೋರುವಂತೆ ॥
ಜಿನಪತಿ ಯಾಜಾನು ಬಾಹುಗಳೊಪ್ಪಿದ । ವನುಪಮ ಸುಪುಷ್ಪದಿಂದ ॥ (71)

ಮೊಗವೆಂಬ ಮಣಿದರ್ಪಣದ ಪಿಡಿಯೆಂಬಂತೆ । ಸೊಗಸುವ ಕಂಠ ವೊಪ್ಪಿಹುದು ॥
ಮೃಗಧರ ಪೂರ್ವಾದ್ರಿ ಶಿಖರದೊಳಿರ್ಪಂತೆ । ನಗೆಮೊಗವೊಪ್ಪಿತಾ ಜಿನನ ॥ (72)

ಕಂಪನುಶ್ವಾಸ ನಿರ್ವಾಸ ಕಾಶ್ರಯವಾಗಿ । ಸಂಪಗೆ ಮಿರುಮುಗುಳಂತೆ ॥
ಕಂಪಿಂದ ನಾಸಿಕ ವೊಪ್ಪಿತು ಸ್ಮರನೆಂಬ । ಕಂಪ್ರಣಿ ಪೊರ್ದದ ಜಿನನ ॥ (73)

ಕೇವಲಜ್ಞಾನ ಲೋಚನವಿರೆ ನಮ್ಮ ನಿ । ನ್ನಾವುದು ಕಾರ್ಯವೆಂದನುತ ॥
ದೇವನ ಕರ್ಣದೊಳ್ಬೀಗಲೆಯ್ದಿದು ವೆಂಬ । ಭಾವದಿಂ ನೇತ್ರವೊಪ್ಪಿಹುದು ॥ (74)

ಕುರುಳ್ಗಳು ಮನಸಿಜ ಮೃಗವಪಿಡಿಯಲ್ಕಿ । ದುರುಳ್ಗಳೆಂಬಂತಾ ಜಿನನ ॥
ಶಿರದೊಳೊಪ್ಪಿದುವಾ ಮೊಗದಾವರೆ । ಗೆರಗುವ ತುಂಬಿಯಂದದೊಳು ॥ (75)

ಇಂತೆಂದು ವರ್ಣಿಸಿ ಯಾ ರಾಜ ಚಂದ್ರಮ । ಸಂತೋಷದಿಂದ ಶಿಲ್ಪಿಗಳ ॥
ಸಂತೈಸಿ ಕೊಟ್ಟನುಂಬಳಿ ವಿಚಿತ್ರಗಳ ನಿ । ನ್ನೆಂತೆಂದು ಬಣ್ಣಿಪೆ ನಾನು ॥ (76)

ಕಡಗ ಪದಕ ಕಂಠಮಾಲೆ ಚೌಕುಳಿ ಹೊ । ನ್ನುಡಿದಾರ ಕಾಲಸರಗಳ ॥
ಪಿಡಿಹೊನ್ನು ಗ್ರಾಮಗಳನು ದಾರೆಯೆರೆದನಾ । ಪೊಡವಿ ಪಾಲಕ ಕೊಟ್ಟನವರ್ಗೆ ॥ (77)

ಎಡಬಲದೊಳಗೆ ಪ್ರತ್ತಿಕ್ಕೆ ಕುಕ್ಕುಟ ಸರ್ಪ । ವೆಡೆಗೊಂಡು ನಿಂದುವಾ ಜಿನನ ॥
ಕಡು ಶಾಂತರಸದಿಂದಲತ್ತಿತ್ತ ಚಲಿಸದೆ । ಪೆಡೆಯೆತ್ತಿ ನೋಡುತಲಿಹವು ॥ (78)

ಇಂತೊಂದು ವರುಷವಾ ಬಿಂಬದ ಕೆಲಸ ನಿ । ರಂತರ ನಡೆದುದು ಬಳಿಕ ॥
ಎಂತುನಿಲಿಸ ಬಹುದೆಂದಾ ಬಿಂಬವನೆಂದು । ಚಿಂತಿಸಿ ಮನದೊಳಗೆ ॥ (79)

ಭೂಮಿ ಶೋಧನೆಗವಕಾಶವಿಲ್ಲದೆ ಶಿ । ಲಾಮಯ ಗಿರಿಯಾದುದರಿಂ ॥
ಆ ಮಧ್ಯದೊಳು ಪಂಚಾಂಗವ ನಿರ್ಮಿಸಿ । ಸ್ವಾಮಿಯ [1] ಕಾಲು ನಿಲ್ವಂತೆ ॥ (80)

ಅವಕಾಶವ ಮಾಡಿ ಸ್ಥಿರಲಗ್ನದೊಳಗಾ । ಭುವನೇಶ ಸರ್ವ ಸಂಭ್ರಮದಿ ॥
ಕವಿಗಳು ಪೊಗಳೆ ಗಾಯಕರು ಕೊಂಡಾಡಲು । ವಿವಿಧ ವಾದ್ಯಗಳು ಸೊಳ್ಳೈಸೆ ॥ (81)

ಅಲ್ಲಲ್ಲಿ ಪಾತ್ರವನಾಡೆ ಗಣಿಕೆಯರು । ಸಲ್ಲಲಿತಾಂಗಿಯರೊಲಿದು ॥
ಉಲ್ಲಾಸದಿಂದ ಧವಲಶೋಭನಗಳ । ಸೊಲ್ಲಿಸಿ ಪಾಡುತಲಿಹರು ॥ (82)

ಮಂಗಲಾಷ್ಟಕವನು ವಿಪ್ರರು ಪೇಳಲು । ಮುಂಗಡೆಯೊಳು ಜೋಯಿಸರು ॥
ಹಿಂಗದಾಯುತವೆ ಆಯುತವೆಂದು ಪೇಳಲು । ತ್ರುಂಗ ಭೂಭುಜ ಭವ್ಯಸಂಘ ॥ (83)

ಜಯ ಜಯವೆನಲು ಮಹಾ ಮುನಿಗಳು ತಮ್ಮ । ಕ್ರಿಯೆಗಳ ಮಾಡುತ್ತಲಿರಲು ॥
ಭಯ ಭಕ್ತಿಯೊಳು ರಾಯನಿಂದಿರೆ ಲಗ್ನದ । ಜಯಘಂಟೆ ಢಣ್ಣೆಂದುದಾಗ ॥ (84)

---

[1] ಕೊಲು.

ಮೊದಲು ಹಾರವಕೊಟ್ಟುಯೆತ್ತಿದ ಬಿಂಬವ । ಸದಮಲ ಲಗ್ನದ ಸಮಯ ॥
ಒದವಿ ಬಂದಿರಲಾಗಲಾವಿಭುಕೈವೀಸ । ಲದಕಂಡು ಸಂತೋಷದಿಂದ ॥ (85)

ಒಂದೇ ಸಮಯದೊಳಿಪ್ಪತ್ತೈದು ಸಾವಿರ । ಮಂದಿ ಯಾ ಬಿಂಬವನೆತ್ತಿ ॥
ತಂದು ಸ್ಥಾಪಿಸಿದರು ಕೊಲದ ಮಧ್ಯದೊ । ಳಂದು ಭವ್ಯರು ಜಯವೆನಲು ॥ (86)

ತುಳುಮಲವರುವತ್ತು ಸಾವಿರ ಯಲ್ಲಿಹ । ಹಲರೈದು ಸಾವಿರ ಮಂದಿ ॥
ಉಳಕೆಸೂಜೀವಿತ ಹತ್ತು ಸಾವಿರ ಗೂಡಿ । ಘಳಲನೆತ್ತಿದರು ಬಿಂಬವನು ॥ (87)

ಶಕಕಾಲವಷ್ಟೀಂದು ಸಂಖ್ಯೆಗೆ ಸಂದ । ಪ್ರಕಟವಿರೋಧಿಕೃತೆಂಬ ॥
ಸುಕರ ವತ್ಸರದ ಫಾಲ್ಗುಣ ಶುದ್ಧ ದ್ವಾದಶಿ । ಯಕಲಂಕ ಸೌಮ್ಯವಾರದೊಳು ॥ (88)

ಗುಮ್ಮಟ ಸ್ವಾಮಿಯ ಕೊಲ ಪ್ರತಿಷ್ಠೆಯ । ಇಮ್ಮೈಸಿರಿವಂತ ನೆನಿಪ ॥
ಕಮ್ಮಗೋಲನರೂಪ ಶ್ರೀಪಾಂಡ್ಯಭೂಪ ತಾ । ನೊಮ್ಮನದಿಂದ ಮಾಡಿಸಿದ ॥ (89)

ಆ ಸಮಯದೊಳೊಂದು ಬಂದು ವಜ್ರದಗುಂಡು । ಮೋಸದಿಂದಲಿಬಿದ್ದಿರಲು ॥
ಯೋಸುಪರಿಯಲೆತ್ತಿದರದು ಬಾರದೆ । ಬೇಸರ ಮಾಡುತಲಿಹುದು ॥ (90)

ಮಾಲೆಯಾಳದ ತಂತ್ರಿಗಳನು ಕರೆಸಿದ । ಕಲಿಯುಗ ಭರತ ಚಕ್ರೇಶ ॥
ಜಲಧಿಯ ಮೇರುವಿಂ ಮಥಿಸಿದಂದದೊಳಾ । ಶಿಲೆಯನು ಬಿಂಬದಿಂ ಮಥಿಸೆ ॥ (91)

ಆಗುಂಡು ಚೂರ್ಣವಾಗಲ್ಲಿಯೆ ಗನಗೊಳ್ಳೆ । ಬೇಗಲತ್ತಿತ್ತ ಚಲಿಸದೆ ॥
ಸ್ತೋಗಿನಿಂದಿರೆ ಬಿಂಬ ಧನವ ತಕ್ಕಡಿಯೊಳು । ತೂಗಿಸಿಕೊಟ್ಟನುಯವರ್ಗೆ ॥ (92)

ನಾಸಾದೇಶದ ಭವ್ಯ ಸಂಘವ ಬರಿಸಿ ನು । ತ್ತಾನಂದದಿಂದ ಭವ್ಯರನು ॥
ತಾನು ಮಾಡಿಸಿದನು ಬಿಂಬ ಪ್ರತಿಷ್ಠೆಯ । ನಾನದ ಮುಂದೆ ಪೇಳುವೆನು ॥ (93)

ಕ್ರಮ ಮಾತ್ರವನಿಲ್ಲಿ ಪೇಳುವೆನವರ ಸಂ । ಭ್ರಮವನು ಮುಂದೆ ನಾ ಪೇಳ್ವೆ ॥
ಸಮಯೋಚಿತದಷ್ಟು ಪೇಳದಿದ್ದರೆ । ಕ್ರಮಪರಿಪಾಡಿಗದು ಸಾಕೆ ॥ (94)

ಪುನರುಕ್ತ ಭಯದಿಂದ ಪೇಳತಿಲ್ಲದಕೆ ನೀ । ವನುಮತಿಗೊಡಬೇಕು ಭವ್ಯ ॥
ಜನರಿಲ್ಲವಾಗಿಲ್ಲಿ ಬೇಳ್ಕರೆಯನುಚಿತ । ಮುಂದೆ ಪೇಳುವುದು ತಾನುಚಿತ ॥ (95)

ಆಕಾಶವನು ಚುಂಬಿಸುವ ಬಿಂಬಕೆ ದಾಮ । ವೇಕೆಂದು ಮಾಡಿಸಿತಿಲ್ಲ ॥
ಲೋಕವೆಲ್ಲವು ಕಂಡು ಸಮ್ಯಕ್ತ್ವಗುಣವನು । ಸ್ವೀಕರಿಸಲಿಯೆಂದು ಬಿಟ್ಟ ॥ (96)

ಕಂಡು ಕೈಕರಣವ ಸಂಹಿತೆಯೊಳಗೆ ಪ್ರ । ಚಂಡ ಪೂಜಾಚಾರ್ಯರಿಂದ ॥
ಕೊಂಡ ವೇದಿಕೆ ಧ್ವಜ ವರಮಂತಾದುವ । ಗಂಡರ ಗಂಡ ಮಾಡಿಸಿದ ॥ (97)

ಜಿನಸಂಹಿತೆಯ ಮಾರ್ಗದೊಳುನಾಂದಿ ಮಂಗಲ । ವನು ವಾಸ್ತುಪೂಜೆಯ ಬಳಿಕ ॥
ಜಿನನಾಥಮಾಡಿಸಿ ಯದರಿಂದ ಮುಂದಣ । ದಿನದ ಪಗಲೊಳು ಸಂಭ್ರಮದಿ ॥ (98)

ಧ್ವಜದ ಪ್ರತಿಷ್ಠೆಯ ಸ್ತಂಭವನೆತ್ತಿಸಿ । ತ್ರಿಜಗದೊಡೆಯನುತ್ಸವಕೆ ॥
ಸುಜನ ಶಿರೋಮಣಿ ಮಾಡಿಸಿದನು ಭವ್ಯ । ವೃಜಿನವ ಲೋಪಿಸುವಂತೆ ॥ (99)

ಆ ರಾತ್ರಿಯೊಳಗೆ ಸಿಂಗರವಾರಿ ಯುವತಿಯ । ರಾರತಿಯಂದದೊಳಿದ್ದು ॥
ಮೇರುಗಿರಿಯ ನಾಗಕನ್ಯೆಯರೇರುವಂ । ತೇರಿದರಾ ಭೂಧರವ ॥ (100)

ಭವಹರ ಜಿನನುತ್ಸವಕೆ ಪದಿನೆಂಟು ಭೇ । ದವನುಳ್ಳ ಧಾನ್ಯವತಂಸಿ ॥
ಯುವತಿಯರಿಂದ ಬಿತ್ತಿಸಿಯಂಕುರವ ಮ । ತ್ತವರ್ಗಿತ್ತ ಬಾಗಿನಗಳನು ॥ (101)

ಧಾಮ ಶುದ್ಧಿಗೆ ಧಾಮಃಲ್ಲದಿದ್ದುದರಿಂದ । ಸ್ವಾಮಿಯ ಬಿಂಬ ಶುದ್ಧಿಯನು ॥
ತಾ ಮಾಡಿಸಿದನು ಸರ್ವೌಷಧಿಯಿಂದ । ಲಾ ಮಹಾರಾಜಾಧಿ ರಾಜ ॥ (102)

ಗರ್ಭಾವತರಣ ಜನ್ಮಾಭಿಷೇಕಗಳೆಂಬ । ನಿರ್ಭರ ಕಲ್ಯಾಣ ವಿಲ್ಲ ॥
ಗರ್ಭಶಯನ ಪಾಕಾರಶುದ್ಧಿಗಳೊಳಂ । ತಭ್ರಾವವೆಂದು ಮಾಡಿಸಿದ ॥ (103)

ಪರಿನಿಷ್ಕ್ರಮಣ ವಿಧಿಯನು ಮಾಡಿಸಿದನು । ಪರಮಾನಂದದೊಳಂದು ॥
ಧುರಧೀರ ವೀರಕುಮಾರ ಪಾಂಡ್ಯೇಂದ್ರನು । ಧರೆಯೆಲ್ಲ ಪೊಗಳುವಂದದೊಳು ॥ (104)

ನಯನೋನ್ಮೀಲನ ವಿಧಿಯ ಮಾಡಿಸಿದನು । ಜಯವೆಂದು ಮುಖವಸ್ತ್ರಗಳೆಯೆ ॥
ಅಯಮೇವ ಕೇವಲಿಯೆಂದು ಭಾವಿಸಿಯಾ । ಕ್ರಿಯೆಯ ಮಾಡಿಸಿದರೆಯತಿಗಳು ॥ (105)

ಇಂತು ಪ್ರತಿಷ್ಠಾವಿಧಿಯ ಮಾಡಿಸಿ ಭೂ । ಕಾಂತ ಮಹಾಭಿಷೇಕಗಳು ॥
ಮುಂತಾದ ವಿಧಿಯನು ನಾಲ್ಕು ದಿವಸಪರಿ । ಯಂತರ ಮಾಡಿ ಕಡೆಯಲಿ ॥ (106)

ಸಾವಿರದೆಂಟು ಕುಂಭದೊಳಭಿಷೇಕವ । ನಾವಿಧಿಯಿಂದ ಮಾಡಿಸಿದ ॥
ಭೂವಲಯದೊಳನ್ನಿಲ್ಲವೆಂದೆಂಬತೆ ಮ । ಹಾ ವಿಭವದಿ ಮಾಡಿಸಿದ ॥ (107)

ಶಾಂತಿಕ ವಿಧಿಯ ಮಾಡಿಸಿದನು ಧರೆಗೆಲ್ಲ । ಶಾಂತಿಯಾಗಲಿಯೆಂದೆನುತ ॥
ಅಂತೆ ನವಗ್ರಹ ಶಾಂತಿ ಹವನಪ ನಿ । ನ್ನಿಂತಿಲ್ಲವೆನಲು ಮಾಡಿಸಿದ ॥ (108)

ಪರಮ ಭವ್ಯರ ಸಂಘ ವೊಂಭತ್ತು ಲಕ್ಷಸಾ । ಸಿರ ತಪಸ್ವಿಗಳ ಸಮೂಹ ॥
ನೆರೆದುದು ಗುಮ್ಮಟ ಸ್ವಾಮಿಯುತ್ಸಹದೊಂದು । ಸಿರಿಯನದೇನ ಬಣ್ಣಿಪೆನು ॥ (109)

ಪಟ್ಟೆಯ ಹಚ್ಚಡವೈದೈದು ನಿಷ್ಕವ । ಕೊಟ್ಟ ನಾಚಾರ್ಯರೆಲ್ಲರಿಗೆ ॥
ಕೊಟ್ಟನುಳಿದ ತಪಸ್ವಿಗಳ್ಗೆಲ್ಲೊಂದೊಂದು । ಘಟ್ಟಿ ನಿಷ್ಕವ ಹಚ್ಚಡವ ॥ (110)

ಕವಿಗಮಕಿಗಳು ವಾದಿಗಳು ವಾಗ್ಮಿಗಳೆಂಬ । ವಿವಿಧ ವಿದ್ವಜ್ಜನಕೆಲ್ಲ ॥
ಅಮರಮನೋರಥ ಪರಿಪೂರ್ಣವಪ್ಪಂ । ತವನಿಪಾಲಕ ಕೊಟ್ಟನಾಗ ॥ (111)

ಹೊನ್ನಂಡೆ ಜೇಕೊಳಪಿಯೊಳು ವಸಂತವ । ಮನ್ನೆಯರೆಲ್ಲರಾಡಿದರು ॥
ಪನ್ನೀರು ಕುಂಕುಮ ರಸದಿಂದ ಮಿಶ್ರಿತ । ಚೆನ್ನಕುಂಕುಮ ಜಲದಿಂದ ॥ (112)

ನಾನಾ ವಿಧದ ದಾನಗಳನು ಕೊಟ್ಟನು । ದೀನಾನಾಥರಿಗೆಲ್ಲ ॥
ಮಾನವ ರೂಪಿನ ಕಲ್ಪವೃಕ್ಷವೆಯೆಂದು । ಜ್ಞಾನಿಗಳೆಲ್ಲ ಪೊಗಳಲು ॥ (113)

ಉಡುಗೊರೆ ಉಚಿತವ ದೊರೆದೊರೆಗಳಗೆಲ್ಲ । ಪೊಡವಿಯಾಣ್ಮನು ಕೊಟ್ಟನಾಗ ॥
ಬೆಡಗಿನ ದಾನಸಮುದ್ರದ ನೆಲೆಯನು । ಕಡೆಗಂಡು ಬಣ್ಣಿಪರಾರು ॥ (114)

ಇಂತು ಗುಮ್ಮಟ ಸ್ವಾಮಿಯ ಪ್ರತಿಷ್ಠೆಯ ನಾ । ಕಂತುಸನ್ನಿಭ ಪಾಂಡ್ಯರಾಯ ॥
ಸಂತೋಷದಿಂದ ಮಾಡಿಸಿ ಸುಖ ಸಾಮ್ರಾಜ್ಯ । ಸಂತತಿಯೊಳಗಿರುತಿರ್ದ ॥ (115)

ಇದು ಶ್ರುತಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತ್ರೆಯ । ಪದದೊಳ್ಮೂರನೆಯದು ಸಂಧಿ ॥ (116)

(ಮೂರನೆಯ ಸಂಧಿ ಸಮಾಪ್ತಂ)

## ನಾಲ್ಕನೆಯ ಸಂಧಿ.

ಶ್ರೀಮದಮರನಾಥ ಮೌಲಿಕೀಲಿತ ರತ್ನ । ಧಾಮ ರಂಜಿತ ನಖ ಕಿರಣ ॥
ಸೋಮಾರ್ಕ ಕೋಟಿ ಪ್ರಕಾಶ ಸನ್ಮತಿದೋರು । ಸ್ವಾಮಿ ಶ್ರೀ ಗುಮ್ಮಟ ಜಿನಪ ॥ (1)

ಆ ಜಿನಪತಿಯ ನಿತ್ಯೋತ್ಸವ ಮಂಗಲ । ಪೂಜೆಗೆ ಗ್ರಾಮ ಸೀಮೆಗಳ ॥
ರಾಜಿಪ ಶಾಸನಾಂಕಿತ್ರವ ಮಾಡಿಸಿತಾಳು । ರಾಜದಾರೆಯನೆರಕೊಟ್ಟ ॥ (2)

ಪಂಚಮಹಾವಾದ್ಯ ಮೂರು ಹೊತ್ತಿನ ಪೂಜೆ । ಪಂಚಕಜ್ಜಾಯ ಪಾಯಸದಿಂ ॥
ಕುಂಚದ ಹೆಂಗಳು ಪಾತ್ರ ಭೋಗಗಳು । ಪಂಚ ಶ್ರೀ ಬಲಿ ಮುಂತಾದ ॥ (3)

ವಿನಿಯೋಗಕೆ ಕಟ್ಟುಮಾಡಿಸಿದನು ಮುಂದೆ । ದಿನದಿನ ನಡೆಸುವಂದದೊಳು ॥
ವಿನಯ ವಾರಿಧಿ ಚಂದ್ರ ವಿಭವದೇವೇಂದ್ರ ಮ । ತ್ತನುಪಮ ಪಾಂಡ್ಯರಾಜೇಂದ್ರ ॥ (4)

ಈ ರೀತಿಯೊಳು ಧರ್ಮ ಸಾಮ್ರಾಜ್ಯ ಸುಖವ ಕು । ಮಾರ ಪಾಡ್ಯೇಂದ್ರ ಭೋಗಿಸುತ ॥
ವಾರಿಜಾಕ್ಷಿಯರಿಗೆ ಮಾರಶರಧಿ ಗಂ । ಭೀರ ಸುಧೀರ ಮಂದಾರ ॥ (5)

ಮತ್ತೊಂದು ದಿನದೊಳು ರಾಜಾಧಿರಾಜರ । ಮೊತ್ತದೊಳು ನೃಪವರನು ॥
ಮತ್ತಗಜವನೇರಿ ಬಂದ ವೈಭವದಿಂ । ದುತ್ತಮ ಗುರುವಿನ ಬಳಿಗೆ ॥ (6)

ದೇವರ ದೇವನ ಬಲಗೊಂಡು ವಂದಿಸಿ । ಭಾವಶುದ್ಧಿಯೊಳಾ ಜಿನನ ॥
ಆ ವಿಧಿಯೊಳಗಭಿಷೇಕ ಪೂಜೆಯಮಾಡಿ । ಭಾವಿಸಿಕೊಂಡ ವ್ರತಗಳ ॥ (7)

ಅಲ್ಲಿ ಸಮಾಪ್ತಿಯ ಮಾಡಿ ಯಾಗುರುವಿ । ದ್ದಲ್ಲಿಗೆ ಬಂದು ಭೂವರನು ॥
ಮೆಲ್ಲಡಿಗೆರಗಿ ಪೂಜಿಸಿ ಯಾ ವ್ರತಗಳ । ಸೊಲ್ಲಿಸಿ ನಿಷ್ಠಾಪಿಸಿದನು ॥ (8)

ಎಲೆ ಸ್ವಾಮಿ ನಿನ್ನ ಪ್ರಸಾದದಿಂದಿಂತೀ । ಬಲುದೊಡ್ಡ ಕಾರ್ಯವ ನಾನು ॥
ಸಲೆಪೂರ್ತಿಯನು ಮಾಡಿಸಿದೆನು ನೀನೆನ್ನ । ಕುಲವನುದ್ಧರಿಸಿದೆ ಯೆಂದು ॥ (9)

ಇನ್ನೊಂದು ಕಾರ್ಯವ ಕೇಳಬೇಕೆಂದು ನಾ । ನುನ್ನಿಸಿದೆನು ಎಲೆ ಸ್ವಾಮಿ ॥
ಚೆನ್ನಾಗಿಯದನು ನಿರೂಪಿಸಬೇಕೆಂದು । ಬಿನ್ನಹವನು ಮಾಡಿದನು ॥ (10)

ಪ್ರಥಮಾನುಯೋಗ ದೊಳಾದಿಜಿನೇಶನ । ಕಥೆಯೊಳೀ ಗುಮ್ಮಟ ಜಿನನ ॥
ಕಥೆಯ ನಿರೂಪಿಸಿ ನೀವೆನಗೆಂದರಿ । ಮಥನ ಕುಮಾರ ಪಾಂಡ್ಯೇಂದ್ರ ॥ (11)

ಕರಗಳ ಮುಗಿದಿಂತು ಕೇಳಲಾ ನೃಪನಿಗೆ । ಗುರುಕುಲತಿಲಕನಿಂತೆಂದು ॥
ನಿರವಿಸಿದನು ಪೂರ್ವಕಥೆಯೊಳರ್ದಂದದೊ । ಳುರು ಮುದದಿಂದದೆಂತೆನಲು ॥ (12)

ಈ ಜಂಬುದ್ವೀಪದ ಪೂರ್ವವಿದೇಹದ । ರಾಜಿಪ ವತ್ಸ ವಿಷಯದ ॥
ಸೋಜಿಗವಾದ ಪ್ರಭಂಕರಿ ಪುರದಧಿ । ರಾಜಶ್ರೀ ಪ್ರೀತಿವರ್ಧನನು ॥ (13)

ಚತುರಂಗುಲ ಚಾರಣ ಮಹಿತಾಶ್ರಮ । ಯತಿಗೆ ಕಾಂತಾರ ಭಿಕ್ಷೆಯನು ॥
ಅತಿಭಕ್ತಿಯಿಂದ ಮಾಡಿಸೆ ಪಂಚಾಶ್ಚರ್ಯ । ಕ್ಷಿತಿ ನುತಿಪಂತಾದುದಾಗ ॥ (14)

ಅವನ ಸೇನಾಪತಿಯಾಗಿರ್ದ ಜಿನ । ನನನ ದಾನದ ಮಹಿಮೆಯನು ॥
ಸುವಿವೇಕಿ ಕಂಡುತ್ತಮ ಭೋಗಾವನಿಗಾ । ಯುವಿಯ ಕಟ್ಟಿದವಾನಂದದೊಳು ॥ (15)

ಅಲ್ಲಿ ಜನಿಸಿ ಯಾರು ಸಾವಿರ ಸೊಬಗಾಂತ । ಬಿಲ್ಲಿನುತ್ಸೇಧದೊಳೆಸೆವ ॥
ಸಲ್ಲೀಲೆಯಿಂದಾಂತು ಬಾಲಸೂರ್ಯನ ಕಾಂತಿ । ಯಲ್ಲಿ ತಾನೊಪ್ಪಿದ ನಾರ್ಯ ॥ (16)

ಮೂರು ಪಲ್ಯಾಯುಷ್ಯ ಕಲ್ಪವೃಕ್ಷದಿವ್ಯಾ । ಹಾರ ಬದರೀಯು ಕಾಯು ॥
ತೋರದ ಸಾರವನುಂಬನು ಸುಖದಿಂದ । ಮೂರು ದಿವಸಕೊಂದು ಬಾರಿ ॥ (17)

ಭೋಜನ ಭೂಷಣ ದೀಪಜ್ಯೋತಿರ್ಮಯ । ಭಾಜನ ಗೃಹವಸ್ತ್ರಮಾಲ್ಯಾ ॥
ರಾಜಿಪ ಮಧ್ಯ ತೂರ್ಯಾಂಗದಿಂ ದಶವಿಧ । ಮಾಜಿಸಿಹುದು ಕಲ್ಪವೃಕ್ಷ ॥ (18)

ಅವು ತಂತಮ್ಮ ಪೆಸರಿನಿಂದ ಒಪ್ಪುವ । ವಿವಿಧ ವಸ್ತು ಕೊಡುತಿಹವು ॥
ಅವರಿಂದ ಭೋಗೋಪಭೋಗವ ನನುಭವಿ । ಸುವರನುದಿನ ದಂಪತಿಗಳು ॥ (19)

ಇಂತು ಸುಖವ ಮೂರು ಪಲ್ಯಾಯುಷ್ಯ ಪ । ರ್ಯಂತ ತಾನುಂಡು ಜೀವಿಸಿದ ॥
ಅಂತ್ಯದೊಳೀಶನ ಕಲ್ಪದೊಳಗೆ ನಿ । ರಂತರ ಸುಖಕೆಡೆಯಾದ ॥ (20)

ಸರಸ ಪ್ರಭಾಕರವೆಂಬ ವಿಮಾನ ದೊ । ಳರಸು ಪ್ರಭಾಕರ ನೆಂಬ ॥
ಸುರನಾಗಿ ಪುಟ್ಟಿಯಂತರ್ಮುಹೂರ್ತದೊಳು । ನೆರೆದುಷಟ್ಪರ್ಯಾಪ್ತಿಗಳೊಳು ॥ (21)

ಅಮಳುವಾಸಿನ ಪಡಿದೆರೆಯಲೊಡನೆ ಬಂ । ದಮರಿಯರೆಲ್ಲರಾರತಿಯ ॥
ಸುಮನೋ ವೃಷ್ಟಿಯ ಮಾಡಿಯುತ್ತಿದರಲ್ಲಿ । ಯಮರರೋಲೈಸೆ ತಾ ಕಂಡು ॥ (22)

ಹದಿನಾರು ವರುಷದ ಸುಕುಮಾರನಂದದೊ । ಳೊಪ್ಪಿದೆವ ದಿವ್ಯಾಂಬರ ಮಾಲ್ಯ ॥
ಪದಿನಾರು ತೆರದಾಭರಣ ಭೂಷಿತನಾಗಿ । ಮುದದಿಂದ ತಾನಿರಲಂದು ॥ (23)

ಎಲ್ಲಿಂದ ಬಂದೆ ತಾ ನೆಲ್ಲಿಯ ಭೂಮಿ ಯಿ । ದೆಲ್ಲಿಯ ಸುಖ ಸಾಮ್ರಾಜ್ಯ ॥
ಎಲ್ಲಿಯ ಪರಿವಾರ ವೇನು ಕಾರಣದಿಂದೀ । ವಲ್ಲಭೆಯರು ಬಂದರೆನಗೆ ॥ (24)

ಎಂದುಧ್ಯಾನಿಸಲವಧೀ ಜ್ಞಾನ ಪುಟ್ಟಿತಾ । ನಂದದಿಂ ಮುನ್ನಿನ ಭವದ ॥
ಸಂದ ಪ್ರಪಂಚವನರಿದುದಾನಂದದಿಂ । ದಂದಾ ಮಹಿಮೆಗೆ ಮೆಚ್ಚಿದನು ॥ (25)

ದಾನ ಪ್ರಶಂಸೆಯು ಮಾಡಿ ಸರೋವರ । ಸ್ನಾನವ ಮಾಡಿಯಾ ದೇವ ॥
ಆನಂದದಿಂದಭ್ರಯಾನದೊಳೊಪ್ಪುವ । ತಾನಕೃತ್ರಿಮ ಜಿನಗೃಹವ ॥ (26)

ಬಲಗೊಂಡು ಪೊಕ್ಕು ಜಿನೇಶನ ಬಿಂಬಕೆ । ಜಲಗಂಧಾಕ್ಷತೆ ಪುಷ್ಪದಿವ್ಯ ॥
ಫಲ ದೀಪ ಧೂಪ ನೈವೇದ್ಯ ದಿಂದರ್ಚಿಸಿ । ವಿಲಸಿತಾರ್ಘ್ಯವನೆತ್ತಿ ಬಳಿಕ ॥ (27)

ಶಾಂತಿ ಧಾರೆಯನು ಪುಷ್ಪಾಂಜಲಿಯನು ಮಾಡಿ । ಮುಂತಿರ್ದ ದೇವಾಂಗನೆಯರ ॥
ಸಂತೋಷಬಡಿಸಿ ಸಂಭ್ರಮದಿಂದ ಬಂದನಿ । ಶ್ಚಿಂತತೆಯಿಂದರಮನೆಗೆ ॥ (28)

ಎಸಳುಗಂಗಳ ಬರೆನೊಸಲ ಪೊಣ್ಮುವ ಪೊಚ್ಚ । ಪೊಸಜವ್ವನದ ತುಂಬಿಗುರುಳ ॥
ಅಸಿನಡುವಿನ ಬಟ್ಟಮೊಲೆಯ ಭಾವೆಯ ರೋ । ಳೊಸೆದು ಸಂಭೋಗ ಶೃಂಗಾರ ॥ (29)

ರಸದೊಳೋಲಾಡಿ ಮಾನಸದಿ ದಿವ್ಯಾಹಾರ । ಯೆಸೆವ ಸುರಭಿ ನಿಸ್ವನ ॥
ಪಸರಿಪ ದಿವ್ಯದೇಹದ ಕಾಂತಿಯಿಂದ ಸಂ । ತಸವೆತ್ತನಾದೇವಗಲಿ ॥ (30)

ಆದಿ ಜಿನೇಶನು ಲಲಿತಾಂಗದೇವತಾ । ನಾದ ಭವದೊಳಾತನಿಗೆ ॥
ಈ ದಿವಿಜನು ಪರಿವಾರ ದೇವನುತಾ । ನಾದನು ಪರಮ ಸ್ನೇಹದೊಳು ॥ (31)

ಸುರಪರಿವಾರ ಪ್ರೋಲಗವ ಮಾಡಲು ತನ್ನ । ಸುರಸತಿಯರೊಡಗೂಡಿ ॥
ಚಿರಕಾಲ ಪರಮ ಸುಖವನುಂಡು ಬಂದೀ । ಧರೆಯ ಪೂರ್ವವಿದೇಹದಲಿ ॥ (32)

ತೀವಿದ ಸೀತಾನದಿ ಯುತ್ತರದ ಪುಷ್ಕ । ಳಾವತಿಯೆಂಬ ವಿಷಯದ ॥
ಭೂವಲಯದೊಳುತ್ಪಲ ಖೇಟ ಪುರದೊಳಾ । ದೇವ ಬಂದಪರಾಜಿತನ ॥ (33)

ಲಲನೆಯಾರ್ಜವೆಯೆಂಬಳಾಕೆಯುದರದೊಳು । ನೆಲಸಿಯಾ ಕಂಪನೆಂದೆಂಬ ॥
ಛಲದಂಕ ಮಲ್ಲಸೇನಾಪತ್ರಿಯಾದ ಭೂ । ತಳಪತಿ ವಜ್ರ ಜಂಘನಿಗೆ ॥ (34)

ಆತಗೆ ಸಾಧಿಸಿ ಕೊಟ್ಟು ಸಾಹ್ರಾಜ್ಯವ । ನಾತನ ಜೀವಿತಾಂತ್ಯದೊಳು ॥
ಪ್ರೀತಿಯಿಂ ದೃಢಧರ್ಮ ಮುನಿಯ ಸನ್ನಿಧಿಯೊಳು । ನೂತನ ತಪವನುಧರಿಸಿ ॥ (35)

ಭಾವಿಸಿ ತಪಗಳ ಜೀವಿತಾಂತ್ಯದೊಳದೆ । ಗ್ರೈವೇಯಕದೊಳಹ ಮಿಂದ್ರ ॥
ದೇವನಾದನು ತಪದಿಂದ ಲಾಗದ ಕಾರ್ಯ । ವಾವುದು ಮೂರೋಕದಲ್ಲಿ ॥ (36)

ಇಪ್ಪತ್ತಮೂರು ಸಾಸಿರ ಕಾಲಪರ್ಯಂತ । ವೊಪ್ಪುವ ದಿವ್ಯ ಸುಖವನು ॥
ತಪ್ಪದೆ ತಾನುಂಡು ಜಂಬೂದ್ವೀಪದೊ । ಳಪ್ಪ ಪೂರ್ವ ವಿದೇಹದಲಿ ॥ (37)

ವರಪುಷ್ಕಳಾವತಿ ವಿಷಯದೊಳೊಪ್ಪುವ । ಸಿರಿಪುಂಡಲೀಕಿಣಿಯೆಂಬ ॥
ಪುರವನಾಳ್ವ ವಜ್ರಸೇನ ಶ್ರೀ ಕಾಂತೆಗಾ । ಸುರಬಂದು ಸುಕುಮಾರನಾದ ॥ (38)

ಪುರುಜಿನಪತಿ ವಜ್ರನಾಭಿ ತಾನಾದಂದು । ವರಮಹಾಬಾಹು ಯೆಂದೆಂಬ ॥
ಪರಮ ಸ್ನೇಹದ ತಮ್ಮನಾದನು ಸಂಸಾರ । ಶರಧಿಯ ವೈಚಿತ್ರ್ಯ ವೆಂತೊ ॥ (39)

ಆ ವಜ್ರನಾಭಿಗೆ ಚಕ್ರರತ್ನವು ತ । ನ್ನಾವಾಸದೊಳು ಪುಟ್ಟಲಾಗ ॥
ದೇವ ವಿದ್ಯಾಧರ ಮುಂತಾದವರ ಕೈಯ । ಲಾವಿಭು ಕಪ್ಪವ ಕೊಂಡು ॥ (40)

ತನ್ನಯ ತಮ್ಮ ಸುಬಾಹು ಮಹಾಬಾಹು । ಸನ್ನುತ ಪೀಠಮುಂತಾದ ॥
ಚೆನ್ನಿಗರೊಡಗೂಡಿ ಸಾಮ್ರಾಜ್ಯ ಸುಖವನು । ಚೆನ್ನಾಗಿ ತಾನನುಭವಿಸಿ ॥ (41)

ಕಡೆಯೊಳುಗ್ರೋಗ್ರ ತಪಗಳನು ತಮ್ಮಂದಿ । ರೊಡಗೂಡಿಯಾನೃಪಾಲ ॥
ಬಿಡದೆ ತಾ ಷೋಡಶ ಭಾವನೆಗಳನಂದು । ಕಡುಜಾಣ್ಕೆಯಿಂದ ಭಾವಿಸಿದ ॥ (42)

ಆ ಮಹಾಬಾಹು ಚಾರಾವ ಮಿಂದ್ರನ ದೇಹ । ಧಾಮ ಧವಲವರ್ಣವಂದು ॥
ರಾಮಣೀಯಕ ಏಕರತ್ನಿ ಉತ್ಸೇಧದೇಹವಂ । ದಾಮುಹಮನಿಗೊಪ್ಪಿಹುದು ॥ (43)

ಲೋಕನಾಳಿಯ ಮಧ್ಯದೊಳಗಿಪ್ಪ ಪುದ್ಗಲಾ । ನೀಕವೆಲ್ಲವನರಿವವಧಿ ॥
ಆಕಾರ ಸಮಚತುರಸ್ರ ಸಂಸ್ಥಾನ । ತಾಕಡು ಚೆಲ್ವನಾಂತೊಪ್ಪಿಹುದು ॥ (44)

ಮೂವತ್ತ ಮೂರು ಸಾವಿರವರುಷಕೆ ವೊಮ್ಮೆ । ದಿವ್ಯಮಾನಸಿಕಾಹಾರ ॥
ಮೂವತ್ತ ಮೂರು ಸಾಗರ ಪರಮಾಯುಷ್ಯ । ಭವ್ಯಹಮಿಂದ್ರಗೊಪ್ಪಿಹುದು ॥ (45)

ಅನಿತೆ ಪಕ್ಷಕೆಯೊಮ್ಮೆ ಯುಚ್ಛ್ವಾಸ ನಿಶ್ವಾಸ । ಜನಿಸುವುದಾದೇವನಿಗೆ ॥
ತಮುತಮಗಿಂದ್ರರಾದುದರಿಂದ ಹಮಿಂದ್ರ । ರೆನೆ ನೆನೆಯುವ ಅಪ್ರವಿಚಾರದ ಸುಖವು ॥ (46)

ಕಾಯ ಪ್ರವಿಚಾರ ಮುಂತಾದ ಸುಖದಿಂ । ದಾಯಾಕ ರಹಿತದ ಸುಖವು ॥
ನ್ಯಾಯದಿಂ ನೋಡಲನಂತ ಗುಣಿತವಾದಾ । ದೇಯ ಸಂಸಾರ ಸುಖದೊಳು ॥ (47)

ಸಾತವೇದಿನಿಯ ಕರ್ಮದ ತೀವ್ರೋದಯ । ವಾತನಿಗಿದ್ದುದರಿಂದ ॥
ಮಾತೇ ನೌಪಾಧಿಕವಲ್ಲದಿರ್ದದರಿಂ । ದಾತೆರದಾ ಸುಖಕೆಣೆಯೆ ॥ (48)

ಸರ್ವಾರ್ಥಸಿದ್ಧಿಯ ಸುಖವನುಣುತಲಾ । ಗೀರ್ವಾಣ ಷತ್ರಿಯಿರಾತ್ರಿರಲು ॥
ಉರ್ವಿಯೊಳಗೆ ಹುಂಡಾವಸರ್ಪಿಣಿಬಂದು । ಪರ್ವಿಹುದೀ ಭರತದೊಳು ॥ (49)

ಹತ್ತು ಕೋಟಾಕೋಟಿ ಸಾಗರವಾ ಕಾಲ । ಮತ್ತದರೊಳಗೆ ಷಟ್ಕಾಲ ॥
ಬಿತ್ತರದಿಂದ ದತ್ತೊನಪು ದವರೊಳಗೊಂ । ಬತ್ತು ಕೋಟಾಕೋಟಿಯುದಧಿ ॥ (50)

ಭೋಗ ಭೂಮಿಯು ಕಾಲ ಒಂದು ಕೋಟಾ ಕೋಟಿ । ಸಾಗರ ಕವಾರ್ವನಿಯು ॥
ಭೋಗದಿಂದಿರ್ಪದು ಸುಷಮ ದುಷ್ಷಮ ವೆಂಬ । ಭೋಗಮುಹಿಯು ಕಾಲದೊಳು ॥ (51)

ಎರಡು ಕೋಟಾಕೋಟಿ ಸಾಗರೋಪಮದೊಳು । ಚರಮ ಪಲ್ಯಾಷ್ಟ ಭಾಗದೊಳು ॥
ಇರಲಿಲ್ಲ ಕಲ್ಪವೃಕ್ಷದ ಕಾಂತಿ ಕಡಮೆ ಯಾ । ಗಿರೆ ಚಂದ್ರಸೂರ್ಯರಕಾಂತಿ ॥ (52)

ಪಸರಿಸಲಾಷಾಢ ಶುದ್ಧ ಪೂರ್ಣಿಮೆಯೊಳ । ಗೆಸವಪರಾಹ್ಣ ಕಾಲದೊಳು ॥
ಹಸನಾಗಿ ಪೂರ್ವಾಪರಾದ್ರಿಯ ಶಿಖರದಿಂ । ಪೊಸತೊಂದು ವಿಸ್ಮಯವೆಸಲು ॥ (53)

ಮೂಡಿದ ಚಂದ್ರಸೂರ್ಯರು ನಭವೆಂಬವ । ಧೂಟಿಯ ಕರ್ಣದೊಳೆಸೆವ ॥
ತಾಟಂಕವೆಂಬಂತೆ ಪೂರ್ವಾಪರಾದ್ರಿಯ । ಕೂಟದೊಳೊಪ್ಪಿದ ರಾಗ ॥ (54)

ಅದನು ಕಂಡಲ್ಲರ್ದ ಆರ್ಯರೆಲ್ಲರು ಬೆಚ್ಚಿ । ಬೆದರುತಿರ್ದರು ಕಂಡಾಗ ॥
ಹೆದರದಿರೆಂದ ಭಯುವ ಪ್ರತಿ ಶ್ರುತಿಯೆಂಬ । ಮೊದಲ ಸನ್ಮನು ಪೇಳ್ದನವರ್ಗೆ ॥ (55)

ಹಿತಮಿತ ಪ್ರಿಯ ವಚನಗಳಿಂದ ನುಡಿದವೀ । ಕ್ಷಿತಿಯೊಳಗಿನ್ನೀರೀತಿ ॥
ಪ್ರತಿಕೂಲ ನಿಮಗಿದರಿಂದಿಲ್ಲವೆಂದು ತಾ । ನತಿ ಮುದದಿಂ ಸಂತೈಸಿದನು ॥ (56)

ಮತ್ತೆ ಕೆಲವು ಕಾಲಪೋಗೆ ಸನ್ಮತಿಯೆಂ । ಬುತ್ತಮ ಮನುಪುಟ್ಟಿದನು ॥
ಬಿತ್ತರದಿಂ ನಭದೊಳು ತಾರಕೆಗಳ । ಮೊತ್ತ ತೋರಲು ಬೆಚ್ಚಿ ಜನರು ॥ (57)

ಇದಕೆನೀವಂಜದಿರೆಂದು ಸಂತೈಸಿದ । ನದರಿಂದ ಬಳಿಕ ಮೃಗಗಳು ॥
ಬೆದರಿಸಿ ಗರ್ಜಿಸುತಿರೆ ನಿಮಗಿವರೊಳು । ಮೊದಲಂತೆ ವಿಶ್ವಾಸ ಬೇಡ ॥ (58)

ಎಂದು ಕ್ಷೇಮಂಕರ ನೆಂದೆಂಬ ಕುಲಧರ । ನಂದು ಪೇಳದನಾ ಜನಕೆ ॥
ಸಂದು ಕೆಲವುಕಾಲ ಪೋಗೆ [ಮೃಗಂಗಳು] । ಬಂದು ಪಾಯ್ದುವು ಭಯದೋರಿ ॥ (59)

ಅಂದು ಕ್ಷೇಮಂಕರನವನು ನಿವಾರಿಸು । ವಂದವ ಪೇಳದನವರ್ಗೆ ॥
ಎಂದಿನಂದದಿ ತರುಗಳು ಫಲವಾಗದೆ । ಮಂದವಾಗಲು ಜನರೆಲ್ಲ ॥ (60)

ಬೆದರುತಿರಲು ಶಿ[ಖಿ] ಮಂವರನೆಂದೆಂಬ । ಚದುರ ಸತ್ಕುಲಧರನಾದ ॥
ಇದರೊಳಗಿಷ್ಟು ನಿಮಗೆ ನಿಮಗಿರಲೆಂ । ದದರ ಸೀಮೆಯನು ತೋರಿದನು ॥ (61)

ಬಳಿಕ ಸೀಮಂಕನೆಂದೆಂಬ ಕುಲಧರ । ಫಲಪುಷ್ಪಗಳು ಮೇರೆದಪ್ಪಿ ॥
ಕಲಹದಿಂ ಕೊಯ್ವುದ ಕಂಡವ ಬೇಲಿಯ । ಗಳು ಮುಂತಾದುವ ಮಾಡಿ ॥ (62)

ವಿಮಲ ವಾಹನನೆಂಬ ಮನುಗಜ ತುರಗದಿ । ವಿಮಲ ವಾಹನಗಳ ಪಿಡಿದು ॥
ಕ್ರಮದಿಂದ ಶಿಕ್ಷಿಸಿ ಯೇರುವುಪಾಯ । ಗಮಕದಿಂ ತೋರಿದನವನು ॥ (63)

ಅವನಿಂದಬಳಿಕ ಚಕ್ಷುಷ್ಮನೆಂದೆಂಬೊರ್ವ । ಸುವಿವೇಕಿ ಮನುಪುಟ್ಟಲಾಗ ॥
ಕುವರರ ಮುಖದರ್ಶನದಿಂದ ಸುಗಿವವಾ । ನವರಿಗೆ ಕೊಟ್ಟನಭಯವ ॥ (64)

ಅಲ್ಲಿಂದ ಬಳಿಕ ಯಶಸ್ವಿಯೆಂಬಂದೊರ್ವ । ಬಲ್ಲಿದ ಮನುಪುಟ್ಟಿದನು ॥
ಸೊಲ್ಲಿಸಿ ಪೆಸರಿಟ್ಟು ಕರೆವಾವನ ಕಾಲ । ದಲ್ಲಿಯು ಶಿಶುದಂಪತಿಗಳು ॥ (65)

ಚಂದಿರನುದಯಕೆ ಶಿಶುಗಳನಾಡಿಪ । ನಂದಭಿಚಂದ್ರನೆಂದೆಂಬ ॥
ಸಂದ ಮನುವಿನ ಕಾಲದೊಳು ದಂಪತಿಗಳು । ಚಂದದಿಂದವನು ಪೇಳ್ದಂತೆ ॥ (66)

ಅದರಿಂದ ಬಳಿಕ ಚಂದ್ರಾಭನೆನಿಪ ಮನು । ವುದಯಿಸಲವನ ಕಾಲದೊಳು ॥
ಚದುರ ದಂಪತಿಗಳು ಮಕ್ಕಳೊಡನೆ ಕೂಡಿ । ಮುದದಿಂ ಕೆಲದಿನ ನಿಹರು ॥ (67)

ಮುಗಿಲೊಡ್ಡಿ ಮಳೆಗರೆಯಲು ನದನದಿಗಳು । ಕ್ಷುದ್ರ ಸಮುದ್ರ ಮೊದಲಾಗಿ ॥
ಒಗೆದುವವನು ದಾಂಟುವ ಕುಶಲಿಗಳನು । ಬಗೆದು ಮರು ದೇವಪೇಳ್ದ ॥ (68)

ಹರುಗೋಲು ತೆಪ್ಪ ಸಂಕಾ ದೋಣಿಹಡಗನು । ಸೊರೆಯು ಕಾಯಿಗಳ ಮೊದಲಾದ ॥
ಕರಣೋಪಾಯ ಬಗೆದು ಮಾಡಿಸಿದನು । ತೊರೆಹಳ್ಳ ಸರನದಿಗಳಿಗೆ ॥ (69)

ಹಸುಗೂಸುಗಳಿಗೆ ಜರಾಯುಪಟಲ ಸುತ್ತಿ । ಮುಸುಕಿರಲವ ಕಳೆವಂತೆ ॥
ವಸುಮತಿಗರುಪಿ ಪ್ರಸೇನಜಿನ್ನಾಮದಿಂ । ದೆಸೆದನಾ ಕುಲಧರನಂದು ॥ (70)

ಶಿಶುಗಳನಾಭಿಕರ್ತನಕುಮಿಯುವ । ನೊಸೆದು ಪೇಳ್ದುದರಿಂದವಗೆ ॥
ಪೆಸರಾದುದು ನಾಭಿರಾಜನೆಂದಾವಸು । ಮತಿಯೊಳಗತಿ ಪೂಜ್ಯ ॥ (71)

ಐನೂರಿಪ್ಪತ್ತೈದು ಬಿಲ್ಲಿಡಿಯನುಪುಣ್ಯ । ಮಯಪೂರ್ವಕೋಟಿವರ್ಷಾಯು ॥
ನಯನೀತಿ ಸಂಪನ್ನನಾ ಮನುವಿನಪುಣ್ಯೋ । ದಯವನದೇನ ಬಣ್ಣಿಪೆನು ॥ (72)

ಬೆಳ್ಮುಗಿಲೆಂಬ ತೆರೆಯ ಮರೆಯೊಳು ನಿಂದು । ಮೊಳಗೆಂಬ ವಾದ್ಯದ ಗತಿಗೆ ॥
ಮಳೆಯೆಂಬ ಪುಷ್ಪಾಂಜಲಿಯ ಸೂಸಿದಳಾಗ । ಳಿಳೆಮಿಂಚೆಂಬ ನರ್ತಕಿಯು ॥ (73)

ಹದಮಳೆಗರೆಯಲಾಕೃಷ್ಟಪಚ್ಯಗಳಾದ । ಪದಿನೆಂಟುತೆರದ ಧಾನ್ಯಗಳು ॥
ಹದಬೆಳೆದಿರಗಿರೆ ತೃಣವೆಂದೆ ಬಗೆವ ಮ । ತ್ತದರ ಪ್ರಯೋಗವರಿಯದೆ ॥ (74)

ಹಸಿವು ತೃಷೆಗಳಿಂದಣ್ಮತ ಜನರೆಲ್ಲ । ದೆಸೆಗೆಟ್ಟು ನಾಭಿಯಿದ್ದೆಡೆಗೆ ॥
ಒಸೆದೈತಂದವನಡಿಗೆಯೆರಗಿಂತು । ಬೆಸಗೊಂಡರೆಲೆದೇವ ನಾವು ॥ (75)

ಮುನ್ನಿನಂದ ಕಲ್ಪವೃಕ್ಷಗಳನು ಬೇಡೆ । ಮನ್ನಿಸವೆಮ್ಮಯ ಮಾತ ॥
ಬನ್ನಬಡುತಲಿವೆ ಹಸಿವಿಂದ ಬೆಸಸೆಮ । ಗಿನ್ನೇನುಪಾಯ ವೆಂಬುದನು ॥ (76)

ಆಗಲವನುಕೃಪೆಯಿಂದಲಿಂತೆಂದನು ಚೆ । ನ್ನಾಗಿ ಬೆಳೆದ ಧಾನ್ಯಗಳ ॥
ಈಗಳೆ ಕೊಯ್ದೊಕ್ಕಿ ಮಿದಿದಕ್ಕಿಗಳ ಮಾಡಿ । ತೂಗಿ ಜಾಲಿಸಿ ಭಾಜನದೊಳು ॥ (77)

ಅಡಿಗೆಯ ಮಾಡುವುಪಾಯ ಮೊದಲಾಗಿರ್ದ । ಬೆಡಗಿನ ಕೈಕರಣಗಳ ॥
ನುಡಿದು ತೋರಿಸಲವರಂತೆಗೆಯ್ದುರು ತ । ಮ್ಮಡರನು ಪರಿಹರಿಸಿದರು ॥ (78)

ಭೋಗಭೂಮಿಯ ಕಡೆಯೊಳು ಕಲ್ಪತರುಗಳು । ಪೋಗಲಾ ನಾಭಿರಾಜೇಂದ್ರ ॥
ಆಗನೂತನ ಕಲ್ಪ ವೃಕ್ಷದಂತೊಪ್ಪಿದ । ಭೋಗಿಗಳರಸನಾಜನಕೆ ॥ (79)

ನರಸುರಲೋಕದ ಪೆಣ್ಗಳರೂಪಿನ । ಸಿರಿಯನೆಲ್ಲವನೊಂದುಗೂಡಿ ॥
ಕರುವಿಟ್ಟನೊ ಬಿದಿಯೆಂಬಂತೊಪ್ಪುವಳಲ್ಲಿ । ಮರುದೇವಿಯೆಂಬಳಾಕನ್ನೆ ॥ (80)

ಭಾವಿತೀರ್ಥಂಕರ ಜನಕನೆಂದು ಮರು । ದೇವಿಯನಾಭಿರಾಜನಿಗೆ ॥
ಆ ವಿಧಿಯಿಂದ ಮದುವೆಯ ಮಾಡಿಸಿದನು । ದೇವೇಂದ್ರ ಸರ್ವಸಂಭ್ರಮದಿ ॥ (81)

ಆ ಪುಣ್ಯ ದಂಪತಿಗಳು ತಮ್ಮ ಸರಸ ಸ । ಲ್ಲಾಪ ಕಲಾಕುಶಲದೊಳು ॥
ರೂಪು ಯೌವನ ಜಾಣ್ಮೆ ಗಾಡಿಮೋಡಿಗಳ ಕ । ಲಾಪದಿಂ ಸುಖವ ಪಡೆವರು ॥ (82)

ಭಾವಿತೀರ್ಥಂಕರ ಪುಣ್ಯೋದಯ ಪ್ರೇರಿತ । ದೇವೇಂದ್ರ ಬಂದೊಂದು ದಿವಸ ॥
ಭೂವಳಯದೊಳುತ್ತಮ ವೆಂದೆಣಿಸುವ । ಠಾವನು ತಾನಲ್ಲಿ ನೋಡಿ ॥ (83)

ಸೋಂಕಿಲ್ಲದಂತೆ ದಿಕ್ಕುಗಳನು ನೋಡಿ । ಶಂಕು ಸ್ಥಾಪನೆಯನು ಮಾಡಿ ॥
ಬಿಂಕದ ಸೋಮ ಸೂರ್ಯರವೀಥಿಯೊಡಗೂಡಿ । ತಾಂಕಡುಸೊಬಗಿನಿಂ ರಚಿಸಿ ॥ (84)

ಅಮರಾವತಿಯ ಪಟ್ಟಣದಂತೆ ಕಡುಸೊಬ । ಗಮರಿದಯೋಧ್ಯೆಯೆಂದೆಂಬ ॥
ರಮಣೀಯವಾದ ಪಟ್ಟಣವ ನಿರ್ಮಿಸಿದನು । ಸುಮನೋರಾಜ ತಾನಿಂತು ॥ (85)

ಆ ಪುರ ಲಕ್ಷ್ಮಿಯ ಮಧ್ಯದ ಕಾಂತಿಕ । ಲಾಪದಂ ತೊಪ್ಪುತಲಿಹುದು ॥
ಗೋಪುರ ಸಾಲವಸತಿಯುಬ್ಬಿದುಗುಲದಂ । ತಾಪರಿಖಾಜಲವಿಹುದು ॥ (86)

ಏಳು ನೆಲೆಯ ಮಣಿಹರ್ಮ್ಯಶಿಖರದೊಳು । ಡಾಳಿಪ ಚಿನ್ನದ ಕಲಶ ॥
ಬೀಳುವರಳವಲ್ಲ ಕಡುಸೊಬಗಿಂದ ರಾ । ಜಾಲಯ ಕಣ್ಗೊಪ್ಪುತಿಹುದು ॥ (87)

ದೇವೇಂದ್ರನೆ ಸೂತ್ರಧಾರಕನಾಗಿ ಮ । ತ್ತಾ ವಿಶ್ವಕರ್ಮ ನಿರ್ಮಿಸಿದ ॥
ಏವೇಳ್ವೆನಾಪುರದ ಚೆಲ್ವಿಕೆಯನು । ಭಾವಿಸಿ ನಾನಂತಿಂತೆಂದು ॥ (88)

ಅಲ್ಲಲ್ಲಿ ಕೆದರಿರ್ದ ದಂಪತಿಗಳತಾ । ನಲ್ಲಿ ಒಕ್ಕಲು ಮಾಡಿಸಿದ ॥
ಸಲ್ಲೀಲೆಯಿಂನಾಭಿರಾಜಗು ಮರುದೇವಿ । ಗಲ್ಲಿ ಪಟ್ಟವ ಕಟ್ಟಿದನು ॥ , (89)

ಆತಗೆ ಪ್ರಜೆಗಳನೆಲ್ಲರ ಕಾಣಿಸಿ । ಯಿತ್ತನೆ ನಿಮಗರಸೆಂದು ॥
ಪ್ರೀತಿಯಿಂ ದೇವೇಂದ್ರನು ಕಾಣಿಕೆಗೊಡಿಸಿ । ತಾತೆರಳವ ತನ್ನಯ ಪುರಕೆ ॥ (90)

ಆ ನಗರದ ಸನ್ನಿಧಿಯೊಳು ಸರಯುಯೆಂ । ಬಾನದಿಯೊಪ್ಪುತಲಿಹುದು ॥
ಆನಂದದೊಳು ಜಲಕ್ರೀಡೆಯ ಮಾಳ್ಪನು । ಆ ನಾಭಿರಾಜ ಪೌರರೊಳು ॥ (91)

ಅದರ ಪೇಲಾವನದೊಳು ಜಲಕ್ರೀಡೆಯ । ಚದುರ ತನ್ನಯ ರಾಣಿಗೂಡಿ ॥
ಮುದದಿಂದ ಮಾಳ್ಪನು ಗಜತುರಗಂಗಳ । ಹದುಳಿಸಿಯವನೇರುವನು ॥ (92)

ಇಂತು ನಾನಾತೆರನಾದ ವಿನೋದದಿಂ । ಕಂತು ಸನ್ನಿಭ ನಾಭಿರಾಜ ॥
ಸಂತೋಷದಿಂದಾ ಮರುದೇವಿಯೊಡನೆ ನಿ । ಶ್ಚಿಂತನಾಗಂದಿರುತಿರ್ದ ॥ (93)

ಇದು ಶ್ರುತಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯ ಪದದೊಳ್ನಾಲ್ಕನೆಯ ಸುಸಂಧಿ ॥ (94)

(ನಾಲ್ಕನೆಯ ಸಂಧಿ ಸಮಾಪ್ತಂ)

## ಐದನೆಯ ಸಂಧಿ.

ಧರೆಗೆ ಮೊದಲು ಕಾಮದೇವ ಭರತ ಚಕ್ರ । ಧರನನು ಜಾತ ಸಂಜೀವ ॥
ಸರಸ ಸತ್ಕವಿತೆಯ ಮತಿ ದೋರಿಸೆನಗೆನೀ । ಕರುಣದಿ ಗುಮ್ಮಟ ಸ್ವಾಮಿ ॥ (1)

ಆ ವಜ್ರನಾಭಿ ಚರಾಹ ಮಿಂದ್ರನಗ । ಭೂರ್ವತರಣ ಸನ್ನಿಧಿಯ ॥
ದೇವೇಂದ್ರ ನವಧಿಯಿಂದರಿದು ಕುಬೇರಗೆ । ತಾಬೆಸಸಿದ ನಿಂತೆಂದು ॥ (2)

ಇಂದು ಮೊದಲ್ಗೊಂಡು ಪದಿನೈದು ತಿಂಗಳು । ಸಂದ ಸಾಕೇತ ಪುರದೊಳು ॥
ನಿಂದು ಸುವರ್ಣ ರತ್ನದ ವೃಷ್ಟಿಯನು ಮಾಡಿ । ಸೆಂದೆನಲವನಂತ್ರ ಗೆಯ್ದ ॥ (3)

ಕುಲಗಿರಿ ರುಚಕ ಪರ್ವತದ ಶಿಖರದೊಳು । ನೆಲೆಯಾಗಿನಿಂದ ದೇವಿಯರ ॥
ಲಲನಾಮಣಿ ಮರುದೇವಿಯ ಸೇವೆಗೆ । ಕಳುಹಿದನತಿ ಮುದದಿಂದ ॥ (4)

ಮರುದೇವಿಯಮ್ಮನ ಬಳಗೆ ಬಂದಾಸುರ । ತರುಣಿಯರೆಲ್ಲ ಸಂಭ್ರಮದಿ ॥
ಕರಗಳ ಮುಗಿದು ಕಾಣಿಕೆ ಗೊಟ್ಟು ಕಂಡರು । ಹಿರಿದಾದ ಸಂತೋಷದಿಂದ ॥ (5)

ಆವುದು ಕಾರ್ಯವೆಲ್ಲಿಂದ ಬಂದಿರಿ ನೀವು । ನಾವು ಕಂಡರಿಯೆವು ನಿಮ್ಮ ॥
ಭಾವವ ಪೇಳಯೆಂದಾ ಸತಿಯರ ಮರು । ದೇವಿ ಕೇಳದಳು ಸಂತಸದಿ ॥ (6)

ನಿಮ್ಮ ಸೇವೆಯ ಮಾಡಲೆಂದು ದೇವೇಂದ್ರನು । ನಮ್ಮನು ಕಳುಹಿದ ನೀಗ ॥
ಗಮ್ಮನೆ ಬಂದೆವು ನಮಗಪ್ಪಣೆಯ ಕೊಡಿ । ಸಮ್ಮ ನಿಮ್ಮಯ ಸೇವೆಗೆನಲು ॥ (7)

ಸುರಸತ್ತಿಯರು ನೀವು ನಮ್ಮಯ ಸೇವೆಗೆ । ಬರುವರೆ ಕಾರಣವೇನು ॥
ಮರಸದೆಮ್ಮೊಳು ಪೇಳ ಬೇಕೆಂದು ಕೇಳ್ದ । ಮರುದೇವಿಯೆನ್ನ ಕೂಡೆ ॥ (8)

ಇನ್ನೆರುದಿಂಗಳ ಮೇಲೂರ್ವಸುಕುಮಾರ । ನಿನ್ನ ಗರ್ಭದೊಳುದಯಿಪನು ॥
ಪನ್ನಗ ಸುರನರಪತಿನುತ ನೆಂದಿಂದ್ರ । ಮುನ್ನಪೆಯವಧಿಯಿಂದರಿದು ॥ (9)

ನಮ್ಮನು ಕಳುಹಿದನೆಂದು ಪೇಳಲು ಮೈ । ಜುಮ್ಮನೆ ಪೊಂಪುಳಪೋಗಿ ॥
ಸುಮ್ಮನೆ ತಲೆಬಾಗಿರೆ ದೇವಿಯದ ಕಂಡು । ತಮ್ಮ ಸೇವೆಗಳ ಮಾಡಿದರು ॥ (10)

ಪಡೆದಿಯ ಮುಖಮಜ್ಜನವ ಮಾಡಿಸಿ ನಿಚ್ಚ । ತೊಡಿಸಿ ರನ್ನದ ತೊಡಿಗೆಗಳ ॥
ಉಡಿಸಿ ದೇವಾಂಗ ವಸ್ತ್ರವತಂದು ವೀಳ್ಯವ । ಕೊಡುವರು ದೇವಾಂಗನೆಯರು ॥ (11)

ಸತ್ತಿಗೆ ಪಿಡಿದು ಚಾಮರವ ಡಾಳಸುವರು । ಮತ್ತೆ ಕೆಲಬರವರೊಳಗೆ ॥
ತೆತ್ತಪಗಡೆ ಚದುರಂಗವ ನಾಡುವ । ರುತ್ತಮ ದೇವ ಕಾಂತೆಯರು ॥ (12)

ವೀಣೆ ಕಿನ್ನರಿ ಸರಮಂಡಲಗಳನು ಪ್ರ । ವೀಣೆಯರಾಗ ಬಾಜಿಪರು ॥
ಕಾಣಿಸಿ ಸಪ್ತ ಸ್ವರಂಗಳ ನವರಬಿ । ನ್ನಾಣವನೇನ ಪೇಳುವೆನು ॥ (13)

ಮಂದಾರ ಮಾಲೆಯ ಮುಡಿಸಿ ತಿಲಕವಿಟ್ಟು । ತಂದು ತೋರುವರು ಕನ್ನಡಿಯ ॥
ಮಂದಗಮನೆಯರು ಮರುದೇವಿಯಮ್ಮಗಾ । ನಂದದಿಂದಾ ಕನ್ಯೆಯರು ॥ (14)

ಹಾವ ಭಾವಗಳು ವಿಲಾಸ ವಿಭ್ರಮದಿಂದ । ದೇವಾಂಗನೆಯರು ನರ್ತಿಪರು ॥
ಪಾವುಜ ತಾಳ ಮದ್ದಳೆ ಗೀತಲಯ ಗೂಡಿ । ಭಾವೆಯ ಮುಂದೆ ರಂಗದೊಳು ॥ (15)

ಶ್ರೀದೇವಿ ಮೊದಲಾದ ದೇವ ಸತಿಯರೆಲ್ಲ । ರಾದರದಿಂದ ಮಾಡಿದರು ॥
ಆದೇವಿಯ ಗರ್ಭ ಶೋಧನೆಯನು ಶುಚಿ । ಯಾದೌಷಧಿಗಳ ಕೊಟ್ಟು ॥ (16)

ಪಳುಕಿನ ಬೊಂಬೆಯು ಸಕ್ಕರೆ ನಿಂಬೆಯು । ಪುಳಯಿಂದ ತೊಳೆದಂದದೊಳು ॥
ಕಳಕಳಸುವ ನಿರ್ಮಲವಾದ ಕಾಂತಿಯಾ । ಲಲನೆಗೆ ಬೆರ್ಚತ್ತೇನೆಂಬೆ ॥ (17)

ಒಂದು ದಿವಸ ಮಾಣಿಕ ಗಂಡು ಮರು ದೇವಿ । ಬಂದು ನಾಲ್ಕನೆಯ ದಿಸದಲಿ ॥
ಚಂದದಿಂದವರಲಂಕರಿಸೆ ಸೊಬಗುಮುನ್ನಿ । ನಂದದಿಂ ನೂರ್ಮಡಿಯಾಯ್ತು ॥ (18)

ಬಿಳಿಯ ದುಕೂಲವ ನಿರಿವಿಡಿದುಡಿಸಿ ಮೇ । ಬಳೆಯೊಳ ಗವನಳವಡಿಸಿ ॥
ತೊಳಗುವ ಮುತ್ತಿ ನಾಭರಣ ಮೂಗುತಿಯುತಂ । ದಳವಡಿಸಿದರ ಮರಿಯರು ॥ (19)

ಚಂದಿರನಧಿ ದೇವಿಯೊ ವಾಗ್ದೇವಿಯೊ । ಸಂದ ಶ್ರೀ ನಾಭಿ ನೃಪತಿಯ ।
ಕುಂದದ ಕೀರ್ತಿ ಲಕ್ಷ್ಮಿಯೊ ಇವಳೆಂಬಂತೆ । ಮಂದಗಮನೆಯೊಪ್ಪಿದಳು ॥ (20)

ಸೋಗೆ ಗಣ್ಣಿಗೆ ಕಾಡಿಗೆಯಮೃತವ । ರಾಗದಿಂದುಣಿಸಿ ಪ್ರಖರವ ।
ಆಗಳೆ ಮುಡಿಸಿ ಚಂದನದುಪ್ಪ ಲೇಪಿಸಿ । ಯಾಗರುವೆಯ ಸೆಜ್ಜೆವನೆಗೆ ॥ (21)

ಕಳುಹಿಸಿ ತಿರುಗಿದರಲ್ಲಿಗೆ ತ್ರಕ್ಕಮಂ । ಗಲವಸ್ತುಗಳ ನನುಗೊಳಿಸಿ ॥
ತೊಳಗುವ ಶಯ್ಯಾ ಗೃಹದೊಳ ಗೊಪ್ಪುವ । ಸೆಳೆಮಂಚದೊಳ ಗೊಪ್ಪುತಿರ್ಪ ॥ (22)

ರಾಜ ಹಂಸೆಯು ತುಪ್ಪುಳು ವಾಸಕೇರಿಯಾ । ರಾಜ ಹಂಸನ ಪಕ್ಕದೊಳು ।
ರಾಜಿಸುತಿದ್ದಳು ರೋಹಿಣಿಯಾದ್ವಿಜ । ರಾಜನೊತ್ತಿನೊಳೊಪ್ಪುವಂತೆ ॥ (23)

ಕುಳಿತು ಕರ್ಪುರವೀಳ್ಯ ಗೊಂಡು ಸುಖದೊಳಿರ್ದ । ಬೆಳಗಪ್ಪ ಜಾವದೊಳಾಗ ॥
ಲಲನೆಯರರಸಿ ಕಂಡಳು ಷೋಡಶ ಸ್ವಪ್ನ । ಗಳನನುಕ್ರಮದಿಂದ ಪೇಳ್ವೆಂ ॥ (24)

ಭಾರಿಯ ಪಕ್ಕದ ಮಣಿಗಂಟೆಯಿಂದ ಶೃಂ । ಗಾರವಾದಾ ದೇವಗಜವ ॥
ನಾರಿಯರರಸಿ ಕಂಡಳು ಸ್ವಪ್ನದೊಳು ಕಾವ । ನೇರುವ ಮದಗಜ ಗಮನೆ ॥ (25)

ಧರೆಯನು ಖುರದಿಂದ ಕೆದರುತ ಕೋಡ್ಗಳಿಂ । ದಿರಿವುತ ಗಂಭೀರವಾದ ॥
ಸ್ವರಗೊಡುತಿದಿರಾಗಿ ಬಪ್ಪಧವಲ ವರ್ಣ । ದುರುವೃಷಭನ ಕಂಡಳಾಗ ॥ (26)

ಗಿರಿಶಿಖರದಿನಿಂದು ತನ್ನಲಾಂಗೂಲವ । ಶಿರದೊಳಗಿಟ್ಟು ಗರ್ಜಿಸುತ ॥
ಸಿರಿವೆತ್ತ ಬಿಳಿಯ ಕೇಸರಿಯನು ಕಂಡಳಾ । ಹರಿಮಧ್ಯೆ ಕನಸಿನೊಳಾಗ ॥ (27)

ಕರಿಗಳೆರಡು ಪೂರ್ಣಕುಂಭವ ತಮ್ಮಯ । ಕರಗಳಿಂದೆತ್ತಿ ಮಜ್ಜನವ ॥
ಭರದಿಂದ ಮಾಡಿಸುವಾ ಮಹಾ ಲಕ್ಷ್ಮಿಯ । ಸರಸಿಜಮುಖಿ ಕಂಡಳಾಗ ॥ (28)

ಸುರಭಿ ಗಂಧಕೆ ಮಧುಕರಗಳು ಬಂದು ಝೇಂ । ಕರಿಸುತೆರಗುವ ಮಂದಾರ ॥
ವರಮಾಲೆಗಳೆರಡನು ಕಂಡಳು ಪುಣ್ಯ । ಚರಿತೆ ಸರೋಜ ಸುಗಂಧಿ ॥ (29)

ಹದಿನಾರು ಕಲೆಯಿಂದ ಸೊಬಗಾಂತು ಬಂದುನಿಂ । ದುದಯಗಿರಿಯ ಶಿಖರದೊಳು ॥
ಮುದವನು ಪುಟ್ಟಿಪ ಪೂರ್ಣ ಚಂದ್ರನಯಿಂದು । ವದನೆ ಕಂಡಳು ಕನಸಿನೊಳು ॥ (30)

ಸರಸಿಜ ಕುಟ್ಮಳ ಕುಚೆಗಳ ತನ್ನಯ । ಕರದಿಂದ ಸೋಂಕೆ ಪದ್ಮಿನಿಗೆ ॥
ಹರುಷವ ಪುಟ್ಟಿಸು ತುದಯ ವಾದರ್ಕನ । ತರುಣಿ ಕಂಡಳು ಕನಸಿನೊಳು ॥ (31)

ಮುಳುಗುತೇಳುತ ಸ್ಥಿರವಾಗಿ ನೀರೊಳುನಿಂದು । ಹೊಳೆವು ತತ್ತಿತ್ತಚಲಿಸುವ ॥
ಎಳೆವಾಳೆ ಮೀನ್ಗಳ ಯುಗಲಮನಾಗ ಚಾ । ಪಳನೇತ್ರೆ ಕಂಡಳುತ್ಸಹದಿ ॥ (32)

ಕುಂಭಸ್ಮೌಕ್ತಿಕ ಮಾಲೆಯೊಪ್ಪುವ ಶಾತ । ಕುಂಭ ನಿರ್ಮಿತವಾದ ಪೂರ್ಣ ॥
ಕುಂಭಯುಗವ ಕನಸಿನೊಳು ಕಂಡಳು ಪೂರ್ಣ । ಕುಂಭ ಕುಚದ ಕೋಮಲಾಂಗಿ ॥ (33)

ತಾವರೆ ನೆಯ್ದಿಲು ಚೆಂಗಣಿಗಿಲೆಗಳ । ಪೂವಿನ ಪರಿಮಳದಿಂದ ।
ತೀವಿದ ನಿರ್ಮಲ ಜಲದ ಸರಸಿಯುನಾ । ಭಾವೆ ಕಂಡಳು ಕನಸಿನೊಳು ॥ (34)

ಸುಳಿಯೊಬ್ಬುಳಕೆ ತುಂತುರು ತೆರೆನೊರೆವಿಂದು ' ಗಳಮೋಹರ ಬಿಂದೆಸೆವ ।
ಇಳತ ಭರತದಿಂದ ಗಂಭೀರ ಪೆತ್ತಿಹ । ಜಲನಿಧಿಯುನು ಕಂಡಳಾಗ ॥ (35)

ರನ್ನದ ಚೀರಣಿಗೆಲಸದಿಂ ಸೊಬಗಾಂತ । ಚಿನ್ನದ ಕಳಸದಿಂದೆಸೆವ ।
ಉನ್ನತ ಸಿಂಹಾಸನವನು ಕಂಡಳಾ । ಚೆನ್ನೆಯರರಸಿ ಸ್ವಪ್ನದೊಳು ॥ (36)

ದೇವವಿಮಾನದ ಸಡುವೆ ಸೊಬಗನಾಂತು । ದೇವೇಂದ್ರನ ಭವನವನು ॥
ಕೋವಿದೆಯರ ತಲೆವಣಿಯೆಂದೆನಿಸುವ ಮರು । ದೇವಿ ಕಂಡಳು ಕನಸಿನೊಳು ॥ (37)

ನಾಗಲೋಕದ ನಾಗಕನ್ನೆಯ ರೊಡಗೂಡಿ । ನಾಗೇಂದ್ರ ನಿಪ್ಪ ಭವನವ ॥
ಭೋಗಿಗಳರಸನ ರಾಣಿ ಕನಸಿನೊಳ । ಗಾಗ ಕಂಡಳು ಮುದದಿಂದ ॥ (38)

ಕತ್ತಲೆಗಳ ಪೊತ್ತವನು ತಮ್ಮ ಕಿರಣದಿಂ । ದೊತ್ತರಿಸುತ ಲೊಪ್ಪುತಿರ್ಪ ॥
ಮುತ್ತು ರತ್ನಗಳ ರಾಶಿಯುನು ಕಂಡಳು ಭೂ । ಪೋತ್ತಮ ನುತ್ತಮ ರಮಣಿ ॥ (39)

ಧೂಮಸಂಸರ್ಗದಿಂದಗಲಿ ಜ್ವಾಲೆಗಳಿಂದ । ರಾಮಣೀಯಕವಾದ ಶಿಖಿಯು ॥
ಆಮಹಾಸತಿಕನಸಿನೊಳು ಕಂಡಳು ಪುಣ್ಯ । ಧಾಮ ಜಿನೇಶನ ಜನನಿ ॥ (40)

ಮದಧಾರೆಯಿಂದೊಪ್ಪುವ ಶುಭ್ರವಾದಾನೆ । ಮೊದಲಾದ ಶುಭ ಸ್ವಪ್ನಗಳನು ॥
ಪದಿನಾರನು ಕಂಡು ಕಡೆಯೊಳು ತನ್ನಯ । ವದನವ ಪೊಗುವ ವೃಷಭನ ॥ (41)

ಮುದದಿಂದ ಕಂಡು ಮಂಗಲ ಸಂಗೀತವಾ । ದ್ಯದಧ್ವನಿಗೇಳಯೆಚ್ಚತ್ತು ॥
ವದನ ಪ್ರಕ್ಷಾಲನ ಮೊದಲಾದ ಕ್ರಿಯೆಗಳ । ಸದಮಲ ಚರಿತೆತಾಮಾಡಿ ॥ (42)

ಪಸದನವನು ಕೊಟ್ಟು ದೇವಾಂಗ ವಸ್ತ್ರವ ನೊಸೆದುಟ್ಟು ಪತಿಯ ಸನ್ನಿಧಿಗೆ ॥
ಮಿಸುಪ ಮೊಗದ ಕಾಂತಿ ಒಸಗೆಯ ಪೇಳ್ವಂತೆ । ಪಸರಿಸಲೆಯ್ತಂದಳಾಗ ॥ (43)

ಕುಳಿತು ಸಿಂಹಾಸನದೊಳು ಕಂಡ ಕನಸನು । ಜಲಜವದನೆ ಪೇಳ್ದಳಾಗ ॥
ತಿಳಿದಾಫಲಗಳ ನೆಲ್ಲವ ನಾಕೆಗೆ । ತಿಳುಹಿದ ನತಿಮುದದಿಂದ ॥ (44)

ಮೂಜಗದೊಡೆಯ ನಿನ್ನಯ ಗರ್ಭದೊಳು ಬಂದು । ರಾಜಿಸುವೀ ಭರತದೊಳು ॥
ಸೋಜಿಗವೆನಿಪ ಧರ್ಮವನು ಸೃಷ್ಟಿಸಿ ಮುಕ್ತಿ । ರಾಜೀವ ಮುಖಿಗರಸಹನು ॥ (45)

ಎಂದು ಪೇಳದ ಪತಿ ವಚನ ಚಂದ್ರಿಕೆಗಾ । ನಂದಿಸಿ ಕೈರವದಂತೆ ॥
ಮಂದಸ್ಮಿತೆಯಾಗಿ ಮೂಜಗ ದೊಡೆತನ । ಬಂದು ಕೈಸಾರ್ದಂತಿರಲು ॥ (46)

ಶ್ರೀವಜ್ರನಾಭಿ ಚಾರಾಹ ಮಿಂದ್ರನು ಮರು । ದೇವಿಯುದರ ಸರಸಿಯೊಳು ॥
ತಾವರೆಯಂತವ ತರಿಸಿರೆ ಯಾವಧಿಯಿಂ । ದೇವೇಂದ್ರನರಿದು ಸಂತಸದಿಂ ॥ (47)

ಭವನ ವಂತರ ಜ್ಯೋತಿಷ್ಕ ಕಲ್ಪೇಂದ್ರರ । ನಿವಹದೊಡನೆ ಕೂಡಿಬಂದು ॥
ವಿವಿಧ ವಿಭವದಿಂದಾವಧು ವರರನು । ಸವಿನಯದಿಂದ ಸಿಂಗರಿಸಿ ॥ (48)

ಆಗಲೆ ಗರ್ಭಾವತರಣ ಕಲ್ಯಾಣವ । ಸಾಗುಮಾಡಿಸಿ ದೇವೇಂದ್ರ ॥
ರಾಗರಸ ದೊಳೋಲಾಡಿ ದಿವಿಜರೊಡ । ನಾಗಲೈದಿದ ತನ್ನಪುರಿಗೆ ॥ (49)

ಪಳುಕಿನ ಕೊಡದೊಳು ಸೊಡರ್ಗುಡಿ ಸೊಬಗಿಂದ । ಬೆಳಗುವಂತಾ ತೇಜೋನಿಧಿಯು ॥
ಬೆಳಗುತ್ತಮೃತಗರ್ಭ ಗೃಹದೊಳ ಗೊಪ್ಪುವ । ತೆಳುವಸುರಿಗೆ ಬಾಧೆಗೊಡದೆ ॥ (50)

ಇಳೆಯೆಲ್ಲ ವೃದ್ಧಿ ಯಾದರು ಮರುದೇವಿಯ । ತೆಳುವಸುರಿಗೆ ವೃದ್ಧಿಯಿಲ್ಲ ॥
ಮಳೆಯಿಂದ ಹೊಳೆಗಳು ಹೆಚ್ಚುವುವಲ್ಲದೆ । ಜಲನಿಧಿಗೆ ಹೆಚ್ಚು ಕುಂದುಂಟೆ ॥ (51)

ಮೂರು ಬೋಧಗಳಾವ ನೊಳಗುಂಟೆಂಬುದ । ತೋರಿಸುವಂತೆ ತ್ರಿವಳಿಯು ॥
ಬೀರುತ ಸೊಬಗನು ಮಾಜದೊಪ್ಪಿದುದಾಗ । ಳೀರುಂಜವ್ವನೆಯುದರದೊಳು ॥ (52)

ಮೂರು ನಾಲ್ಕಾಡಿಯು ಮೀರೇಳು ಸ್ವರ್ಗದ । ನಾರಿಯರಂತೆ ಸುಖವನು ॥
ನೀರೆ ಪಡೆವಳಾ ನೀರೆ ನೀರನದೊಂದು । ಮೇರೆಯ ನೇನೆಂದು ಪೇಳ್ವೆ ॥ (53)

ನಗೆಯೊಳು ಬಿಳ್ವಲ್ಲದಾ ನೀರೆಯ ನಗೆ । ಮೊಗದೊಳು ಬಿಳ್ಪೆಂಬುದಿಲ್ಲ ॥
ಸೊಗಸುವ ಮಿಸುನಿಯು ಪಾಲಿಂದ ತೊಳೆದರು । ಪೊಗರೇರದ ಬೆಳ್ಪಹುದೇ ॥ (54)

ಕ್ಷೀರ ಸಮುದ್ರದ ಜಲಧಿ ಮಜ್ಜನವರು । ಮೇರು ಸಿಂಹಾಸನ ದೊಳಗೆ ॥
ಸೇರಿ ಕುಳಿತು ಮಾಡಬೇಕೆಂಬ ಬಯಕೆಯಾ । ನಾರಿಗೆ ತೋರಿತ್ತೇನೆಂಬೆ ॥ (55)

ಸಂಗೀತ ಗೋಷ್ಠಿಯೊಳೊಮ್ಮೆ ಸಾಹಿತ್ಯತ । ರಂಗಗೋಷ್ಠಿಯೊಳೊಮ್ಮೆಯೊಮ್ಮೆ ॥
ಮಂಗಲವಾದ್ಯ ನರ್ತನದ ಗೋಷ್ಠಿಯೊಳೊಮ್ಮೆ । ಅಂಗನೆ ಹೊತ್ತುಗಳೆವಳು ॥ (56)

ಈ ತೆರದಲಿ ನವಮಾಸ ತುಂಬಲು ಜಗ । ನ್ಮಾತೆ ಚೈತ್ರದ ಕೃಷ್ಣ ಪಕ್ಷ ॥
ಆತಿಥಿ ನವಮಿಯೊಳುತ್ತ ರಾಷಾಢದೊ । ಳ್ನೂತನ ಬ್ರಹ್ಮಯೋಗ ದೊಳು ॥ (57)

ದಿನಕರನುದಯ ವಾಗುವ ಸಮಯ ದೊಳಾದಿ । ಜಿನಪನ ಪಡೆದಳುತ್ಸಹದಿ ॥
ದಿನಕರ ಕೋಟಿ ಪ್ರಕಾಶನ ಸುಖದಿಂದ । ಮನು ಕುಲತಿಲಕನ ರಾಣಿ ॥ (58)

ಆರುಋತುಗಳೊಳಗಾಗುವ ಫಲಪುಷ್ಪ । ಓರಂತೆ ಒಂದೇ ವೇಳೆಯೊಳು ॥
ತೋರಿದುವಾ ವಿಭುವಿನ ಜನ್ಮೋತ್ಸವದೊಳ । ಗಾರಿ ಗಾಮೋದ ವಾಯ್ತಿಲ್ಲ ॥ (59)

ಸರಸಿಯ ಜಲಗಳು ಕಲುಷತೆಯನು ಬಿಟ್ಟು । ಹಿರಿದು ನಿರ್ಮಲವಾದುವಾಗ ॥
ಸರಸಿಯಂದದಿ ಯಾಕಾಶ ದಿಕ್ಕುಗಳೆಲ್ಲ । ಪರಿಹರಿಸಿದುವು ಕಲ್ಮಷವ ॥ (60)

ಅಲ್ಲಲ್ಲಿ ಗುಡಿತೋರಣ ರಂಗವಲ್ಲಿಗಳು । ಝುಲ್ಲಿ ಪತಾಕೆ ಮೇಲ್ಗಟ್ಟು ॥
ಪಲ್ಲವ ಕಳಸ ಕನ್ನಡಿ ಯಿಂದಾಪುರ । ವೆಲ್ಲ ಸಿಂಗರ ವಾದುದಾಗ ॥ (61)

ವಾಸವ ಕುಳಿತ ಸಿಂಹಾಸನ ನಡುಗೆಮ । ತ್ತಾ ಸಮಯದೊಳು ಜಯಘಂಟೆ ॥
ಲೇಸಾಗಿ ಧ್ವನಿದೋರಿದುವು ಆವೆಯ ಕಲ್ಪ । ವಾಸಿಗರಾಸನದಲ್ಲಿ ॥ (62)

ಅಂತರವಾಸ ದೊಳಗೆ ಭೇರಿ ಮೊಳಗಿದ । ವಂತರಿಕ್ಷದ ಜ್ಯೋತಿಷ್ಕರೊಳು ॥
ಅಂತರಿಸದೆ ಸಿಂಹನಾದಗಳಾದುವು । ಸಂತಸವಿಗೆ ಮೂಜಗಕೆ ॥ (63)

ಭುವನ ವಾಸಿಗರ ಭವನದೊಳು ಶಂಖನಾ । ದವು ಪೂರೈಸಿತು ತಮ್ಮ ॥
ಭುವನವೆಲ್ಲವನು ಭುಂಭುಂ ಭೂಯೆಂದೆನು । ತವತರಣದೊಳಾಜಿನನ ॥ (64)

ಕಂಪಿಸೆ ಸಿಂಹಾಸನನಾಗತಿಳಿದು ನಿ । ಳಂಪನಾಯಕನವಧಿಯೊಳು ॥
ಪೊಂಪುಳಯೋಗಿ ಸಿಂಹಾಸನದಿಂದೆದ್ದು । ತಾಂ ಪೊಡವಟ್ಟನಾದೆಸಗೆ ॥ (65)

ಹದಿನಾರು ಸ್ವರ್ಗದ ದೇವನಿಕಾಯುಬಂ । ದೊದವಿರಲಾ ಸಮಯದೊಳು ॥
ಮುದದಿಂದ ದೇವೇಂದ್ರನಭ್ರಗಜವನೇರಿ । [ಸುಪತಿ] ಶಚಿಯನೊಡಗೂಡಿ (66)

ಸುರಪರಿವಾರ ತಂತಮ್ಮ ವಾಹನವೇರಿ । ಬರಲು ಸಪ್ತಾನೀಕವೆರಸು ॥
ಸುರಪತಿ ಸಂಭ್ರಮ [ದೊಡಗೂಡಿ] ಸಾಕೇತ । ಪುರದ ಸನ್ನಿಧಿಗಾಗ ಬೇಗ ॥ (67)

ಬಂದರಮನೆಯರಾಜಾಂಗಣದೊಳು ತಾನು । ನಿಂದು ಶಚಿಯನು ಕಳುಹಲು ॥
ಅಂದಾನಂದದಿ ನವರತ್ನಮಯ ಪುಣ್ಯ । ಮಂದಿರವನು ಪೊಕ್ಕು ಬಳಿಕ ॥ (68)

ಬಾಲಭಾಸ್ಕರನಂತೆ ತೊಳಗಿದೋರುವ ಜಿನ । ಬಾಲಕನನು ಕಂಡು ಕರವ ॥
ಬಾಳದೊಳಟ್ಟು ಮುಗಿದು ಬಲಗೊಂಡುನಿಂ । ದಾಳಿ ನೋಡಿದಳಾಗ ॥ (69)

ಜನನಿಗೆ ಮಾಯಾ ನಿದ್ರೆಯುಪುಟ್ಟಿಸಿ । ಜಿನನಂದದೊಳಗೊಂದು ಶಿಶುವ ॥
ಜನನಿಯ ಮುದ್ದಿಟ್ಟು ತನ್ನ ಕೈಯೊಳಗಾ । ಜಿನ ಕುವರನನೆತ್ತಿಕೊಂಡು ॥ (70)

ಮಂಗಲಗೀತವ ಪಾಡುತೆ ಮುಂದೆ ದೇ । ವಾಂಗನೆಯರು ನಡೆತರಲು ॥
ಮಂಗಲ ಮಹಿಮನ ಕರದೊಳಗಾಂತಿಂದ್ರ । ನಂಗನೆ ಬಂದಳುತ್ಸಹದಿ ॥ (71)

ತರಣಿಮಂಡಲವನಂಡಲೆವ ಕುಮಾರನ । ವರದಿವ್ಯದೇಹದ ಕಾಂತಿ ॥
ಪರೆಯಲಿಂದ್ರನ ನಾಸಿಕರಣ್ಗಳೆಂಬಾ । ಸರಸಿಜವಲರ್ದವೇನೆಂಬೆ ॥ (72)

ಆ ಶಿಶುವನು ತಂದು ತನ್ನ ಕೈಯೊಳು ಕೊಡೆ । ಲಾಶಚಿಕಂಡು ಸಂತಸದಿ ॥
ವಾಸವ ಸಾಸಿರಕಣ್ಣಾಲದೆಂದು ಮ । ತ್ತಾಸೆ ವಟ್ಟನು ದೃಷ್ಟಿಗಳಗೆ ॥ (73)

ತನ್ನಂಕದೊಳಗಾ ಶಿಶುವನಿರಿಸಿಕೊಂಡು । ಸೊನ್ನೆವೆಟ್ಟಕೆ ನಡೆಯೆಂದು ॥
ಸನ್ನೆದೋರಿದನು ಕೈಯೆತ್ತಿದೇವೇಂದ್ರನು । ಬಿನ್ನಣದಿಂ ಸುರತತಿಗೆ ॥ (74)

ಇಂದುಮಂಡಲದಂತೆಸೆವ ಬೆಳ್ಗೊಡೆಯನು । ತಂದೀಶಾನೇಂದ್ರನು ಪಿಡಿಯೆ ॥
ಅಂದು ಮಹೇಂದ್ರ ಸನತ್ಕುಮಾರೇಂದ್ರರು । ತಂದಿಕ್ಕಿದರು ಚಾಮರವ ॥ (75)

ದೇವದುಂದುಭಿ ಮೊಳಗಿದುವೆತ್ತನೋಡಲು । ದೇವಾಂಗನೆಯರ ನರ್ತನವು ॥
ತೀವಿತು ಜಯಘೋಷಣೆ ದಿಕ್ತಟವನಾ । ದೇವನ ಜನ್ಮೋತ್ಸವಕೆ ॥ (76)

ದೇವರ್ಕಳಾಭರಣದ ಕಾಂತಿ ನಭದೊಳು । ತೀವಿರಲಿಂದ್ರ ಚಾಪಗಳು ॥
ಭಾವಿಸಿ ನೋಡಲು ಹಲವು ಮೂಡಿದುವೆಂಬ । ಭಾವವ ಪುಟ್ಟಿಸುತಿಹವು ॥ (77)

ಪೋಗುಪೋಗುತ ಮಂದರಗಿರಿಯನು ಕಂಡ । ರಾಗಸವಟ್ಟಿಯೊಳಾಗ ॥
ಆ ಗಿರಿತರು ಶಾಖೆಯಿಂದ ಕೈಬೀಸಿನಿಂ । ಬೇಗಕರೆದುದೊಯೆಂಬಂತೆ ॥ (78)

ಮಂದಾರ ಪುಷ್ಪದಿಂದರ್ಘ್ಯವನೆತ್ತಿ ಆ । ನಂದದಿಂ ನಿರ್ಜರೋದಕವ ॥
ತಂದು ಪಾದ್ಯವಿತ್ತು ಜಿನನಿದಿರ್ಗೊಂಡಂತಾ । ಮಂದರಗಿರಿಯೊಪ್ಪಿತಾಗ ॥ (79)

ಅದರೀಶಾನದಿಕ್ಕಿನ ಪಾಂಡುಕವನ । ದುದರದೊಳೊಪ್ಪುತಲಿರ್ಪ ॥
ಸದಮಲ ಪಾಂಡುಕ ಶಿಲೆಗೆಯ್ದಿದರು ತಮ್ಮ । ಸದಳವವನದೊಳಗಿಟ್ಟು ॥ (80

ಶತಯೋಜನ ವಿಷ್ಕಂಭವೈವತ್ತುಸ । ನ್ನುತಯೋಜನದ ವಿಸ್ತಾರ ॥
ಅತಿಶಯವಾದರ್ಧ ಚಂದ್ರನಾಕಾರರಂ । ಜಿತ್ರಮಾಪಾಂಡುಕ ಶಿಲೆಯು ॥ (81)

ಅಷ್ಟಯೋಜನದುತ್ಸೇಧವನಾದಿಸಿ । ವಿಷ್ಟಾಷ್ಟನುಂಗಲದಿಂದ ॥
ವೇಷ್ಟಿತವಾದ ಗಿರಿಯುನಡುವೆ ಸಿಂಹ । ವಿಷ್ಟರವಿಹುದೇನನೆಂಬೆ (82)

ಎಡಬಲದೊಳಗಿರ್ದ ಭದ್ರಾಸನಂಗಳ । ನಡುವೆಸಿಂಹಾಸನವಿಹುದು ॥
ಕಡುಸೊಬಗಿಂದ ನಿಷದ ನೀಲಗಿರಿಗಳ । ನಡುವಣ ಮೇರುವಿನಂತೆ ॥ (83)

ಆ ಸಿಂಹ ಪೀಠದ ನಟ್ಟನಡುವೆ ತಂ । ದಾಸುರಪತಿ ಸ್ಥಾಪಿಸಿದನು ।
ಆ ಶಿಶುವನು ಪೂರ್ವಮುಖವಾಗಿ ಸುರರುವಿ । ಲಾಸದಿಂ ಜಯಜಯವೆನಲು ॥ (84)

ರುಂದ್ರ ರತ್ನದ ಕಾಂತಿಯಿಂದೊಪ್ಪುತಿರ್ದ । ಮೃಗೇಂದ್ರ ವಿಷ್ಟರದೊಳಾಜಿನನು ॥
ಇಂದ್ರ ಚಾಪದ ನಟ್ಟನಡುವೆ ಶೋಭಿಪ ಬಾಲ । ಚಂದ್ರನಂತೊಪ್ಪಿದನಾಗ ॥ (85)

ಮೇರುವಿನಗ್ರಭಾಗದಿ ಮೊದಲ್ಗೊಂಡಾ । ಕ್ಷೀರಸಮುದ್ರ ಪರ್ಯಂತ ॥
ಧಾರಿಣಿಯಾಗಿ ನಿಂದುದು ಸುರಸಮಿತಿಯಿ । ನ್ನಾರುಬಣ್ಣಿಪರಾ ಸೊಬಗ ॥ (86)

ಮಿಸುನಿಯ ಕುಂಭಕೇರವುಪಚ್ಚೆಯ ಕುಂಭ । ಪೊಸನೀಲ ರತ್ನದ ಕುಂಭ ॥
ಪಸರಿಪ ಕಾಂತಿಯ ಪದ್ಮರಾಗವ ಕುಂಭ । ವೆಸೆದುವು ಸುರರಕ್ಕೈಯೊಳಗೆ ॥ (87)

ಕ್ಷೀರಸಮುದ್ರದ ಜಲವನು ಸುರಪರಿ । ವಾರ ವೆಲ್ಲವು ತುಂಬಿಕೊಡಲು ॥
ಭೋರೆಂದು ದೇವದುಂದುಭಿಮೊಳಗಲು ಸುರ । ನಾರಿಯಪಾಡೆ ಮಂಗಲವ ॥ (88)

ದೇವಗಣಿಕೆಯರು ನರ್ತನವನು ತಾಳ । ವಾಪ್ರಜ ಮುರಜ ಗತಿಯೊಳು ॥
ತಾವಾಡುತ್ತಿರೆ ಮಂಗಲ ಪಾತ್ರಂಗಳ । ದೇವಾಂಗನೆಯರಾಂತಿರಲು ॥ (89)

ಪರಿಚಾರಕರಾಗೆ ಉಳಿದ ದೇವೇಂದ್ರರನು । ಪರಿಪೂರ್ಣ ಕಲಶವನೀಡೆ ।
ಧರಿಸಿ ಸೌಧರ್ಮ ಈಶಾನ ಕಲ್ಪೇಂದ್ರರು । ಕರಗಳ ಸಾಸಿರದೆಂಟ ॥ (90)

ಅಧಿವಾಸನೆ ಕಳಸಾರ್ಚನೆಗಳ ಮುನ್ನ । ವಿಧಿ ಪೂರ್ವಕದಿಂದ ಮಾಡಿ ॥
ಸುಧೆಯಿಂದ ಪೂರ್ಣವಾದಾಕುಂಭವನು ಸುರ । ರಧಿಪತಿಯೆತ್ತಿದ ನಾಗ ॥ (91)

ಕಲಶೋದ್ಧಾರ ಮಂತ್ರವನುಚ್ಚರಿಸಿ ಮ । ತ್ತಲಘು ಭಕ್ತಿಯೊಳಮರೇಂದ್ರ ॥
ಜಲವನು ಸೂಸಿದ ಜಯವೆಂದು ಜಿನಪನ । ಚೆಲುವನಪ್ಪುತ್ತುತ್ತಮಾಂಗದೊಳು ॥ (92)

ಕಾಳಾಗರು ಧೂಪ ಧೂಮದ ಕಾಳಿಕೆ । ಮೇಲೆದ್ದು ನಭಕ್ಕೈದಿತಾಗ ॥
ಆಲಿಸಿಯುಭಿಷೇಕವನು ನೋಳ್ಪಸುರರಘ । ಜಾಲಬಿಟ್ಟೈದುವಂದದೊಳು ॥ (93)

ಒಂದು ಪಙ್ಕ್ತಿಯೊಳು ತುಂಬಿದ ಕುಂಭಗಳು ಮ । ತ್ತೊಂದೋಳಿಯೊಳುರಿಕ್ತಕುಂಭ ॥
ಸಂದಣಿಸಿದುವುದು ಚೆಂಡಾಟವನಾಡುವ । ರಂದದೊಳಮರರ ಕೈಯ ॥ (94)

ಭಾಜನ ಭೂಷಣಗಳನಾಂತವರ ಕಲ್ಪ । ಭೂಜವ ಶಾಖೆಗಳಂತೆ ॥
ರಾಜಿಸುತಿರ್ದುವು ಸುರಪತಿಗಳ ಭುಜ । ರಾಜಿಗಳವನವನಾಂತು ॥ (95)

ಇಂಗಡಲಮೃತವಾ ಪರಮೇಶ್ವರನುತ್ತ । ಮಾಂಗದೊಳೊಪ್ಪುತಲಿರಲು ॥
ಗಂಗೆಯಧರಿಸಿದ ಪರಮೇಶ್ವರನೆಂದು ಜ । ನಂಗಳು ಪೇಳ್ವರದಿಂದು ॥ (96)

ಹೊಂಬಣ್ಣ ದೇಹದೊಳಂಬಾಗಿ ಪರಿವಕ್ಷೀ । ರಾಂಬು ಒಪ್ಪಿತು ಜಿನನೇಶ ।
ಅಂಬುಜ ಮಿತ್ರನ ಪುದಿದ ಬೆಳ್ಮುಗಿಲೊ ಯಿ । ದೆಂಬಂತೆ ನೋಳ್ಪರ ಕಣ್ಗೆ ॥ (97)

ಪಾದದೊಳ್ಪರಿಯಲು ಕ್ಷೀರಾಂಬು ಯಿಾಯುಗ । ದಾದಿಯ ಪುರುಷೋತ್ತಮನ ॥
ಪಾದದೊಳ್ಗಂಗೆ ಪುಟ್ಟಿದಳೆಂದು ಪೇಳ್ವುದೀ । ಮೇದಿನಿಯಿಂದಿಂದಿತ್ತ ॥ (98)

ದೇವ ಮೇಘಂಗಳು ಕ್ಷೀರಾಬ್ಧಿ ಜೀವನು । ತೀವಿತಂದಾ ಜಿನನೆಂಬ ॥
ಪಾವನ ಸುಕ್ಷೇತ್ರದೊಳು ಮಳೆಗರೆದುವು । ಭಾವಿ ಪುಣ್ಯೋದಯ ಫಲಕೆ ॥ (99)

ಮುತ್ತಿನಬಲೆಯಂತೆ ತಲೆಯೊಳ್ ಪೆರೆಯೊಳು । ಮುತ್ತಿನ ಹಾರಗಳಂತೆ ॥
ಪತ್ತಿದುವಾಕ್ಷೀರ ಬಿಂದುವಮರಿಯ[ರ] । ಮತ್ತದ ಮೇಲೆತ್ತಿ ನೋಡೆ ॥ (100)

ಆಕಾಶದೊಳು ತಾರೆಗಳಂತೆ ಪೊಳೆಯಲ । ನೇಕಕ್ಷೀರಾಂಬು ಬಿಂದುಗಳು ॥
ನಾಕಜರಿಗೆ ಜ್ಯೋತಿರ್ಲೋಕ ವೆರಡೆಂಬ । ನೇಕ ಭ್ರಾಂತಿಯ ಪುಟ್ಟಿಸಿದುವು ॥ (101)

ದಿಕ್ಕನ್ನಿಕೆಯರುತ್ತುಂಗ ಕುಚೇಗಳೊ । ಳಿಕ್ಕಸರದ ಮಣಿಕ್ಕೆಯೊಳು ॥
ಒಕ್ಕವು ಕ್ಷೀರಾಂಬು ಕಣಗಳು ನೋಳ್ಪದೇ । ವರ್ಕಳ ಕಣ್ಗೆ ರಂಜಿಸುತ ॥ (102)

ಆ ಪಾಂಡುಕ ಸೌಮನಸ ನಂದನವೆಂ । ಬಾಪೆಸರಾಂತ ವನಗಳ್ ॥
ವ್ಯಾಪಿಸಿ ಪರಿದುದು ಕ್ಷೀರಾಂಬುವಿನದಾ । ಲೋಪ್ಪುವ ಮೇರುಗಿರಿಯೊಳು ॥ (103)

ಪಳುಕಿನ ಗಿರಿಯೊ ಬೆಳ್ಳಿಯಬೆಟ್ಟವೊ ಭೂ । ತಳದಿಂದಾ ಜಿನಪತಿಯ ॥
ಬೆಳೆದುದೊ ಕೀರ್ತಿಲತೆಯ ಪುಂಜ ವೆಂಬಂತೆ ಕಂ । ಗೊಳಸುತಿದ್ದುದು ಮಹಮೇರು ॥

ಗಂಧೋದಕ ಮಜ್ಜನವ ಮಾಡಿಸಿದ ಸು । ಗಂಧದೇಹದ ಜಿನಪತಿಗೆ ॥
ಬಂದು ರಾಜಾಂಗಣ ಸೋಂಕಿಂದ ಜಲಕೆ ಸು । ಗಂಧ ಯಿಮ್ಮಡಿಯಾದುದಾಗ ॥ (105)

ಜಲಗಂಧಾಕ್ಷತೆ ಪುಷ್ಪ ನೈವೇದ್ಯ ದೀಪಾ । ವಳಿ ಧೂಪ ಸತ್ಫಲದಿಂದ ॥
ಕುಲಿಶಧರನು ಜಿನರಾಜನ ಶ್ರೀ ಪಾದ । ನಳಿನಗಳನು ಪೂಜಿಸಿದನು ॥ (106)

ಇಂತು ಪೂಜಿಸಿ ನೂರೆಂಟು ನಾಮಗಳಿಂದ । ಸಂತಸಮಿಗೆ ನುತಿಸಿದನು ॥
ಮುಂದಭಿಮುಖವಾಗಿ ಕೈಗಳಮುಗಿದಂತ । ರಂಗದ ಶುದ್ಧಿಯಿಂದಾಗ ॥ (107)

ಜಯತ್ರಿಭುವನಜನನಯನ ಕೈರವ ಚಂದ್ರ । ಜಯ ಭುವನತ್ರಯ ತಿಲಕ ॥
ಜಯಭವ್ಯ ಜನ ಬಂಧು ಜಯಗುಣಮಣಿಸಿಂಧು । ಜಯಜಿನ ಜಗಯೂಥನಾಥ ॥

ಎಂದು ನುತಿಸಿ ಯಾನಂದಾಶ್ರು ಜಲದಿಂದ । ಬಂದಮರೇಂದ್ರ ನಿಂದಿರಲು ॥
ತಂದಾ ಶಚಿಯಂಗದಟ್ಟವ ನಿಕ್ಕಿ ಗಂಧೋದ । ಬಿಂದುವ ಪರಿಹರಿಸಿ ॥ (109)

ಕಾಲಲಂದುಗೆಗೆಜ್ಜೆ ಕಡಗ ಪಾದುಕ ಕಂಠ । ಮಾಲೆ ಕಟಿಸೂತ್ರ ವೆಂಬ ॥
ಬಾಲದೊಡಿಗೆಗಳ ತಂದು ತೊಡಿಸಿದಳು । ಲೀಲೆ ಕೈಮಿಗೆ ಆದಿಜಿನಿಗೆ ॥ (110)

ದೇವದುಂದುಭಿ ಕೋಟಿ ಮೊಳಗಲು ದೇವೇಂದ್ರ । ದೇವಗಜವನೇರಿ ತನ್ನ ॥
ಪಾವನಾಂಕದೊಳಿಟ್ಟು ಜಿನಕುಮಾರಕನ ಮ । ಹಾ ವಿಭವದೊಳ್ಬೈತಂದ ॥ (111)

ಸಾಕೇತ ಪುರದ ಶೃಂಗಾರವ ದೇವೇಂದ್ರ । ತಾ ಕಂಡು ವಿಸ್ಮಯ ಬಟ್ಟು ।
ನಾಕಲೋಕದೊಳೊಪ್ಪಿ ಇಲ್ಲೆಂದು ಬಾರಿರ । ಬೇಕೆಂದು ಮಾನದೊಳು ನೆನೆದ॥(112)

ರಾಜಗೃಹವ ಪೊಕ್ಕು ಮೊದಲೆ ಸಿಂಗರಿಸಿ ವಿ । ರಾಜಿಪ ಸಿಂಹ ಪೀಠದೊಳು ॥
ಈ ಜಿನಪತಿಯನು ಸ್ಥಾಪಿಸಿದನು ಸುರ । ರಾಜ ಸಂತೋಷವಿಂದಾಗ ॥ (113)

ಸುತನ ಮುಖಾವಲೋಕನ ಚಂದ್ರಿಕೆಯಿಂದ । ಕ್ಷಿತಿಪತಿಗಾನಂದ ಜಲಧಿ ॥
ಮಿತಿಮೀರೆಯಿಲ್ಲದೆ ಬೆರ್ಚಿತು ಮೂಜಗ । ತ್ಪತಿ ತನ್ನ ಸುತನಾಗಲರಿದೆ (114)

ಮಾಯಾನಿದ್ರೆಯ ತೊಲಗಿಸಲಿಂದ್ರನ । ಜಾಯೆ ಕಣ್ದೆರೆಯಲಾ ಜನನಿ ॥
ತಾಯೆ ನಿನ್ನಯ ಕುವರನ ಮೊಗನೋಡು । ಬಾಯೆಂದು ಕರೆತಂದಳಾಗ ॥ (115)

ಸಿರಿದು ಸಂತಸದಿಂದ ತೊರೆದ ಕುಜದ ಪಾ । ಲ್ಸುರಿಯಲು ಜಿನನ ಶಿರದೊಳು ॥
ಮರಳ ಜನ್ಮಾಭಿಷೇಕವ ತೋರಿಸಿದಳಾ । ಸುರನರ ಲೋಕದ ಕಣ್ಗೆ ॥ (116)

ಲೋಕದೊಳಗೆ ನೀವಿಬ್ಬರೆ ಪೂಜ್ಯರೆಂ । ದಾಕುವರನ ತಂದೆತಾಯ ॥
ನಾಕಲೋಕದ ವಸ್ತ್ರ ಭೂಷಣದಿಂದಾಗ । ನಾಕೇಂದ್ರ ನವರ ಪೂಜಿಸಿದ ॥ (117)

ಆನಂದ ನಾಟಕವನು ತೋರಿದನಿಂದ್ರ । ನೇನೆಂದು ಬಣ್ಣಿಪೆನದನು ॥
ನಸಾ ವಾದ್ಯದ ಗತಿಯನು ಸುರರು ಸಂ । ಧಾನವರಿತು ಬಾಜಿಸಿದರು ॥ (118)

ನೂತನ ಧರ್ಮದಿಂದೊಪ್ಪುವನಿವನೀ । ಭೂತಳದೊಳಗೆಂದಾಜಿನಗೆ ॥
ಪ್ರೀತಿಯಿಂ ವೃಷಭೇಶನೆಂದೆಂಬನ್ವರ್ಥದವಿ । ಖ್ಯಾತನಾಮವನಿಟ್ಟನಿಂದ್ರ ॥ (119)

ಜಿನನಿಗೆ ಮಜ್ಜನ ಮಂಡನ ಭೋಜನ । ವನುಲೇಪನ ಮುಂತಾದ ।
ವಿನಿಯೋಗಕೆ ದೇವಸತಿಯರಿಗಪ್ಪಣೆ । ಯನು ಕೊಟ್ಟು ಕಟ್ಟುಮಾಡಿದನು ॥ (120)

ದೇವಕುಮಾರರ ನಾ ಜಿನ ಪತಿಯೊಡ । ನಾವಾಗಲು ಕ್ರೀಡೆಗೆಂದು ॥
ದೇವೇಂದ್ರ ಕಟ್ಟುಮಾಡಿಸಿ ತೆರಳಿದನು ಮ । ಹಾ ವಿಭವದಿ ತನ್ನ ಪುರಕೆ ॥ (121)

ಇದು ಶ್ರುತ ಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯ ಪದದೊಳೈದನೆಯದು ಸಂಧಿ ॥ (122)

(ಐದನೆಯ ಸಂಧಿ ಸಮಾಪ್ತಂ)

## ಆರನೆಯ ಸಂಧಿ-

ನಿನ್ನಕೈಯೊಳು ಕಪ್ಪವಕೊಳ್ಳ ಬೇಕೆಂ । ದುನ್ನಿಸಿದಣ್ಣನ ಕೈಯ ॥
ಮುನ್ನವೆ ಕಪ್ಪವ ಕೊಂಡು ಮಹಾತ್ಮನೀ । ನೆನ್ನ ರಕ್ಷಿಸು ಗುಮ್ಮಟೇಶ ॥ (1)

ಉರುಳಕ್ಕಿಯಂಬೆಗಾಲಿಕ್ಕಿ ಕೆಲವುದಿನ । ಕರವ ಪಿಡಿದು ದಾದಿಯರ ॥
ಚರಣದ ಕಿಂಕಿಣಿ ಧ್ವನಿದೋರೆ ನಡೆದನು । ಹರಿನೀಲಮಣಿ ಕುಟ್ಟಿಮದೊಳು ॥ (2)

ತಾವರೆಯೊಳು ಪರಿಮಳ ಪುಟ್ಟುವಂತಾ । ದೇವನ ಮೊಗದಾವರೆಯೊಳು ॥
ಆವರಿಸಿತು ಮುಗುಳ್ನಗೆ ಮುದ್ದುನುಡಿ ಸರ್ವ । ಜೀವಕಾನಂದವನಿತ್ತು ॥ (3)

ಚೆಂಡಾಟ ಬೊಗರಿದುಳ್ಳಾಟಗಳಿಂದ ಭೂ । ಮಂಡಲೇಶ್ವರನ ಕುಮಾರ ॥
ಕಂಡಜನಂಗಳ ಕಣ್ಮನವನು ಸೆರೆ । ಗೊಂಡೊಪ್ಪುತಿಹನು ಲೀಲೆಯೊಳು ॥ (4)

ಬಾಲಕಾಲದೊಳಿಂತು ಬಾಲಲೀಲೆಯ ತೋರಿ । ಮೇಲೆ ಕುಮಾರ ಕಾಲದೊಳು ॥
ಕಾಲಾಂತರದೊಳಭ್ಯಸ್ತ ಚೌಷಷ್ಟಿಕ । ಲಾಲೀಲೆದೊರೆಕೊಂಡುದಾಗ ॥ (5)

ಜನನಕಾಲದೊಳ್ ಮತಿಶ್ರುತಾವಧಿಯಂ । ಬನುಪಮ ಬೋಧಗಳವಗೆ ॥
ಜನಿಸಿರ್ಪವಾಜಿನ ಪತಿಯ ಪುಣ್ಯೋದಯ । ವನುನಾನೇನೆಂದು ಪೇಳ್ವೆ ॥ (6)

ದೇವಕುಮಾರರು ವಿಕ್ರಿಯೆಯಿಂದನಾ । ನಾವಿಧ ರೂಪಕೈಕೊಂಡು ॥
ದೇವರ ದೇವನ ಮುಂದೆ ನರ್ತಿಸಿ ನಾ । ನಾವಿಧಗಳನು ತೋರುವರು ॥ (7)

ಸುರಪತಿಯನುದಿನ ಕಳುಹಿದದಿವ್ಯಾಂ । ಬರದಿವ್ಯ ಭೂಷಣ ಮಾಲ್ಯ ॥
ನಿರುಪಮ ಭೋಗೋಪ ಭೋಗವಸ್ತುಗಳ ಸಿಂ । ಗರದಿಂದ ಸೊಬಗುವೆತ್ತಿಹನು ॥ (8)

ಇಂತೀಕ್ರಮದಿಂದ ಭೋಗೋಪ ಭೋಗವ । ನಂತರಿಸದೆ ಉಣುತಿರಲು ॥
ಕಂತುವಿನುದ್ಯಾನವನಕೆ ವಸಂತ ಬ । ರ್ಪಂತೆ ಯೌವನವಂಕುರಿಸಿತು ॥ (9)

ಅಷ್ಟೋತ್ತರ ಶತ ಲಕ್ಷಣ ನವಶತ । ಷಷ್ಠ ವ್ಯಂಜನ ಲಕ್ಷಿತಾಂಗ ॥
ದುಷ್ಟ ವಿಷಾಹಿ ಶಸ್ತ್ರಾಗ್ನಿ ಕಂಟಕವಾರ । ನಷ್ಟಾಷ್ಟಮದ ಪುಣ್ಯಸಾರ ॥ (10)

ವಾತಪಿತ್ತಾದಿ ದೋಷಾದ್ಯವರೊಳಗೊಂ । ದಾತಂಕವನುದಿನವಿಲ್ಲ ॥
ಮಾತಿನೊಳಗೆ ಮೃದು ಮಧುರ ಗಂಭೀರ ಸು । ಪ್ರೀತಿದೋರುವ ವಾಕ್ಯವಿಹುದು ॥ (11)

ಚತುರ ಶೀತಿ ಲಕ್ಷ ಪೂರ್ವಾಯುಷ್ಯನು । ಶತಪಂಚ ಚಾಪೋತ್ಸೇಧ ॥
ಯುತ ದಿವ್ಯದೇಹ ನಿಸ್ವೇದತ್ವ ಮೊದಲಾ । ದತಿಶಯ ದಶಕ ಸಮೇತ ॥ (12)

ರೂಪು ಯೌವನ ಕಲಾ ಪರಿಣತೆಯು ನ್ನ । ಳ್ಳಾಪುರುಷರ ಚಿತ್ತವನು ॥
ಚಾಪಲಾಕ್ಷಿಯರ ಕಟಾಕ್ಷ ಬಾಣಂಗಳು । ವ್ಯಾಪಿಸಲಾರವೇನೆಂಬೆ ॥ (13)

ಆ ಮುಕ್ತಿಕಾಂತೆ ಸರಸ್ವತಿವನಿತೆಯೊ । ಳ್ಪ್ರೇಮಪುಳ್ಳಾಪುರುಷನಿಗೆ ॥
ಈ ಮಾನವ ದೇವಸತಿಯರ ಕಂಡರೆ । ಪ್ರೇಮವಿಲ್ಲದುದಚ್ಚರಿಯು ॥ (14)

ಪರಿಪೂರ್ಣ ಯೌವನ ರೂಪುವಿಲಾಸ ಸೌಂ । ದರಸುಕುಮಾರನ ಕಂಡು ॥
ನರನಾಥನಿವನ ಚಿತ್ತವನು ಸೋಲಿಸಲಾಪ । ತರುಣಿಯಿನ್ನೆಲ್ಲಿದ್ದಪಳೊ ॥ (15)

ರೂಪು ಯೌವನ ಜಾಣ್ಮೆ ಗಾಡಿಮೋಡಿಗಳಂ । ದೀ ಪುರುಷನ ನಿಸ್ಪೃಹತೆಗೆ ॥
ವೈಪರೀತ್ಯವನು ಪುಟ್ಟಿಸಬಲ್ಲಯುವತಿಯು । ನ್ನೀಪೃಥ್ವಿಯೊಳಗಾವಳುಂಟೊ ॥ (16)

ಎಂದು ಚಿಂತಿಸಿ ಮನದೊಳಗಾ ನಾಭಿ । ವೃಂದಾರಕರ ಮಧ್ಯದೊಳು ॥
ಅಂದು ಸಿಂಹಾಸನ ದೊಳಗೋಲಗವಾದ । ನಂದನನಿರ್ದೆಡೆಗೈದಿ ॥ (17)

ಎಂತು ನಾನಿನ್ನವನನು ಒಡಂಬಡಿಸುವೆ ನಿವ । ನಂತರಂಗವನೊಲಿದೀಗ ॥
ಕಂತುರಾಯನು ಅಭೇದ್ಯವಾಗಿದೆಯೆಂದು । ಚಿಂತಿಸುತಿಂತೆಂದು ನುಡಿದ ॥ (18)

ಮನುಕುಲತಿಲಕ ನೀನೆನ್ನ ಬಿನ್ನಪವನು । ಮನದೊಳಗವಧರಿಸೆಂದು ॥
ವಿನಯವಾರಿಧಿ ಚಂದ್ರನಾ ನಾಭಿರಾಜೇಂದ್ರ । ಜಿನಕುಮಾರ ಸೊಳಿಂತು ನುಡಿದ ॥ (19)

ಕುಲವನುದ್ಧರಿಸಬೇಕೆಂದು ಕುಮಾರರ । ನಿಳೆಯೊಳು ಪಡುವರು ಸ್ವಾಮಿ ॥
ಕುಲದೀಪಕನೀನಾದುದರಿಂದೆನ್ನ । ಕುಲವನುದ್ಧರಿಸಬೇಕೆಂದ ॥ (20)

ಕುಲವೆಂಬುದು ಸಂತಾನವಲ್ಲವೆಯುದು । ನಿಲುವುದು ನಿನ್ನಿಂದ ಸ್ವಾಮಿ ॥
ಕೆಲವು ದಿವಸವೆನ್ನ ಅಭಿಮತವನು ನೀನು । ಸಲಿಸಬೇಕೆಲೆ ಸ್ವಾಮಿಯೆಂದ ॥ (21)

ಲಲನೆಯರಿಲ್ಲದೆ ಕುಲವೃದ್ಧಿಯಾಗದು । ನೆಲನಿಲ್ಲದೆ ಬೆಳೆಯುಹುದೆ ॥
ಒಲಿದೆನ್ನ ಮಾತನು ಲಾಲಿಸಬೇಕೆಂ । ದಲಘುವಿನಯ ದೊಳಾಡಿದನು ॥ (22)

ವರಧರ್ಮ ಕಾಮಾರ್ಥಗಳ ನನುಭವಿಸುವ । ಪರಿಯನು ಸೃಷ್ಟಿಸಿಬಳಿಕ ॥
ಪರಮ ಮುಕ್ತಿಗೆ ಮಾರ್ಗವಿಂತೆಂಬುದಮುಂದೆ । ನಿರವಿಸಬಹುದೆನ್ನ ಸ್ವಾಮಿ ॥ (23)

ತಂದೆಯ ಮಾತನು ಮೀರಬಾರದು ಮಕ್ಕ । ಳೆಂದು ನೀಪೇಳ್ವ ನೀತಿಯನು ॥
ಇಂದು ನೀ ಮೀರಿದೆಯಾದರೆ ಜಗದೊಳು । ಮುಂದೆ ನಡೆಸುವವರಾರು ॥ (24)

ಎಂದಿವು ಮೊದಲಾದ ನಾನಾಯುಕ್ತಿಗ । ಳಿಂದ ಪೇಳದ ನುಡಿಗೇಳ ॥
ಮಂದಸ್ಮಿತ ಮುಖನಾಗಲೊಡಂಬಟ್ಟ । ನೆಂದು ತಿಳದು ನಾಭಿರಾಜ ॥ (25)

ಧರೆಯೊಳು ಕಚ್ಛಮಹಾ ಕಚ್ಛರೆಂದೆಂಬ । ದೊರೆಗಳ ತಂಗಿಯರಾದ ॥
ಸುರಸತಿಯರಿಗಿಮ್ಮಡಿರೂಪು ಜವ್ವನ । ಸೌಜಾಣ್ಮೆಯಿಂದೊಪ್ಪುತಿರ್ಪ ॥ (26)

ಭಾವೆಯಶಸ್ವತೀದೇವಿ ಸುನಂದಾ । ದೇವಿಯರೆಂಬ ಕನ್ನೆಯರ ॥
ಆವಿಧಿಯಿಂದ ಮದುವೆಯ ಮಾಡಿಸಿದನಾ । ದೇವಗೆ ನಾಭಿರಾಜೇಂದ್ರ ॥ (27)

ದೇವ ಕಾಂತೆಯರು ಪಾಡಿದರು ಶೋಭನಗಳ । ದೇವಕನ್ನಿಕೆಯರಾಡಿದರು ॥
ದೇವ ದುಂದುಭಿಕೋಟಿಗಳು ಮೊಳಗಿದುವಾ । ದೇವನ ಪರಿಣಯನದೊಳು ॥ (28)

ಕಳಶಕುಚದ ಕನ್ನಡಿ ಕದಪಿನ ಕಳ । ಕಳಸುವ ಮೊಗದ ಕಾಂತೆಯರು ॥
ಕಳಶ ಕನ್ನಡಿಗಳ ಪಿಡಿದುತ್ಸಾಹದಿಂದ । ಕಳಹಂಸ ಗತಿಯೊಳೈದಿದರು ॥ (29)

ಮುತ್ತಿನಾರತಿಯನು ದಂಪತಿಗಳಗೆ ತಂ । ದೆತ್ತಿಮನೋಹರವಾದ ॥
ಮುತ್ತಿನಾಕ್ಷತೆಯಿಂದ ಸೇಸೆಯನಿಕ್ಕಿದ । ರುತ್ತಮ ದೇವಾಂಗನೆಯರು ॥ (30)

ಮಾನವರಾಜಸತಿಯರು ಸಿಂಗರವಾಗಿ । ಯಾನಂದದೊಳೈತಂದು ॥
ಆನಾಭಿರಾಜನ ಸೊಸೆಯಂದಿರಿಗೆ ಸ । ನ್ಮಾನಿಸಿ ಮುಯ್ಯನಿಕ್ಕಿದರು ॥ (31)

ಇಂತಿವು ಮೊದಲಾದ ಸಂಭ್ರಮದಿಂದ ಭೂ । ಕಾಂತ ವಿವಾಹ ಮಂಗಲವ ॥
ಸಂತೋಷದಿಂದ ಮಾಡಿಸಿದನು ಜನಪತಿ । ಯಂತರಂಗವನು ರಂಜಿಸಲು ॥ (32)

ಅವನ ಮನೋಮುದ ಗಜವನು ತಮ್ಮಯ । ನವಯೌವನ ವನದೊಳಗೆ ॥
ಅವರು ವಿಹಾರವ ಮಾಡಿಪರೆಂದೆನೆ । ಲವರ ಜಾಣ್ಮೆಗಳನ್ನೆಂತೊ ॥ (33)

ಅವರಂಗರುಚಿಯೆಂಬ ಸರಸಿಯೊಳನುದಿನ । ಯುವರಾಜ ಹಂಸ ನಲಿವನು ॥
ಅವನಂತರಂಗವ ಸರೆಗೆಯ್ವರನುದಿನ । ನವನವರುಚಿಯ ಪುಟ್ಟಿಸುತ ॥ (34)

ಅವನ ಮನೋಯಾನ ಪಾತ್ರವ ತಮ್ಮಯ । ನವಲಾವಣ್ಯಾಬ್ಧಿಯೊಳಗೆ ॥
ಅವರನುದಿನ ಸುಳವಂತೆ ಮಾಡಿದರಾ । ಯುವತಿಯರೇನು ಜಾಣೆಯರೊ ॥ (35)

ಅಂತರಂಗ ಮುಕ್ತಿಕಾಂತೆ ಯೆಸಕದೊಳು । ಸಂತತವಿಟ್ಟಾಜಿನನು ॥
ಇಂತೀ ಸಂಸಾರ ಸುಖದ ಸಮುದ್ರದ ಕಡೆ । ಯಂತಾ ಕಂಡನೇನೆಂಬೆ ॥ (36)

ಒಂದು ದಿನದೊಳು ಯಶಸ್ವತೀದೇವಿ । ಮಿಂದು ನಾಲ್ಕನೆಯ ದಿನದೊಳ್ ॥
ಅಂದು ಸಿಂಗರವಾಗಿ ರಮಣನ ಬಳಿಗೈ । ತಂದಳಧಿಕ ಲೀಲೆಯಿಂದ ॥ (37)

ಏಳುನೆಲೆಯ ರಮ್ಯ ಹರ್ಮ್ಯಾಂಗಳೇರಿಬಂ । ದಾಳಿಯ ರೊಡನೆ ಲೀಲೆಯೊಳು ॥
ಡಾಳಪ ಮಿಸುನಿಯ ಮಂಚದೊಳ್ರಾಜಿಪ ಹಂಸ । ತೂಳತಲ್ಪವ ಸೇರಿದಳು ॥ (38)

ಪುತು ಪರಮೇಶನೊಡನೆ ಪವಡಿಸಿ ಮನೋ । ಹರಜಾವದೊಳು ಕನಸಿನೊಳು ॥
ಪರಿಪೂರ್ಣ ಚಂದ್ರ ಚಂಡಾಂಶು ಮಂಡಲ ಮೇರು । ಗಿರಿಯಬ್ಧಿಸಿರಿ ಸುರತರುವ ॥ (39)

ಕಂಡುಪ್ಪವಡಿಸಿ ಮಂಗಲ ವಾದ್ಯಗೀತ ಪ್ರ । ಚಂಡಾಗವಾದ ಪಾಠಕರ ।
ತಂಡದ ಧ್ವನಿಗೇಳ ಮುಖ ಮಜ್ಜನವ ಮಾಡಿ । ಮಂಡನ ಮಂಡಿತೆಯಾಗಿ ॥ (40)

ಪರಿವಾರಾಂಗನೆಯರ ನೆರವಿಯೊಡನೆ ಬಂದು । ಪುರುಜಿನ ಪತಿಯರ್ಧಾಸನವ ॥
ತರುಣಿಯಲಂಕರಿಸುತ ಕಂಡು ಕನಸನು । ಪರಿಪಾಡಿಯಿಂದ ಪೇಳಿದಳು ॥ (41)

ಕೇಳಯಾಕನಸಿನ ಫಲಗಳ ನಿನ್ನೆಂತು । ಪೇಳಲಾ ಸತಿಮುದದಿಂದ ॥
ಕೇಳವಳೀ ಭರತದ ಷಟ್ಖಂಡವ । ನಾಳುವ ನಂದನನೊರ್ವ ॥ (42)

ನಿನ್ನಯ ಗರ್ಭದೊಳುದಯಿಪನೆನಲ । ತ್ಯುನ್ನತ ಹರುಷವ ತಾಳ ॥
ತನ್ನ ಮೈಪುಳಕ ವೇರಿತು ಲತೆಮಧು ಮಾಸ । ದಿಂ ನನೆಯೇರು ವಂದದೊಳು ॥ (43)

ಮೊದಲ ಸುಬಾಹು ಚಾರಾಹ ಮಿಂದ್ರನು ತ । ನ್ನುದರ ದೊಳಗೆ ಬಂದು ಜನಿಸಿ ।
ಉದರ ವೃದ್ಧಿಯು ನೆಯ್ದಿ ತೀಜಗಜ್ಜನದ ಸಂ । ಮದವೆ ವೃದ್ಧಿಯು ನೈದುವಂತೆ ॥ (44)

ಹಿಮಗಿರಿ ವಿಜಯಾರ್ಧ ಗಿರಿಶಿಖರವನೇರಿ । ರಮಿಸ ಬೇಕೆಂಬಾ ಬಯಕೆ ॥
ಕ್ರಮದಿಂದ ಪುಟ್ಟಿತು ಸುತನ ಪ್ರಭಾವವ । ರಮಣಿ ಸೂಚಿಸಿ ತೋರುವಂತೆ ॥ (45)

ಜಲಧಿ ಸರೋವರವನು ಪೊಕ್ಕು ಅಲ್ಲಿರ್ದ । ಜಲಜಗಳನು ಕೊಯ್ದಲ್ಲಿ ॥
ಜಲವಿಹಾರವ ಮಾಡಬೇಕೆಂಬ ಬಯಕೆಯಾ । ಲಲನೆಗೆ ಪುಟ್ಟಿತೇನೆಂಬೆ ॥ (46)

ಮನು ಕುಲತಿಲಕನ ಮನುವಂಶಾಂಬುಧಿ ಚಂದ್ರ । ಮನುಗೋತ್ರ ಖಗಭಾಸ್ಕರನ ॥
ವನಿತಾ ಮಣಿ ಪಡೆದಳು ಸುಕುಮಾರನ । ದಿನಕರನುದಯ ಕಾಲದೊಳು ॥ (47)

ಆ ಸಮಯದೊಳಲ್ಲಿ ಸುರಭಿ ಸಮೀರಣ । ಬೀಸಿತು ಮಂದಗತಿಯೊಳು ॥
ಕಾಸಾರಗಳು ತಿಳಿದುವು ನಿರ್ಮಲವಾಯ್ತಾ । ಕಾಶದಿಕ್ಕುಗಳೆಲ್ಲ . . . . ॥ (48)

ಆಗಳಾ ಕುವರನ ಜನ್ಮೋತ್ಸವವನು । ಬೇಗಲರಿಪಲಾ ಜನಗೆ ॥
ಪೋಗುವ ಪೆಣ್ಗಳ ಸಂದಣಿಯಿಂದನು । ರಾಗವೆತ್ತುದು ರಾಜಗೃಹವು ॥ (49)

ಮುಗಿಲೊಡ್ಡು ಕೇಶಪಾಶಂಗಳು ನೇತ್ರದೊ । ಳೊಗೆವವಾನಂದಾಶ್ರು ವರ್ಷ ॥
ಸೊಗಸುವ ತನುಕಾಂತಿ ಮಿಂಚಿನಂತೆಸೆಯಲಾ । ಮೃಗನೇತ್ರೆಯರು ಬಂದರಾಗ ॥ (50)

ಬಂದು ಕುಮಾರನ ಬಸಗೆಯ ಪೇಳಲಾ । ನಂದದಿಂದಾ ವೃಷಭೇಶ ॥
ಅಂದವರಿಗೆ ಕೊಟ್ಟ ವಸ್ತ್ರ ಭೂಷಣಗಳ । ವೃಂದವೆಲ್ಲವು ದಣಿವಂತೆ ॥ (51)

ಪನ್ನಂಗ ವಿಕ್ಕಿದ ಪಲ್ಲಕಿಯೊಳು ರಾಜ । ಕನ್ಯೆಯು ರೈತಂದರಾಗ ॥
ಬಿನ್ನಣ ದಿಂದಾನೆ ಕುದುರೆ ಮಾರ್ಬಲಗೂಡಿ । ಮನ್ನೆಯ ರೈದಿದ ರೊಲಿದು ॥ (52)

ಆ ನಾಭಿ ರಾಜೇಶ ಕಚ್ಛ ಮಹಾ ಕಚ್ಛ । ರಾನಂದದಿಂದೈ ತಂದು ॥
ಏನೆಂಬೆ ಜಾತ ಕರ್ಮವನು ಸಂಭ್ರಮದಿಂ । ದಾನಿಧಿ ಪತಿಗೆ ಮಾಡಿದರು ॥ (53)

ಭರತ ಷಟ್ಖಂಡವ ನಾಳ್ವ ಮುಂದಿವನೆಂದು । ಭರತೇಶ್ವರನೆಂಬ ಪೆಸರ ॥
ಕರೆದರಾಶಿಶುವಿಗೆ ಬಂಧು ಜನಂಗಳು । ಹರಸಿ ಹರುಷದಿಂದಾಗ ॥ (54)

ಅಂತಃಪುರದ ಸ್ತ್ರೀಯರ ಕರಕಮಲದೊ । ಳಂತರಿಸದೆ ಸುಕುಮಾರ ॥
ತಾಂತಿರುಗುತ ಲೊಪ್ಪಿದ ರನ್ನಗನ್ನಡಿ । ಯಂತೆ ಕಂಗೊಳಿಸಿ ಚೆಲ್ವಿಂದ ॥ (55)

ಕಿರಿಕಳಭವ ಪೋಲ್ತು ಮಣಿಕುಟ್ಟಿಮದೊಳು । ಚರಿಸುವ ನಂಬೆಗಾಲಿಕ್ಕಿ ॥
ದರಹಸಿತಾನನದಿಂದ ಬಂಧುಗಳಿಗೆ । ಹರುಷವಾರಿಧಿಯ ಪೆರ್ಚಿಸುತ ॥ (56)

ಅನ್ನಪ್ರಾಶನ ಚೌಲೋಪನಯನ ಮುಖ್ಯ । ಸನ್ನುತ ಕ್ರಿಯೆಗಳ ತಾನೆ ॥
ತನ್ನ ಕುಮಾರಗೆ ಮಾಡಿಸಿದನು ಸಂ । ಪನ್ನನಾದಿ ಬ್ರಹ್ಮನಾಗ ॥ (57)

ರಾಜಕುಮಾರರೊಡನೆ ಮಲ್ಲಯುದ್ಧವ । ನಾಜಿನಪತಿಯ ಕುಮಾರ ॥
ಓಜೆಯಿಂದೊಲಿದು ಮಾಡುವನು ತನ್ನಯ ಧೂಳಿ । ರಾಜಿಸೆ ತನ್ನದೇಹದೊಳು ॥ (58)

ತಾವರೆ ಕೊಳವನು ಪೊಕ್ಕು ಕುಮಾರರೊ । ಳಾವಿಭು ಜಲಕೇಳಿ ಯುದ್ಧವನು ॥
ತೀವಿಜಲವ ಜೇಕೊಳವಿ ಯೊಳೆಳೆವನು ಮು । ತ್ತಾವೀರರೆಡೆಡೆವೊಗವ ॥ (59)

ಕರಿಕಳಭವನೇರಿ ಮಾಡು ಬೆಟ್ಟಂಗಳ । ಗಿರಿದುರ್ಗವೆಂದು ನೂಕಿಸುತ ॥
ಸರಸಿಯೊಳಗೆ ಪೊಕ್ಕು ಜಲದುರ್ಗವೆಂದು ತಾ । ವರೆಗಳ ಪಡೆಲ್ವಿಡಿಸುವನು ॥ (60)

ಕದಳಿವನವ ಪೊಕ್ಕು ವನದುರ್ಗವೆಂದು ಮು । ತ್ತ್ರದಸಾನೆಯಿಂದ ತಿವಿಸುತ ॥
ಚದುರ ಬಾಲಕೇಳಿಯೊಳ್ ಚಕ್ರವರ್ತಿ । ಪದವಿಯ ಕಾಣಿಸುತಿಹನು ॥ (61)

ಅಂಗಕಳಿಂಗ ಮಾಗಧ ಮಾಳವಾದಿ ದೇ । ಶಂಗಳನಿನಿತಿನಿ ತೆಂದು ॥
ಸಂಗಡವಾಡುವ ಸುಕುಮಾರರಿಗೆ ತಾ । ನಿಂಗಡವನಮಾಡಿ ಕೊಡಿಪ ॥ (62)

ತಂದೆಯ ರೂಪೆ ತಂದೆಯ ಚೆಲ್ವಿಕೆ ಜಾಣ್ಮೆ । ತಂದೆಯ ನಡೆನುಡಿ ಯೋಜೆ ॥
ಬಂದಮರಿಹುದಾ ಸುಕುಮಾರನಾ ಪುಣ್ಯ । ದೊಂದುದಯ ವನಾನೇನೆಂಬೆ ॥ (63)

ಪರಿವಿಡಿಯಿಂದ ಭರತ ಮುಂತಾದನೂ । ರ್ವರು ಸುಕುಮಾರರಪಡೆದು ॥
ತರುಣಿ ಯಶಸ್ವತಿ ಬ್ರಹ್ಮಿ ಯೆಂದೆಂಬ ಸೌಂ । ದರಿಯ ಪಡೆದಳು ಬಳಿಕ ॥ (64)

ಆಮಹಾ ಬಾಹು ಬಾರಾಹ ಮಿಂದ್ರನು ಬಂ । ದಾ ಮಹಿಲಾ ಮಣಿಯೆನಿಪ ॥
ಶ್ರೀಮತ್ಸುನಂದಾ ದೇವಿಯ ಗರ್ಭದೊ । ಳಾ ಮಹಿಮನು ಜನಿಸಿದನು ॥ (65)

ಪೊಂಗಿತು ತನುಮಧ್ಯ ಪೊಸತೊಂದು ಸೊಬಗಾಗಿ । ಭಂಗತ್ರಿವಳಿಗಳಗ್ಗಾಯ್ತು ॥
ತಿಂಗಳ ಸಿರಿಯಂತೆ ನಗೆಮೊಗ ದೊಳುಬೆಳ್ಪು । ಕಂಗೊಳಿಸುವ ಕಾಮಿನಿಯ ॥ (66)

ಕೆಂದಾವರೆ ಬಿರುಮೊಗ್ಗೆಯ ಕಂಪಿಗೆ । ಬಂದೆರಗುವ ತುಂಬಿಯಂತೆ ॥
ಮಂದಗಮನೆಯ ಕುಚಾಗ್ರ ದೊಳಗೆ ಕಪ್ಪು । ನಿಂದು ಬೀರುವುದೊಂದು ಸೊಬಗ ॥ (67)

ಮದಗಜಂಗಳ ಕಾಳಗವ ನೋಡಬೇಕೆಂದು । ಸುದತಿಗೆ ಪುಟ್ಟಿತು ಬಯಕೆ ॥
ಮುದದಿಂದ ಮಲ್ಲಯುದ್ಧವ ಕಾಣಬೇಕೆಂ । ದೊದವಿತು ವಾಂಛೆಯಾ ಸತಿಗೆ ॥ (68)

ತನ್ನದೋರ್ವಲದ ಬಿಂಕವನು ಜನರಿಗೆಲ್ಲ । ಮುನ್ನವೆ ಸೂಚಿಸುವಂತೆ ॥
ತನ್ನ ಜನನಿಗಿಂತು ಗರ್ಭದೋಹಳ । ದುನ್ನತಿಕೆಯನು ಪುಟ್ಟಿಸನು ॥ (69)

ದಿನಕರನುದಯವಾಗುವ ಸಮಯದೊಳಾ । ಮನುಕುಲ ತಿಲಕನ ಪುಣ್ಯ ॥
ವನಿತೆ ಸುನಂದಾದೇವಿ ಪೆತ್ತಳು ಸಾಧಿ । ಮನುವಂಶಗಗನ ಭಾಸ್ಕರನ ॥ (70)

ದೇವದುಂದುಭಿಗಳು ಮೊಳಗಿದುವಲ್ಲಲ್ಲಿ । ಹೂವಿನ ರಂಗವಲ್ಲಿಗಳು ॥
ಆವಲ್ಲಿ ನೋಡಲು ಗುಡಿತೋರಣಂಗಳು । ತೀವಿದುವಾ ಪುರದಲ್ಲಿ ॥ (71)

ಮುತ್ತಿನ ಚೆಂಡು ರನ್ನದ ಲಗ್ಗೆಯಾಟದೊ । ಳುತ್ತಮ ರಾಜಕುವರರ ॥
ಮೊತ್ತವ ಸೋಲಿಸಿಯಾನಂದದಿಂದಲಿ । ಒತ್ತಿಹ ಬಾಲಭಾಸ್ಕರನು ॥ (72)

ಮಲ್ಲಗಾಳಗದೊಳು ರಾಜಕುಮಾರಕ । ರೆಲ್ಲರ ಸೋಲಿಸಿ ತಾನು ॥
ಗೆಲ್ಲವನಾಂತೊಪ್ಪುತಿಹನು ಕುಂಕುಮರಜ । ಸಲ್ಲೀಲೆದೋರೆಯಂಗದೊಳು ॥ (73)

ಜಲಯುದ್ಧ ದೃಷ್ಟಿಯುದ್ಧಗಳು ಮುಂತಾಗಿರ್ದ । ಬಲುಬೆಡಗಿನ ಸಾಧನೆಯ ॥
ಕಲಿತನವನ ಕೂಡೆ ಮೂಗಜದೊಳು ಕಾದಿ । ಗೆಲುವವರಾರಿಲ್ಲವೆನಲು ॥ (74)

ಕುದುರೆಯನೇರಿ ಜೋಡಣೆಯಗೊಳಿಸುವನು । ಮುದದಿಂದ ಬಾಲಕೇಳಿಯೊಳು ॥
ಮದಗಜಗಳನೇರಿಯಾಳವಡಿಸುವತನ್ನ । ಪದಸನ್ನಿದೋರಿಯಾ ಕುವರ ॥ (75)

ಇಂತು ಬಾಲತ್ವ ಕುಮಾರಕಾಲಂಗಳು । ಸಂತೋಷದಿಂ ಪೋಗಲಾಗ ॥
ಮುಂತೆ ಯೌವನತಲೆದೋರಿತು ಜಗವೆಲ್ಲ । ವಂತರಿಸದೆ ಮೋಹಿಪಂತೆ ॥ (76)

ಇಂದೀವರದಳ ನೇತ್ರ ಮೋಹಿಪ ಪೂರ್ಣ । ಚಂದಿರ ಮುಖ ಚಾರುದಂತ ॥
ಚಂದದೃಷ್ಟಿಯಾಜಾನುಬಾಹು ನೀಲಾಳಕ । ದಿಂದೊಪ್ಪವಡೆದನಾ ಕುವರ ॥ (77)

ತನು ಮಧ್ಯ ಗಂಭೀರ ನಾಭಿ ಕಂಬುಗ್ರೀವ । ವನುಪಮ ಕದಳಿಯ ಕಂಬ ॥
ವನು ಪೋಲ್ವ ವೃತ್ತೋರುಯುಗ್ಮಕೆಂದಳರಂತೆ । ಮಿನುಗುವ ಕರತಳದಿಂದ ॥ (78)

ಮರಕತ ಮಣಿವರ್ಣ ಥಳಥಳಿಸುವ ದಿವ್ಯ । ಚರಮಾಂಗ ಚೌಪಟಮಲ್ಲ ॥
ಧರೆಯೊಳಗಾದಿ ಕಾಲದ ಕಾಮದೇವಗೆ । ಸರಿಯಹರಾರೆಂದು ಪೇಳ್ವ ॥ (79)

ಕಾಮದೇವಗೆ ಸರಿಯೆಂದು ಪೇಳ್ವರುಕೆಲ । ರೀಮಹಿಯೊಳುರೂಪುಯುತರ ॥
ಕಾಮದೇವನೆ ತಾನಾದ ಮೇಲವನಿಗಿ । ನ್ನೀ ಮಹಿಯೊಳಗೆಣೆಯಾರು ॥ (80)

ಕಾಮದೇವನ ರೂಪಕಂಡ ಕಾಂತೆಯರೆಲ್ಲ । ರೀಮಹಿಯೊಳು ಮರುಳ್ಗೊಂಡು ॥
ಪ್ರೇಮದಿಂದವರಂತಿಂತಾದರೆಂದೆಂ । ಬಾ ಮನುಜರು ಬಲ್ಲವರೆ ॥ (81)

ಕನಸು ಮನಸಿನೊಳಗವನ ರೂಪನೆಣ್ಣ । ಳನುದಿನ ನೆನೆವ ಕಾರಣದಿಂ ॥
ಮನಸಿಜ ನಂಗಜ ಚಿತ್ತಜನೆಂದೆಂ । ಬನುಪಮ ನಾಮ ವಾಯ್ತವಗೆ ॥ (82)

ಬಳಕ ಸುನಂದಾ ದೇವಿಯ ಗರ್ಭದೊ । ಳೆಳೆಮಿಂಚು ಮುಗಿಲ ಗರ್ಭದೊಳು ॥
ಪೊಳೆವುತ ಪುಟ್ಟುವಂದದೊಳು ಸೌಂದರಿಯೆಂಬ । ಲಲನೆ ಪುಟ್ಟಿದಳೇನನೆಂಬೆ ॥ (83)

ತನಗಿಂದ್ರನಿಗೆ ಚಕ್ರವರ್ತಿ ಮುಂತಾಗಿರ್ದ । ತನಯಂದಿರಿಗೆ ಯೋಗ್ಯವಾದ ॥
ಮಿನುಗುವ ರತ್ನದ ಹಾರವ ಕಲ್ಪಿಸಿ । ಜಿನಪತಿಯವನವರ್ಗಿತ್ತ ॥ (84)

ದೇವ ಮನುಜರಾಜ ಮೌಲಿಕೀಲಿತ ರತ್ನ । ಭೂವಲಯದಿ ರಂಜಿಸುವ ॥
ದೇವ ಸಿಂಹಾಸನ ದೊಳಗೋಲಗ ಗೊಟ್ಟುವು । ಹಾವಿಭವದೊಳಿರುತಿರ್ದ ॥ (85)

ವರ ವಸ್ತ್ರ ಭೂಷಣ ಪೂಮಾಲೆಯಿಂದ ಸಿಂ । ಗರವಾಗಿ ದೇವನೋಲಗಕೆ ॥
ಕರಚೆಲುವಿಂದ ಬಂದರು ಬ್ರಾಹ್ಮಿ ಸೌಂದರಿ । ಯಾರು ಹಂಸಗತಿಯು ಲೀಲೆಯೊಳು ॥ (86)

ತಂದೆಗೆ ದೂರಾಂತರದೊಳೆ ಪೊಡಮಟ್ಟು । ಬಂದು ನಿಂದಿರೆ ಕಂಡವರ ॥
ಸಂದ ವಿನಯ ವಿತರಣ ಭಕ್ತಿ ವಿವೇಕಕಾ । ನಂದವನೆಯ್ದಿ ಜಿನೇಶ ॥ (87)

ಕನ್ನೆಯರಿರ್ವರನೆತ್ತಿ ತೆಗೆದುಕೊಂಡು । ತನ್ನುತ್ಸಂಗದೊಳಿಟ್ಟು ॥
ಚೆನ್ನಾಗಿಯಾವರವೊಗವ ನೋಡಿ ಮುದ್ದಿಸಿ । ಮನ್ನಿಸಿ ಇಂತೆಂದು ನುಡಿದ ॥ (88)

ಕನ್ನೆಯರಿವರ ವಯೋಗುಣ ರೂಪಿಗೆ । ಸನ್ನುತವಿದ್ಯೆದೊರಕಲು ॥
ಚೆನ್ನಕೆ ಪರಿಮಳ ಬಂದಂತಹುದೆಂ । ದುನ್ನಿಸಿದನು ಮನದೊಳಗೆ ॥ (89)

ಹೃದಯ ಕಮಲದೊಳು ಅಧಿವಾಸಿಸಿ ಶಾ । ರದೆಯನು ಪೂಜಿಸಿ ಬಳಿಕ ॥
ಸುದತಿಯರೀರ್ವರ ನಿಕ್ಕೆಲದೊಳಗಿಟ್ಟು । ಹುದುಳಸಿ ಕರಗಳ ಪಿಡಿದು ॥ (90)

ಚಿನ್ನದ ಹಲಗೆಯನಿಟ್ಟದರೊಳು ಪೊಸ । ರನ್ನದ ರಜವನು ಹರಡಿ ॥
ಕನ್ನೆಗೆ ಹಿರಿಯಾಕೆಗೆ ಬರೆಯಿಸಿದ ಸಿ । ದ್ಧಂ ನಮೋ ಎಂಬ ಪದವನು ॥ (91)
ಮೊದಲೊಳು ಮುಖ್ಯ ಮಂಗಲವೆನಿಸುವ ಗುರು । ಪದವನು ಬರೆಸಿದ ಬಳಿಕ ॥
ಹದಿನಾಲ್ಕು ಸ್ವರ ವ್ಯಂಜನಯೋಗವಾಹವ । ಮುದದಿಂದ ಬರೆಸಿದ ಸ್ವಾಮಿ ॥ (92)

ವಾಮ ಹಸ್ತದೊಳು ಸೌಂದರಿಗೆ ಗಣಿತವನು । ಪ್ರೇಮದಿಂ ಬರೆಸಿ ತೋರಿದನು ॥
ಸ್ವಾಮಿಯಾದಿ ಬ್ರಹ್ಮನಂಕಸ್ಥಾನಕ್ರಮ ನಾಮೋಚ್ಚಾರಣೆಯ ಮಾಡಿ ॥ (93)
ಮತ್ತೆ ಸ್ವಯಂಭುವವೆಂಬ ಪೆಸರ ನು । ಳ್ಳುತ್ತಮ ಪದವಿದ್ಯೆಯನು ॥
ಬಿತ್ತರಿಸಿದನು ಛಂದೋಲಂಕಾರವ । ತತ್ತರುಣಿಯರಿಗೆ ಮುದದಿ ॥ (94)

ಭರತೇಶನಿಗೆ ಭರತಾರ್ಥಶಾಸ್ತ್ರಂಗಳ । ವರವೃಷಭಾದಿಸೇನನಿಗೆ ॥
ನಿರುಪಮ ಗಾಂಧರ್ವ ವಿದ್ಯೆಮುಂತಾದುವ । ಪುರುಜಿನಪತಿ ನಿರವಿಸಿದ ॥ (95)

ಕಾಮತಂತ್ರವ ಹಸ್ತ್ಯಶ್ವ ತಂತ್ರಂಗಳ । ಸಾಮುದ್ರಿಕಾಯುರ್ವೇದಗಳ ॥
ಕಾಮದೇವಗೆ ಧನುರ್ವಿದ್ಯೆ ಮುಂತಾದುದ । ಪ್ರೇಮದಿ ತಿಳುಹಿದ ಸ್ವಾಮಿ ॥ (96)

ಇವು ಮೊದಲಾದ ಲೋಕೋಪಕಾರಿಗಳಪ್ಪ । ವಿವಿಧ ವಿದ್ಯೆಗಳನು ತನ್ನ ॥
ಕುವರರಿಗುಪದೇಶವನು ಮಾಡಿದನು ದೇವ । ನಿವಹವಂದಿತ ದಿವ್ಯಚರಣ ॥ (97)
ಮಾತೇನಿಪ್ಪತ್ತು ಲಕ್ಷ ಪೂರ್ವಾಯುಷ್ಯ । ವೀತೆರದಿಂ ಪೋಗೆ ಜನಗೆ ॥
ನೂತನ ಧಾನ್ಯ ಫಲಂಗಳ ರಸವೀರ್ಯ । ಭೂತಳದೊಳು ಮಂದವಾಗೆ ॥ (98)

ಆಧಿವ್ಯಾಧಿಗಳಿಂದ ಮಾನವರೆಲ್ಲ । ಬಾಧಿತರಾಗಿ ಕಂಗೆಟ್ಟು ॥
ಭೂಧವನಾಧೀಶನನುಮತದಿಂದಾ । ಬೋಧನಿಧಿಯ ಬಳಿಗೆಯ್ದಿ ॥ (99)

ವಿರಳ ಫಲಂಗಳಾದುವು ಸರ್ವೌಷಧಿಗಳು । ತೊರೆದುವುರಸವೀರ್ಯಗಳನು ॥
ತರುಗಳು ನಮಗಿನ್ನೀ ಕ್ಷಿತಿಯೊಳು ಭಾಳ್ವ । ತೆರನನಿರೂಪಿಸು ಸ್ವಾಮಿ ॥ (100)

ಎಂದಡಿಗೆರಗಿದ ಜನರ ಮೇಲಣ ಕೃಪೆ । ಯಿಂದಾದಿ ಬ್ರಹ್ಮತಾನಾಗ ॥
ಸಂದ ವಿದೇಹ ಭೂಮಿಯ ವರ್ತನೆಯನು ತಾ । ನಂದವರಿಗೆ ಪೇಳದನು ॥ (101)

ಅಸಿಮಸಿ ಕೃಷಿವಿದ್ಯೆ ವಾಣಿಜ್ಯ ಶಿಲ್ಪವೆಂ । ಬೆಸೆವ ಷಟ್ಕರ್ಮದಿ ನೀವು ॥
ಒಸೆದು ಜೀವಿಸಿಯೆಂದವರಂದವೆಲ್ಲವ । ಹಸನಾಗಿ ತಿಳುಹಿ ಪೇಳದನು ॥ (102)

ಭೋಗಭೂಮಿಯ ಕಡೆಯೊಳು ವರ್ಣಾಶ್ರಮದವಿ । ಭಾಗವ ಮಾಡಬೇಕೆಂದು ॥
ಆಗುರು ಗ್ರಾಮನಗರ ಮುಂತಾದುವ । ಸಾಗುಮಾಡಿಸಬೇಕೆಂದು ॥ (103)

ನೆನೆಯಲೊಡನೆ ದೇವೇಂದ್ರನು ಬಂದಾಗ ॥ ಜಿನಪತಿಯನುಮತದಿಂದ ॥
ಜಿನಗೃಹಗಳ ಪುರಮಧ್ಯ ನಾಲ್ದೆಸೆಯೊಳ । ಗನುಮಾಡಿಸಿದ ರಚನೆಯೊಳು ॥ (104)

ದೇವನದೀ ಮಾತೃಕ ಸಾಧಾರಣ । ಭಾವಜಾಂಗಲನೆಂದೆನಿಪ ॥
ಈ ವಿಧ ನಾಮದ ದೇಶಂಗಳೊಳು ಮ । ತ್ತಾವಿಭು ಕಾಶಿ ಕಾಶ್ಮೀರ ॥ (105)

ಮಾಳವ ಮಗಧ ಪಾಂಚಾಳ ಗುರ್ಜರ ಸಿಂಧು । ಗೌಳ ಸೌರಾಷ್ಟ್ರ ಕಾಂಭೋಜ ॥
ಚೋಳ ಕೇರಳ ಕರ್ಣಾಟ ಕಾಶಲ ಬಂ । ಗಾಳ ವಿದರ್ಭ ತುರುಷ್ಕ ॥ (106)

ಅಂಗಪಲ್ಲವ ಕುರುಜಾಂಗಣ ವತ್ಸರಾ । ಳಂಗ ಮಹಾರಾಷ್ಟ್ರ ಕಚ್ಛ ॥
ವಂಗಮಹಾಕಚ್ಛ ಶೂರಸೇನಾದಿ ದೇ । ಶಂಗಳ ನಿರ್ಮಿಸಿ ಬಳಕ ॥ (107)

ಗ್ರಾಮನಗರ ಖೇಡ ಖರ್ವಡ ಮುಂತಾದ । ನಾಮಲಕ್ಷಣಯುಕ್ತವಾದ ॥
ಧಾಮ ಹರ್ಮ್ಯಗಳಿಂದ ಶೋಭಿಪ ಪುರಗಳ । ನಾ ಮಹಿಮನು ಮಾಡಿಸಿದ ॥ (108)

ಆತನಿಗಾಗ ಪುರಂದರನೆಂದೆಂಬ । ನೂತನ ನಾಮವ ಜಿನನು ॥
ಪ್ರೀತಿಯಿಂದಿಟ್ಟು ಕಳುಹಲಾದೇವೇಂದ್ರ । ತಾತೆರಳಿದ ತನ್ನ ಪುರಕೆ ॥ (109)

ಜಾತಿ ಕ್ಷತ್ರಿಯರ ವೈಶ್ಯ ಶೂದ್ರನೆಂದೆಂಬ ವಿ । ಖ್ಯಾತ ತ್ರಿವರ್ಣಾವನವರ ॥
ನೀತಿ ವರ್ತನೆಗಳ ಕಂಡು ನಿರ್ಮಿಸಿದ ಸೀ । ಪೀತೆರದಿಂದಿರಿಯೆಂದ ॥ (110)

ಕ್ಷತ್ರಿಯರಿಗೆ ಕ್ಷತ್ರ ಕರ್ಮವ ವೈಶ್ಯರ । ಗೋತ್ರಕ್ಕೆ ಕೃಷಿ ಪಶುಪಾಲ್ಯ ॥
ಸೂತ್ರಧಾರಕನು ಶೂದ್ರರಿಗೆ ಪೇಳದನು ವಿ । ಚಿತ್ರಸೇವಾಕರ್ಮಗಳನು ॥ (111)

ಜನನಾಷಾಢಬಹುಳ ಪಾಡ್ಯದೊಳಗಿದ । ನನುಮಾಡೆ ಕೃತಯುಗವಾಯ್ತು ॥
ಜನಪದ ಪುರವರ್ಣಗಳನು ನಿರ್ಮಿಸಿದನುಜಗ । ಜ್ಜನಕನಾದಿಬ್ರಹ್ಮನಾದ ॥ (112)

ರಾಜ್ಯಾಭಿಷೇಕವ ಮಾಡಬೇಕೆಂದು ಸು । ರೇಜ್ಯನಲ್ಲಿಂದೈತಂದು ॥
ಪೂಜ್ಯಜಿನನಿಗಭಿಷೇಕವ ಮಾಡಿ ಸಾ । ಮ್ರಾಜ್ಯ ಪಟ್ಟವ ಕಟ್ಟಿದನು ॥ (113)

ಆ ಸಮಯದೊಳು ವೇದಿಕೆಯ ಮಧ್ಯದಿ ಸಿಂ । ಹಾಸನದೊಳು ಜಿನಪತಿಯ ॥
ಲೇಸಾಗಿ ಪೂರ್ವಮುಖದೊಳೋಲಗವನಂ । ದಾಸುರಪತಿ ಮಾಡಿದನು ॥ (114)

ಭೃಂಗಾರ ಕಲಶದರ್ಪಣ ಮುಂತಾಗಿರ್ದ । ಮಂಗಲ ವಸ್ತುನಿಚಯವ ॥
ಸಿಂಗರವಾಗಿ ದೇವಾಂಗನೆಯರು ಬಂದು । ಮುಂಗಡೆಯೊಳುನಿಂದಿರಲು ॥ (115)

ಹಾವ ಭಾವಗಳು ವಿಲಾಸ ವಿಭ್ರಮ ಗೂಡಿ । ದೇವಾಂಗನೆಯರು ನರ್ತಿಸಲು ॥
ವಾವುಜ ತಾಳಮದ್ದಳೆಗಳನಾನೀಕ ॥ ದೇವರ್ಕಳೊಲಿದು ಬಾಜಿಪರು ॥ (116)

ಸರಿಗಮ ಪದನಿಯೆಂದೆಂಬ ಬೆಸರ ಸಪ್ತ । ಸ್ವರಗೂಡಿ ರಾಗವ ಮಾಡಿ ॥
ಪುರುಜಿನಪತಿಯ ಪಟ್ಟಾಭಿಷೇಕದ ಪದ । ದಿರವನು ಪಾಡಿನರ್ತಿಪರು ॥ (117)

ಗಂಗಾ ಸಿಂಧು ಮುಂತಾದ ತೀರ್ಥಂಗಳ । ಮಂಗಲ ಜಲವನು ತುಂಬಿ ॥
ಪೊಂಗೊಡದೊಳು ತರಿಸಿದ ನಮರೇದ್ರನು । ಹಿಂಗದ ಮನದುತ್ಸವದಿ ॥ (118)

ಪೊಡೆವ ನಾನಾವಾದ್ಯ ದೇವದುಂದುಭಿಗಳು । ಗಡಿಯಿಲ್ಲದೆ ಮೊಳಗಿದುವು ॥
ಗುಡಿತೋರಣ ರಂಗವಲಿಗಳು ಯೆಸೆಯಲು । ಪೊಡವಿಯೊಡೆಯನುತ್ಸಾಹದೊಳು ॥ (119)

ಸುರರಾಜ ನಾಭಿರಾಜೇಂದ್ರರಿಕ್ಕೆಲದೊಳು । ಪರಿಪೂರ್ಣ ಕುಂಭದ ಜಲವ ॥
ಸುರಿದರು ಶಿರದೊಳು ಜನ್ಮಾಭಿಷೇಕಕ್ಕೆ । ಸರಿಮಿಗಿಲೆಂಬ ಮಾಳ್ಕೆಯೊಳು ॥ (120)

ಬಳಿಕ ಮಾಗಧ ಮೊದಲಾದವರೆಲ್ಲ ಕಂ । ಗೊಳಿಪ ಪಾದಾಭಿಷೇಕವನು ॥
ಜಲಜ ಪತ್ರದ ಜಲದಿಂ ಪಾದಕಭಿಷೇಕ । ಗಳ ಮಾಡಿದರು ಪೌರರೆಲ್ಲ ॥ (121)

ಈ ತೆರದಿಂದ ಪಟ್ಟಾಭಿಷೇಕವ ಮಾಡಿ । ನೂತನ ವಸ್ತ್ರಭೂಷಣವ ॥
ಪ್ರೀತಿಯಿಂ ತೊಡಿಸಿ ಮಕುಟವಿಟ್ಟು ಪಟ್ಟವ । ನಾತನುಜನಿಗೆ ಕಟ್ಟಿದನು ॥ (122)

ಇಂದ್ರನೊಡನೆ ಕೂಡಿ ಯಾಮನುಕುಲವಾರ್ಧಿ । ಚಂದ್ರ ಶ್ರೀ ನಾಭಿರಾಜೇಂದ್ರ ॥
ರುಂದ್ರವಿಭವದೊಳೋಲಗವ ಮಾಡಿದನು ಜಿ । ನೇಂದ್ರನೆಯಧಿರಾಜನೆಂದು ॥ (123)

ಆ ಮಹಾ ಅಧಿಕಾರದಂಡಗಳಿಂದ ಮು । ನ್ನೀ ಮಹಿಯನು ರಕ್ಷಿಸಲು ॥
ಸ್ವಾಮಿ ನಿರೂಪಿಸಿದನು ದುಷ್ಟರಿಗೆ ಕರ್ಮ । ಭೂಮಿಪ್ರವೇಶ ಕಾಲದೊಳು ॥ (124)

ದಂಡಧರರು ಲೋಕದೊಳಗಿಲ್ಲದಿದ್ದರೆ । ಗಂಡುಗಲಿಗಳಾಗಿ ಜನರು ॥
ಕೊಂಡೊಯ್ವರೊಬ್ಬರರ್ಥವರೊಬ್ಬರೆಂದಾ । ದಂಡಧರರ ನಿಯಮಿಸಿದ ॥ (125)

ಮಕುಟ ಬದ್ಧರು ನಾಲ್ಕುಸಾವಿರ ಮಂದಿಯು । ನಿಕರಕೆ ಪ್ರಭುಗಳೆಂದೆನಿಪ ॥
ಪ್ರಕಟ ಸೋಮಪ್ರಭ ಹರಿಯು ಕಂಪನ ಪುಣ್ಯಾ । ಧಿಕಕಾಶ್ಯಪರನುಬರಿಸಿ ॥ (126)

ವರಸೋಮ ಪ್ರಭನಿಗೆ ಕುರುರಾಜನೆಂದೆಂಬ । ಹರಿಗೆ ಶ್ರೀ ಹರಿಕಾಂತನೆಂಬ ॥
ದೊರೆಯು ಕಂಪನನಿಗೆ ಶ್ರೀಧರನೆಂದೆಂ । ಬುರುತರ ನಾಮವನಿಟ್ಟ ॥ (127)

ಮತ್ತೆ ಕಾಶ್ಯಪನಿಗಮೋಘವಾಕ್ಯನು ಯೆಂ । ಬುತ್ತಮನಾಮವ ನಿಟ್ಟು ॥
ಇತ್ತನು ಕುರುಹರಿನಾಭಿಯೋಗ್ಯ ಪದವಿಯು । ಹೋತ್ತಂಸ ಪದವಿಯನವರ್ಗೆ ॥ (128)

ಅಧಿರಾಜ ಪದವಿಯು ಕಚ್ಛಮಹಾಕಚ್ಛ । ಗಧಿಕ ವಿಭವದೊಡಗೂಡಿ ॥
ಮಧುರ ವಚನದಿಂದಿತ್ತನು ವೃಷಭೇಶ । ಬುಧತತಿ ನುತ ಚರಣಾಬ್ಜ ॥ (129)

ಇಕ್ಷುರಸದ ಸಂಗ್ರಹಕೆ ಭೂತಳದಿ ತಾ । ನೀಕ್ಷಿತಿಯೊಳಗಾದುದರಿಂ ॥
ಇಕ್ಷ್ವಾಕು ವಂಶಕುಲತಿಲಕತಾನಾದನು । ಮೋಕ್ಷಗಾಮಿಗಳಗ್ರಗಣ್ಯ ॥ (130)

ಈ ರೀತಿಯೊಳು ರಾಜ್ಯಕಾಲತಾನರುವತ್ತ । ಮೂರು ಲಕ್ಷಪೂರ್ವಗಳು ॥
ಸಾರ ಸಾಮ್ರಾಜ್ಯ ಸುಖದೊಳು ಪೋಯ್ತನಲದ । ನಾರು ಬಣ್ಣಿಪರಿಂತೆಂದು ॥ (131)

ಇದು ಶ್ರುತಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿಗುಮ್ಮಟ ಸ್ವಾಮಿಯ ಚರಿತೆಯ । ಪದದೊಳಾರನೆಯ ಸಂಸಂಧಿ ॥ (132)

(ಆರನೆಯ ಸಂಧಿ ಸಮಾಪ್ತಂ)

## ಏಳನೆಯ ಸಂಧಿ.

ಧರ್ಮ ಚಕ್ರದ ಬಲದಿಂ ದುಷ್ಕರನುದು । ಷ್ಕರ್ಮ ಶತ್ರುಗಳನು ಜೈಸಿ ।
ಸರ್ವ ಸಾಮ್ರಾಜ್ಯಾಧಿಪತಿ ಗುಮ್ಮಟೇಶನೀ । ನಿರ್ಮಲ ಮತಿದೋರಿಸೆಸಗೆ ॥ (1)

ಹರಿವಿಷ್ಟರ ವನಲಂಕರಿಸಿದೇವರ ದೇವ । ನಿರೆ ರಾಜನ್ಯಕದ ಮಧ್ಯದೊಳು ॥
ದರಹಸಿತಾನನ ಮೃದು ವಿಲೋಕನದಿಂದ । ಹರುಷವ ಪುಟ್ಟಿಸುತವರ್ಗೆ ॥ (2)

ಭರತೇಶ್ವರ ಬಾಹು ಬಲಿಗಳಕ್ಕೆಲದೊಳ । ಗಿರಲವರೀರ್ವರ ಕೆಲದಿ ॥
ಕರಚೆಲುವಿಂದ ಸಿಂಗರವಾಗಿ ಉಳದಪ್ರ । ತ್ರರು ಕುಳಿತಿರೆ ಸೊಬಗಿಂದ ॥ (3)

ಮುತ್ತಿನ ಹಾರದ ಕಾಂತಿ ಬೆಳ್ದಿಂಗಳ । ವೊತ್ತುದಂಡದಿ ಪಸರಿಸಲು ॥
ಮತ್ತದರೊಳು ಮಾಣಿಕದ ಕಾಂತಿಯೊಳಿಮಿಸಿ । ಲ್ವೆತ್ತಂತೆ ಶೋಭಿಸುತಿಹುದು ॥ (4)

ಆ ಸಿಂಹಾಸನದ ಸಮೀಪದೊಳೊಪ್ಪುವ । ಭಾಸುರ ಮಣಿಪೀಠದೊಳು ॥
ಲೇಸಾಗಿ ನಾಭಿ ರಾಜನು ಕುಳಿತಿರಲದ । ರಾಶನ ಹೇಮ ಪೀಠದೊಳು ॥ (5)

ಇರುತಿರೆ ಕಚ್ಛ ಮಹಾ ಕಚ್ಛ ಕುರುರಾಜ । ಹರಿಕಾಂತ ಶ್ರೀಧರಾದಿಗಳು ॥
ನೆರೆದ ಮಕುಟ ಬದ್ಧರಿಂದಾ ವೋಲಗ । ಸಿರಿವೆತ್ತು ರಂಜಿಸುತ್ತಿಹುದು ॥ (6)

ಅಸಮಯದೊಳು ನಿಷ್ಕ್ರಮಣ ಕಲ್ಯಾಣವ । ತ್ಯಾಸನ್ನ ವಾಯ್ತೆಂದು ಜಿನಗೆ ॥
ವಾಸವ ನವಧಿಯಿಂದರಿದು ನರ್ತನವಿ । ಲಾಸವ ತೋರಿಸಲೆಂದು ॥ (7)

ಐರಾವತ ಗಜವೇರಿ ಗಾಂಧರ್ವರ । ಸಾರಮಧುರ ಗೀತಗಳನು ॥
ಆರೈದು ಕೇಳುತ ನೋಡುತ ಲಾದೇವ । ವಾರಾಂಗನೆಯರ ನರ್ತನವ ॥ (8)

ಭೋರೆಂದು ವಾದ್ಯವೊಳಗೆ ಬಂದು ಪೊಕ್ಕನು । ರಾರಾಜಿಪಾ ಸ್ಥಾನವನು ॥
ಆರಾಧಿಸಿ ಮಕುಟ ಪ್ರಭೆಯಿಂ ಜಿನ । ಚಾರು ಚರಣ ಕಮಲವನು ॥ (9)

ಜಿನನ ಸಿಂಹಾಸನ ದೊತ್ತಿನೊಳೊಪ್ಪುವ । ಕನಕಪೀಠದೊಳು ಕುಳ್ಳಿರ್ದು ॥
ಅನಿಮಿಷ ಪತಿಯಿಂತೆಂದು ಬಿನ್ನವಿಸಿದ । ಜಿನಪತಿನಿನ್ನೋಲಗವನು ॥ (10)

ನೋಡಿ ಕೃತಾರ್ಥರು ತಾವಾಗ ಬೇಕೆಂದು । ಬೇಡಿಕೊಳ್ಳುತಲಿದೆ ದೇವ ॥
ಮಾಡಿಸಪ್ಪಣೆಯನು ನೃತ್ಯಕ್ಕೆ ಜನರೆಲ್ಲ । ನೋಡಿ ಸಂತಸವೆಯ್ದುವಂತೆ ॥ (11)

ಎಂದು ಬಿನ್ನವಿಸಲು ದರಹಸಿತಾನನ । ದಿಂದ ಬೇಳಿದ ಸುರನರರ ॥
ವೃಂದ ಕಾನಂದ ವಪ್ಪಂತೆ ಮಾಡಿಸುನೀ । ನೆಂದಪ್ಪಣೆಯ ಕೊಟ್ಟನಾಗ ॥ (12)

ಮದನನ ಬಿಲ್ಲಿನ ಹೆದೆಯ ಝೇಂಕಾರದೊ । ಳ್ಪುದಿದ ವೀಣೆಯ ಧ್ವನಿಯಂತೆ ॥
ಹದುಳಿಸಿ ಶ್ರುತಿಗಳವಟ್ಟು ಪಾಡಿದಳೊರ್ವ ಸುದತಿ ಮಧುರ ಗೀತವನು ॥ (13)

ಸ್ವರಭೇದ ಗ್ರಾಮ ಮೂರ್ಛನೆ ತಾನಾಠಯೊಗ । ಳರವನು ಕಾಲಭೇದಗಳು ॥
ಪರಿಯನರಿದು ನಾಟ ಭೈರವಿ ಸೌರಾಷ್ಟ್ರ । ವರಮಧು ಮಾಧವಿ ಗೌಳ ॥ (14)

ಮಾಳವ ಪಂಚಮ ದೇಶಿ ದೇಶಾಕ್ಷಿ ಬಂ । ಗಾಳ ಕಲ್ಯಾಣಿ ಕಾಂಭೋಧಿ ॥
ಸಾಳಂಗ ಮುಂತಾದರಾಗವ ಮುದದಿಂದ । ಕೇಳಿಸಿದಳು ಸುಸ್ವರದೊಳು ॥ (15)

ಆಮರ್ದಿನ ಮಳೆ ಮುಗಿಲ ಧ್ವನಿಯಂದದೊ । ಳಮರ್ದನೆ ಕಿವಿಯೊಳು ತುಂಬಿ ॥
ಕ್ರಮ ಕಟ್ಟಲೆಗಳ ಗತಿಯ ಬಾಜಿಸಿದನೊರ್ವ । ಸಮರ ಮದ್ದಳೆಯ ಲೀಲೆಯೊಳು ॥ (16)

ತುಡುಕುಪಹರಣೆ ರಿಪ್ಪುರಣೆ ಮೋಡಿಗಳನು । ನುಡಿಸೆ ಚಮತ್ಕಾರ ಲಾಗು ॥
ಹಿಡಿತ ಬಿಡಿತಗಳ ಮೋಹನವನು ತೋರಿ । ನುಡಿಸಿದ ಮಾರ್ದಂಗಿಕನು ॥ (17)

ಧ್ರುವ ತಾಳ ಮಟ್ಟೆಯು ರೂಪಕ ಜಂಪೆ ಯಾಠತಾಳ । ತ್ರಿಪುಡೆಬಳಿಕೇಕತಾಳ ॥
ಇಪ್ಪೆ ಮೊದಲಾದ ತಾಳಗಳನುಗ್ಘಡಿಸಿದ । ಸುವಿವೇಕದಿಂ ತಾಳಧಾರಿ ॥ (18)

ಉಟ್ಟ ಪಟ್ಟೆಯು ಕಾಸೆಯು ಧೋತ್ರಧೂರ್ಮವು ಕಳೆ । ವಟ್ಟ ಕಂಚುಕೆ ಸೊಗಲಿನೊಳು ॥
ಇಟ್ಟ ಕಸ್ತೂರಿ ಬೊಟ್ಟು ಹಾರಪದಕ ಸತ್ತ್ರ । ಗಟ್ಟಿ ಮಾಣಿಕದೋಲೆಯೊಸೆಯೆ ॥ (19)

ಮೂಗುತಿ ಕಾಂಚೀದಾಮ ನೇವುರಗಳಿಂ । ದಾಗ ಸಿಂಗರವಾಗಿ ಬಂದು ॥
ಮೇಘವರ್ಣದ ಜವನಿಕೆಯು ಮರೆಯೊ ಳಗನು । ರಾಗದಿಂ ನಿಂದಳೇನೆಂಬೆ ॥ (20)

ನೀಲಾಂಜನೆಯೆಂಬ ನರ್ತಕಿ ಮಿಂಚಿನ । ಮಾಲೆಯಂದದಿ ನೋಳ್ಪಜನಕೆ ॥
ಲೀಲೆ ದೋರುತ ಸೊಬಗಿಂದ ನಿಂದಳು ಪೂ । ಗೋಲನೈಸಿರಿಯು ನಿಂದಂತೆ ॥ (21)

ತೆರೆಯು ಮರೆಯೊಳಂದೆರಡು [1] ಕಳಿಶವ । ಗರುವೆ ತಾಕೊಂಡು ನಿಂದಿರಲು ॥
ತರೆಜಾರಲೊಡನೆ ಪುಷ್ಪಾಂಜಲಿಯನು ಸೂಸಿ । ಸ್ಮರಬಾಣಗಳ ನೆಚ್ಚಿಸಭೆಗೆ ॥ (22)

ರಂಗದೊಳಗೆ ವೈಸಿರಿ ದೋರೆ ಜನರಂತ । ರಂಗದೊಳಗೆ ವೈಸಿರಿಯು ॥
ಅಂಗನೆ ತೋರುವಳೆಂದೆನಲವಳ ಬೆ । ಡಂಗನದಾರು ಬಣ್ಣಿಪರು ॥ (23)

ನಿಲುವಿನ ರೇಖೆ ದೇಹದಲಾಗು ಲಾಗಿನೊ । ಳಳವಟ್ಟ ರೂಪುದೇಸಿಗಳು ॥
ಪಲವುತೆರದ ಗಾಡಿಕೊಂಡು ಭಾವಂಗಳು । ಲಲಿತಾಂಗಿಗೊಪ್ಪಿದುವಾಗ ॥ (24)

ಮೊಗದೊಳು ಹಾವ ವಿಲಾಸ ನೇತ್ರಾಗಳೊ । ಳೊಗೆದುದು ಭಾವ ಚಿತ್ರದೊಳು ॥
ಸೊಗಸುವ ಭ್ರೂಮಧ್ಯ ದೊಳಗೆ ವಿಭ್ರಮಗಳು । ಮಿಗೆ ರಂಜಿಸಿದುವು ನರ್ತಕಿಯ ॥ (25)

ಕೋಪಕಳಿಸಕೆ ಮರೆವಟ್ಟ ವೈಸಿರಿ । ರೂಪು ವಿಲಾಸ ಮೋಡಿಗಳ ॥
ಆಪರಿಯೊಳು ನೋಳ್ಪ ಜನರಿಗೆ ಸ್ಮರಸಂ । ತಾಪವ ಪುಟ್ಟಿಸುತಿಹವು ॥ (26)

ರಸದೃಷ್ಟಿ ಸ್ಥಾಯಿ ಸಂಚಾರಿ ದೃಷ್ಟಿಗಳಿಂ । ದೆಸೆವ ಕರಣ ಭೇದದಿಂದ ॥
ಪಸರಿಪ ಪದಚಾರಿ ಹಸ್ತ ಭೇದಗಳಿಂ । ದೊಸೆದು ನರ್ತಿಸಿದಳಾ ಚದುರೆ ॥ (27)

ಮೊದಲು ವಿಲಂಬಿತ ದೊಳಗಾಡಿ ಮಧ್ಯದೊ । ಳದರಿಂದ ಬಳಿಕಲಾಡಿದಳು ॥
ಪದಹತಿಯೊಳು ದ್ರುತಲಯ ಲಕ್ಷಣ ಗೂಡಿ । ಸುದತಿ ನರ್ತಿಸಿ ಮೆಚ್ಚಿಸಿದಳು ॥ (28)

ರಸಭಾವ ವಭಿನಯಂಗಳ ನಾನೀರೆ । ಪೊಸಪೊಸತೆನೆ ಕಾಣಿಸುತ ॥
ಅಸಮಾಸ್ತ್ರನ ಬಾಣಕಡೆ ಮಾಡಿದಳು ನೋಳ್ಪ । ರಸಿಕರ ಚಿತ್ತವನೆಲ್ಲ ॥ (29)

ಅನುಭಾವ ಸಾತ್ವಿಕ ಸಂಚಾರಿ ಭಾವವ । ಜನರಿಗೆಲ್ಲರಿಗೆ ಪುಟ್ಟಿಸುತ ॥
ಅನಿಮಿಷಪತಿ ಆದಿದೇವನ ಚಿತ್ತವ । ನನುರಂಜಿಸಿದಳೇನನೆಂಬೆ ॥ (30)

ಅಂಗ ಹಾರಗಳು ಮೂವತ್ತೆರಡನು ಕರ । ಣಂಗಳು ನೂರೆಂಟನಾಗ ॥
ಅಂಗನೆ ತೋರಿದಳಾದಿ ದೇವನ ಮುಂದೆ ॥ ಕಂಗೊಳಸುವ ನರ್ತನದೊಳು ॥ (31)

ಪೊಗುವಳು ಪೊರಮಡುವಳು ಕೂಡೆ ಜಾರುವಳ್ । ಮುಗಿಲ ಮರೆಯ ಮಿಂಚಿನಂತೆ ॥
ನಗೆ ಮೊಗದೊಳು ಮುಗುಳ್ನಗೆಯ ಸೂಸುತ ಕಡು । ಸೊಗಸು ದೋರಿದಳಾನೀರೆ ॥ (32)

---

[1] ಕಳಶವ.

ಇಂತು ನರ್ತನ ದೊಳಗಾಜಿನ ಪತಿಯು ಶು । ದ್ಧಾಂತರಂಗಕೆ ರಂಜಿಸೆಯು ॥
ಕಾಂತೆ ಮಾಡಿದಳು ಶುದ್ಧ ಸ್ಫಟಿಕವ ತ । ನ್ನಂತೆ ಮಾಡದೆ ರಾವ್ರ ಪುಷ್ಪ ॥ (33)

ಇನಿತು ಸಭಾಪತಿ ಸಭ್ಯರಿಗೆಲ್ಲ ರಂ । ಜನೆಯನು ಮಾಡುತಲಿರ್ದ ॥
ವನಿತೆ ಯದೃಶ್ಯವಾದಳು ಕಾಲನಿಂದ ಮಿಂ । ಚಿನ ಮಾಲೆಯಂದದೊಳಾಗ ॥ (34)

ರಸಭಂಗ ಭಯದಿಂದ ದೇವೇಂದ್ರ ಮತ್ತೊಂದು । ಪೊಸತಾದ ದೊರೆಯ ಪಾತ್ರವನು ॥
ಪೊಸೆದಾಕ್ಷಣವೆ ನಿಲಿಸಲವಳು ನ । ರ್ತಿಸು ತಿರಲವಳಂದ ದೊಳು ॥ (35)

ಆ ನೀಲಾಂಜನೆಯೆಂದೇ ಸಭೆಯೆಲ್ಲ । ವಾನಂದದಿಂ ನೋಡುತಿರಲು ॥
ಜ್ಞಾನಿಗಳರಸ ತಿಳಿದು ಚೋದ್ಯವಟ್ಟನಿ । ನ್ನೇನೆಂಬೆನವನ ಬೋಧವನು ॥ (36)

ಈ ಸಂಸಾರ ಶರೀರ ಭೋಗಗಳೆಲ್ಲ । ಈ ಸುದತಿಯ ರೂಪಿನಂತೆ ॥
ಆಸಕ್ತಿಯನು ಪುಟ್ಟಿಸಿ ಬಯಲಪ್ಪವು । ಲೇಸಿಲ್ಲವೆಂದು ಭಾವಿಸಿದ ॥ (37)

ಸಂಸಾರ ನಾಟಕವನು ತೋರಿ ಪೋದಳೀ । ಹಂಸಗಮನೆ ಯೆಮ ತಿಳಿಸು ॥
ಹಂಸನಂದದಿ ಜಾಣನಪ್ಪೆನೆಂದಾ ರಾಜ । ಹಂಸ ಮನದೊಳು ಚಿಂತಿಸಿದ ॥ (38)

ಮುಗಿಲೊಡ್ಡು ಮಿಂಚಿನ ಹೊಳಹು ಬೊಬ್ಬುಳಿಕೆ ಕಾ । ಮನಬಿಲ್ಲಿಂತಂತೆ ॥
ನೊಗಸು ಯೌವನ ವಿಭವ ರೂಪುಗಳೆಂದು । ಬಗೆದನು ದೇವರ ದೇವ ॥ (39)

ನರಕತಿರಿಕ ಗತಿಯೊಳು ದುಃಖವೆಸಾರ । ನರಗತಿಯೊಳು ಚಿಂತೆಶೋಕ ॥
ಜರೆಜನ್ಮ ಮರಣ ವಿಷಾದರೋಗಗಳಿಂದ । । ಹಿರಿದಾದ ದುಃಖಗಳುಂಟು ॥ (40)

ಸುರಗತಿಯೊಳು ಅರುದಿಂಗಳುಂಟೆನ ಲಾಯು । ಸಿರಿಸತ್ತಿ ಭೋಗ ವಸ್ತುಗಳ ॥
ನೆರೆಕಂಡು ಸಾಕೆಪ ದುಃಖವೆ ನೋಡಲು । ನರಕ ದುಃಖ ದಂತಿಹುದು ॥ (41)

ಆವೆಲ್ಲಿ ನೋಡಲು ಸುಖವಿಲ್ಲ ಭವದುಃಖ । ದಾವಾಗ್ನಿಯ ಮಧ್ಯದೊಳು ॥
ನಾವಿಲ್ಲಿ ಸಿಕ್ಕಿರಬಾರದೆಂದಾದೇವರ । ದೇವ ಮನದಿ ಚಿಂತಿಸಿದ ॥ (42)

ಎನಿತು ಭವದೊಳಾದು ದಿಲ್ಲವೀ ತನುಜರು । ಜನನಿ ಜನಕ ಬಂಧುಗಳು ॥
ಅನಿತ್ರನೀ ಖರದ ಸಂಬಂಧವೆಂದಂದಾ । ಜಿನಪತಿ ಮನದೊಳು ನೆನೆದ । (43)

ಭೂಷಣಗಳು ಮಾನದ ಚೆಲ್ವಿಕೆಗದು । ದೂಷಣವನು ಮಾಡುತಿಹವು ॥
ಶೋಷಣವನು ತನುವಿಗೆ ಮಾಳ್ಪವಿವರವ । ನ್ವೇಷಣದಿಂ ಫಲವೇನು ॥ (44)

ಮೂರು ರನ್ನದ ತೊಡಿಗೆಯ ತೊಟ್ಟು ಶ್ರೀ ಮುಕ್ತಿ । ನಾರಿಯನೊಲಿಸಬೇಕೆಂದು ॥
ಧಾರಿಣಿಪತಿ ಚಿಂತಿಸಿ ತನ್ನ ಮನದಿ ಸಂ । ಸಾರವಿಮುಖನಾದನಾಗ ॥ (45)

ಸಾರಸ್ವತಾದಿತ್ಯ ಮೊದಲಾದೆಣ್ಬರ । ಪಾರಚತುರ್ದಶ ಪೂರ್ವ ॥
ದಾರಿಗಳ್ ಬ್ರಹ್ಮ ಕಲ್ಪಾಂತ ವಾಸಿಗರತಿ । ಧೀರರು ಶುಭಭಾವಯುತರು ॥ (46)

ಪರಿನಿಷ್ಕ್ರಮಣ ಕಲ್ಯಾಣ ಸಮಯ ವೆಂಬ । ಶರದಾಗಮವ ಸಾರ್ದೈಸಿ ॥
ಇರುತಿರ್ದ ಲೋಕಾಂತಿಕ ದೇವ ಹಂಸರು । ಭರದಿಂದೈತಂದರಾಗ ॥ (47)

ಮಂದಾರ ಕುಸುಮದಿಂದರ್ಚಿಸಿ ಪಾದಾರ । ವಿಂದವ ವಂದಿಸಿ ಬಳಿಕ ॥
ನಿಂದು ತಮ್ಮಯ ಕರಕಮಲವಮುಗಿದು ಯಿಂ । ತೆಂದು ಬಿನ್ನವಿಸಿದರವರು ॥ (48)

ಎಲೆ ಸ್ವಾಮಿ ಪಂಚೇಂದ್ರಿಯವೆಂಬ ಮದಗಜ । ಗಳನು ತಪೋಂಕುಶದಿಂದ ॥
ಗೆಲ್ಲಲನೆ ವಶಮಾಡಿ ಕರ್ಮಾರಣ್ಯವ ಧ್ಯಾನಾ । ನಳನಿಂದ ನೀದಹಿಸು ॥ (49)

ಮನದೊಳು ನೆನೆದುದು ಹಸನಾಯ್ತು ಜಗದೊಳು । ನಿನಗಿನ್ನು ಬೋಧಕರುಂಟೆ ॥
ಮುನಿಮಾರ್ಗವನು ಮುಕ್ತಿ ಮಾರ್ಗವನೀ ಭವ್ಯ । ಜನರಿಗೆ ಕಾಣಿಸು ಸ್ವಾಮಿ ॥ (50)

ಹದಿನೆಂಟು ಕೋಟಿಸಾಗರ ಕಾಲ [ಪರ್ಯಂತ] । ವಿದರೊಳು ತೀರ್ಥವ ತರಿಸಿ ॥
ಪುದಿದ ದಯಾಮೂಲ ಧರ್ಮದೇಳ್ಗೆಯನೀ । ಮುದದಿಂದ ನೋಡೆಲೆಸ್ವಾಮಿ ॥ (51)

ಎಂದು ನಾನಾತೆರದಿಂದ ಬಿನ್ನವಿಸಿಯಾ । ನಂದವ ಪುಟ್ಟಿಸಿ ತೆರಳೆ ॥
ಬಂದನವಧಿಯಿಂದರಿದು ದೇವರ್ಕಳ । ವೃಂದದೊಡನೆ ದೇವೇಂದ್ರ ॥ (52)

ಸುರರಿಂದ ಕ್ಷೀರಸಮುದ್ರದ ಜಲವನು । ತರಿಸಿ ಸುವರ್ಣ ಕುಂಭದೊಳು ॥
ಪರಿನಿಷ್ಕ್ರಮಣ ಕಲ್ಯಾಣಾಭಿಷೇಕವ । ಪುರುಜಿನಪತಿಗೆ ಮಾಡಿದನು ॥ (53)

ಮೊದಲ ಜನ್ಮೋತ್ಸವ ರಾಜ್ಯಾಭಿಷೇಕದಿಂ । ದಿದು ಮಿಗಿಲೆಂಬ ಮಾಳ್ಕೆಯೊಳು ॥
ಮುದದಿಂದ ಮಾಡಿದ ನಾನೆಂತು ಬಣ್ಣಿಪೆ । ನದರ ಸಂಭ್ರಮವನಿಂತೆಂದು ॥ (54)

ಬಳಿಕ ರಾಜ್ಯಾಭಿಷೇಕವ ಭರತನಿಗನು । ಗೊಳಿಸಿ ವಿಭವದೊಡಗೂಡಿ ॥
ಜಲಧಿ ಹಿಮಾಚಲ ಪರ್ಯಂತವಾದ ಭೂ । ತಳವ ನೀನಾಳೆಂದು ಹರಸಿ ॥ (55)

ಆದರದಿಂ ಮುತ್ತಿಸಿಕ್ಷತೆಗಳನಂ । ದಾದಿಜಿನೇಂದ್ರ ತಳಯಾಲು ॥
ಮೇದಿನಿ ಪತಿಗಳೆಲ್ಲರು ಕಾಣಿಕೆಯನಿಕ್ಕಿ । ಪಾದಕೆರಗಿದರಾ ನೃಪನ ॥ (56)

ಯುವರಾಜ ಪದವಿಯ ಬಾಹುಬಲೀಶಗೆ । ಅವನಿಪಾಲಕರ ಮುಂದಿಟ್ಟು ॥
ತವಕದಿಂದಿತ್ತನು ವೃಷಭೇಶನನೊಂದು । ಸುವಿವೇಕವನೇನೆಂಬೆ ॥ (57)

ಧರೆಯ ವಿಂಗಡಿಸಿಯ ಯೋಧ್ಯೆ ಪಾದನ । ಪುರದಾಧಿಪತ್ಯ ದೊಳಗಿವರ ॥
ನಿರಿಸಲಾ ಸಮಯದೊಳೀ ಧರೆಗೆಲ್ಲ । ಹರುಷವಿಷಾದಂಗಳೊದವೆ ॥ (58)

ಒಂದೆಡೆಯಲಿ ಪರಿನಿಷ್ಕ್ರಮಣದ ದೇವ । ದುಂದುಭಿಗಳು ಮೊಳಗಿಪುವು ॥
ಒಂದೆಡೆಯಲಿ ರಾಜ್ಯಾಭಿಷೇಕದ ವಾದ್ಯ । ಸಂದಣಿಸಿತು ಪುರದೊಳಗೆ ॥ (59)

ಒಂದೆಡೆಯೊಳು ದೇವಾಂಗನೆಯರ ಗೀತ । ಒಂದೆಡೆಯೊಳು ರಾಜವನಿತಾ ॥
ಸಂದೋಹದ ಗೀತಯೆಲ್ಲಿ ಕೇಳ್ದರಾ । ನಂದವ ಪುಟ್ಟಿಸುತಿಹುದು ॥ (60)

ಮತ್ತಾಜಿನನಾಥನುಳಿದ ಕುಮಾರರಿ । ಗಿತ್ತನು ವಿಭವ ಸನಾಥ ॥
ಸುತ್ತಣ ರಾಜ್ಯವನಲ್ಲಲ್ಲಿ ನಿರ್ವೇಗ । ಚಿತ್ತದೊಳಗೆ ಪೆಚ್ಚುತಿರಲು ॥ (61)

ತಂದೆತಾಯನು ಬೀಳ್ಕೊಂಡು ಬಂಧುಗಳನು । ನಿಂದಿರಿಯೆಂದು ನಿಲ್ಲಿಸುತ ॥
ತಂದು ಪಿಡಿಯೆ ದೇವ ವೃಂದ ಪಲ್ಲಕಿಯಾ । ನಂದದಿಂದೇರಿದನಾಗ ॥ (62)

ಮುಂದೆ ಗುಣಶ್ರೇಣಿಯ ತಾನೇರ ಬೇ । ಕೆಂದಭ್ಯಾಸವ ಮಾಡುವಂತೆ ॥
ಬಂದು ಸುದರ್ಶನವೆಂಬ ಪಲ್ಲಕ್ಕಿಯ । ನಂದೇರಿದನು ಜಿನರಾಜ ॥ (63)

ಏಳಡಿತನಕ ಭೂಪಾಲರು ಧರಿಸಿದ । ರೇಳಡಿಯನು ವಿಯಚ್ಚರರು ॥
ಮೇಳದಿಂದಾ ಪಲ್ಲಕ್ಕಿಯ ಮುಂದಿಂದ್ರ । ರಾಳಧರಿಸಿತುತ್ಸವದೊಳು ॥ (64)

ಅಲ್ಲಿಯು ಜನರೀದೇವನ ಸುರರಿ । ನ್ನೆಲ್ಲಿಗೆಯ್ದಿಸಿದರೊಯೆನುತ ॥
ತಲ್ಲಣಗೊಳ್ಳುತಿರೆ ಕೆಲಬರು ತಮ್ಮೊಳು । ಸೊಲ್ಲಿಸಿ ಪೇಳ್ದರಿಂತೆಂದು ॥ (65)

ಈ ದೇವನ್ನ ಪುಟ್ಟಿದಾರಭ್ಯದಿಂದನಿಬರು । ತಾವಾದರದಿಂದೀಸುರರು ॥
ಈ ದೇವನ ಕೊಂಡೊಯ್ವರು ತಿರಿಗಿ ಪಿ । ನೋದದಿಂ ತರುವರೀ ಪುರಕೆ ॥ (66)

ಎಂದು ಪೇಳಲು ವಿವೇಕಿಗಳವರೊಳ್ । ಗೆಂದರು ತಿರಿಗೀ ಜಿನನು ॥
ಬಂದಪನಾವರೆ ರಾಜ್ಯವ ಕುವರರಿ । ಗಿಂದೇತಕೆ ಹಂಚಿ ಕೊಡುವ ॥ (67)

ಹಂಬಲಬಿಟ್ಟು ಪೋದನು ನಮ್ಮೆಲ್ಲರ । ನಂಬಿದ್ದೆವವನ ಪಾದವನು ॥
ತುಂಬಿದ ಸಿರಿಹಾರಿತು ತಮಗೆಂದುಕೆ । ಲಂಬರು ಹಂಬಲಿಸಿದರು ॥ (68)

ಇನಿತು ದಿವಸ ನಮ್ಮನಗಲದೆ ಸುಖದೊಳು । ಜಿನಪತಿ ಆಸಿರುತಿರ್ದು ॥
ಎನಗೊಂದು ಮಾತನೀತೆರನೆಂದು ಪೇಳ್ದು ಪೋ । ದನೆಯೆಂದು ಕಣ್ಣನಿದುಂಬ ॥ (69)

ಆಯುಶಶ್ವತಿಯು ಸುನಂದೆಯು ತಮ್ಮೊಳು । ಬಾಯ್ಬಿಟ್ಟು ಹಲುಬುತಲಿರಲು ॥
ಪ್ರಾಯ ವೃದ್ಧರು ನಿಮ್ಮರಸನೀಗಳೆ ಬರ್ಪ । ನಾಯಾಸಗೊಳದಿರಿಯೆಂದು ॥ (70)

ಸಂತೈಸಿ ನುಡಿಯಲೊಡನೆ ತಿರುಗಿದರಾ । ಕಾಂತೆಯರರಮನೆಗಾಗಿ ॥
ಕಾಂತನಗಲ್ಕೆ ಯೆಂಬುದು ಸತಿಯರಿಗೆ ದು । ರಂತದುಃಖದ ತಾಣವಲ್ತೆ ॥ (71)

ಇತ್ತಲು ನಾಭಿರಾಜನು ಭರತೇಶ್ವರ । ನುತ್ತಮ ಕಚ್ಛಮುಂತಾದ ॥
ಸುತ್ತಣ ನೃಪರ್ವೆತಂದರು ಜಿನನ ಸಂ । ಪತ್ತನು ನೋಡಬೇಕೆಂದು ॥ (72)

ಮರುದೇವಿ ಮುಂತಾದ ರಾಜಾಂಗನೆಯರು । ಪರಿನಿಷ್ಕ್ರಮಣ ವಿಧಿಯನು ॥
ಭರದಿಂದ ನೋಡಬೇಕೆಂದ್ವೆತಂದರು । ಪುರುಪರಮೇಶ್ವರನೊಡನೆ ॥ (73)

ಪುರದಿಂದನತಿ ದೂರದೊಳು ಸಿದ್ಧಾರ್ಥ ವೆಂ । ಬುರುತರ ವನ ವಿಷ್ಟದಲ್ಲಿ ॥
ಸುರತರುಗಳನು ಜರೆವ ತರುನಿಚಯದಿಂ । ಕರಚೆಲ್ವನಾಂ ತೊಪ್ಪುತಿಹುದು ॥ (74)

ಅವರನಡುವೆ ಪೂರ್ಣ ಚಂದ್ರನಂದದೊಳತಿ । ಮುಪವನು ಪುಟ್ಟಿಸುತಿರ್ಪ ॥
ಸದಮಲ ಚಂದ್ರಕಾಂತದ ಶಿಲೆಯೊಪ್ಪುತ್ತು । ದವರೊಳಗಿಂದ್ರ ನೆಯ್ತಂದು ॥ (75)

ಪಲ್ಲಕ್ಕಿಯನು ತೋಗಲಾಜಿನಪತಿ ಬಂ । ದಲ್ಲಿ ತಾನಿಳದ ನುತ್ಸವದಿ ॥
ಎಲ್ಲಿನೋಡಿದರು ಪೂವಲಿ ರಂಗವಲಿಗಳಂ । ಸಲ್ಲೀಲೆ ದೋರ್ಪದಾಶಿಲೆಯು ॥ (76)

ಧನದನಿರ್ಮಿಸಿದ ವಿಚಿತ್ರ ಮಂಟಪದೊಳು । ಜಿನಪತಿ ಪೂರ್ವಾಭಿಮುಖದಿಂ ॥
ಅನುಬದ್ಧ ಪಲ್ಯಂ ಕಾಸನದೊಳು ಶುಭಭಾ । ವನೆಯಿಂದ ಕುಳಿತನೊಪ್ಪದೊಳು ॥ (77)

ಬಹಿರಭ್ಯಂತರ ಬಹು ಭೇದಯುತ ಪರಿ । ಗ್ರಹವನು ತೊಲಗಿಸಿ ಬಳಕ ॥
ಸಹಜ ವಿಶುದ್ಧ ಚಿತ್ತದಿ ಕುಂತಳಗಳ । ಗ್ರಹಿಸಿ ಬಲವ ಹಸ್ತದಿಂದ ॥ (78)

ಆಗ 'ನಮಃ ಸಿದ್ಧೇಭ್ಯ' ಎಂದಾ ವೀತ । ರಾಗ ನುಚ್ಚರಿಸಿ ಕರ್ಮಗಳ ॥
ಆಗಳೆ ಬೇರನು ಕೀಳ್ವಂತೆ ಕಳೆದನು । ಬೇಗತ್ರಿ ಸಾಕ್ಷಿಕವಾಗಿ ॥ (79)

ವರಚೈತ್ರ ಕೃಷ್ಣ ಪಕ್ಷದ ನವಮಿಯೊಳು ಬಂ । ದಿರಲುತ್ತರಾಷಾಢ ತಾರೆ ॥
ಪುರು ಜಿನಪತಿ ಮೂರು ಜಾವದೊಳಗೆ ದು । ರ್ಧರಜಿನ ದೀಕ್ಷೆಯನಾಂತ ॥ (80)

ಆಜಿನಪತಿಯ ಕುಟಿಲ ಕುಂತಳಂಗಳ । ರಾಜಿಪ ಮಣಿಮಯವಾದ ॥
ಭಾಜನದೊಳಗಿಟ್ಟು ಪಾಲ್ಗಡಲಿಗೆ ಸುರ । ರಾಜ ತಂದನು ಸಂಭ್ರಮದಿ ॥ (81)

ಅಲ್ಲಿಯಾ ಕುಂತಳವನು ಬಿಡೆ ಮಸ್ತಕ । ದಲ್ಲಿ ಧರಿಸಿತು ಪಾಲ್ಗಡಲು ॥
ಎಲ್ಲಿ ಹೋದರೆ ಪೂಜ್ಯರಿಗೆ ಪೂಜ್ಯತ್ವವ । ಬಲ್ಲ ಜನರು ಮಾಡದಿಹರೆ ॥ (82)

ಮುನ್ನೀ ಕೇಶದ ಸೋಂಕಿಂದ ಪಾವನ । ವೆನ್ನ ಜೀವನ ಮಾತ್ರವಾಯ್ತು ॥
ಇನ್ನು ದೇಹವನು ಪವಿತ್ರವ ಮಾಳ್ಪೆನೆಂದು । ತನ್ನ ಶಿರದೊಳು ಧರಿಸಿತು ॥ (83)

ಇಂತು ನಿಷ್ಕ್ರಮಣ ಪೂಜೆಯ ಮಾಡಿದೇವೇಂದ್ರ । ತಾಂ ತೆರಳಲು ಭರತೇಶ ॥
ಅಂತರಂಗವ ಭಕ್ತಿಯಿಂ ತ್ರಿಭುವನ ಗುರು । ವಂ ತಾನು ಪೂಜಿಸಿ ಪುರಕೆ ॥ (84)

ತೆರಳಲು ಕಚ್ಛ ಮಹಾ ಕಚ್ಛ ಭರತೇ । ಶ್ವರನ ಕುಮಾರ ಮರೀಚಿ ॥
ಅರಿಕೆಯ ಮಕುಟ ಬದ್ಧರು ನಾಲ್ಕುಸಾವಿರ । ತೆರಳದೆ ನಿಂದರೇನೆಂಬೆ ॥ (85)

ಅರಸಿನಂದದಿ ಪರಿವಾರ ನಾವೆಲ್ಲರು । ಇರಬೇಕೆಂದು ಭಕ್ತಿಯೊಳು ॥
ಗುರುವಿನ ಗುಣವರಿಯದೆ ಜಾತರೂಪನು । ಧರಿಸಿದರವರರ್ತಿಯಿಂದ ॥ (86)

ಇಲ್ಲಿಂದ ಇನ್ನರುದಿಂಗಳು ತನಕತಾ । ನೆಲ್ಲಿಗು ಚಲಿಸೆನೆಂದೆನುತ ॥
ಸಲ್ಲೀಲೆಯಿಂದ ಪೂರ್ಣಕ್ಕೆಯ ಮಾಡಿ ನಿಂದ ತಾ । ನಲ್ಲಿ ಕಾಯೋತ್ಸರ್ಗದಿಂದ ॥ (87)

ಮಡುವೆಡೆಯೊಳು ಸಾಲ್ವೆರಳಂತರ ಮುಂ । ಗಡೆಯೊಳಗೊಂದೇ ಗೇಣು ॥
ಎಡೆವಿಟ್ಟಡಿಯಿಟ್ಟು ನಿಂದನು ಮೌನದ । ಬೆಡಗಿನಿಂದಾದಿ ಮುನೀಂದ್ರ ॥ (88)

ಚಲಿಸವ ದೃಷ್ಟಿ ಅಪಾಂಗವಿಲೋಕನ । ವಿಲಸನ ಭ್ರೂಭಂಗಗಳ ॥
ನೊಳಕೊಳ್ಳದ ಮೊಗವಾಜಾನು ಬಾಹು ಕಂ । ಗೊಳಿಸುತಿಹುದು ಮುನಿಪತಿಯ ॥ (89)

ದೀಕ್ಷಾನಂತರ ದೊಳು ಪುಟ್ಟಿತಾಗ ಮು । ಮುಕ್ಷುಗೆ ಯತಿಶಯದಿಂದ ॥
ಆಕ್ಷಣದೊಳು ಮನಃಪರ್ಯಯ ಬೋಧ ಕ । ಮಾರ್ಕ್ಷಯ ಭಾಗಿಗಿವರಿದೆ ॥ (90)

ಅಂದು ಚತುರ್ಜ್ಞಾನಾದಿ ಚತುರ್ಮುಖ । ದಿಂದೊಪ್ಪುತಿರಲಾದಿ ಬ್ರಹ್ಮ ॥
ಮುಂದ ಮತಿಗಳರಿಯದೆ ಮುಖ ನಾಲ್ಕೆಂದಾ । ನಂದದಿಂ ಪೇಳ್ವರಾದಿಬ್ರಹ್ಮಗೆ ॥ (91)

ದೀಕ್ಷೆಯಿಲ್ಲದೆ ದ್ರವ್ಯಲಿಂಗಿಗಳಾಗಿ । ದಾಕ್ಷಿತಿಪರ ನಟ್ಟನಡುವೆ ॥
ನಕ್ಷತ್ರ ಮಧ್ಯದ ಚಂದ್ರನಂತಾದಿ ಮು । ಮುಕ್ಷುವೊಪ್ಪಿದನೇನನೆಂಬೆ ॥ (92)

ಗುಪ್ತಯೋಗದೊಳೊಂದೆರಡು ತಿಂಗಳು ನಿಲೆ । ಸಪ್ತರ್ದ್ಧಿ ಸಂಪನ್ನನಾಗ ॥
ತಪ್ತ ತಪದೊಳು ಕ್ಷುಧಾದಿ ಪರಿಷಹ । ಲಿಪ್ತರಾದರು ಕಚ್ಛಾದಿಗಳು ॥ (93)

ಮುನಿಪತಿ ಮೌನದಿಂ ಕೈಯೆತ್ತಿ ಕೊಳದಿರೆ । ಮನದೊಳುತ್ಸಹವನು ಬಿಟ್ಟು ॥
ನೆನೆದರೆದೆಯೊಳೆಮ್ಮೊಳು ಕೃಪೆಯುಳ್ಳೊಡೆ । ಇನಿತು ಬೇಸರಪುಟ್ಟಿಪನೆ ॥ (94)

ತನುತಾರಿತು ಕ್ಷುದೆ ತೃಷೆಯಿಂದ ಲೆಮ್ಮಯ । ಮನಮುಗ್ಗಿತನ್ನಪಾನಗಳ ॥
ಇನಿತು ದಿವಸ ಬಿಟ್ಟೆ ವಿನ್ನುಳಿಯದು ಜೀವ । ತನುವಿಡಿದೆಂತು ಜೀವಿಪೆವು ॥ (95)

ಖಿಂಮುಂಡು ಬಹುದು ನಿಲ್ವಡೆ ನಿಲಬಹುದಿದ । ರಿಂದಪ್ಪ ಫಲವಿನ್ನೇನು ॥
ಎಂದನಿಬರು ತಮ್ಮೊಳು ತಾವು ಯೋಚಿಸಿಂ । ತೆಂದು ತಮ್ಮೊಳಗಾಡಿದರು ॥ (96)

ಇದುರಾಜವಿದ್ಯೆಯೊಳಾವವಿದ್ಯೆಯೊ ಷಡ್ಗು । ಣದೊಳಗಾವ ಗುಣವೊ ಕಾಡೊಳಗೆ ॥
ಪುದಿದಿರ್ಪುದಾವ ನೀತಿಯೊ ರಾಜನೀತಿಯೊ । ಇದರಂದ ವೆಮಗೆ ತಿಳಿಯದು ॥ (97)

ಬಂದರೆ ಬಂದೆವು ಕುಳಿತರೆ ಕುಳಿತೆವು । ನಿಂದರೆ ನಿಂದೆವು ಸ್ವಾಮಿ ॥
ಎಂಬ ಭಕ್ತಿಯೊಳನ್ನು ನಾವೀತೆರದಿಂ । ನಿಂದು ಜೀವಿಸಲಾರೆ ವೆಂದು ॥ (98)

ಬಿಟ್ಟರ ಬಹುದು ರಾಜ್ಯಾದಿ ವೈಭವಗಳ । ಬಿಟ್ಟರ ಬಹುದು ಪೆಂಡಿರನು ॥
ಬಿಟ್ಟರಲಾರೆವು ನಾವನ್ನ ಪಾನವ । ಕೆಟ್ಟೆವಲ್ಲಾ ಯೆಂದರವರು ॥ (99)

ಮಗನಿಗೆ ಸರಿಯಾಗಿ ನಮ್ಮನು ಸಲಹಿದ । ಬಗೆಬಗೆಯೊಳಗೀ ಸ್ವಾಮಿ ॥
ಪಗೆಯಿಲ್ಲದೆ ಕೊಂದನೀಗ ಲೆಂದವರೆಲ್ಲ । ಬಗೆಬಗೆಯೊಳು ಚಿಂತಿಸಿದರು ॥ (100)

ಈ ಸ್ವಾಮಿಯು ಬಿಟ್ಟು ಪೋದರೆ ಭರತೇಶ । ಲೇಸುದೋರನು ನಮಗೆಂದು ॥
ವ್ಯಾಸವ ಬಿಡಬಿಲ್ಲಿ ಕಂದ ಮೂಲಗಳನು । ಗ್ರಾಸವ ಕೊಂಬ ನಾವೆನುತ ॥ (101)

ಬೆಂಗಡೆಯೊಳು ನಿಂದು ಕೈಸನ್ನೆ ದೋರಿದ । ಮುಂಗಡೆಯೊಳು ನಿಂದವರಿಗೆ ॥
ಕಂಗಳ ಸನ್ನೆದೋರಿದರು ಕೆಲಂಬರು ಭ್ರೂ । ಭಂಗದಿಂದರಿಪಿದರ್ಕೆಲರು ॥ (102)

ಕಂಡರೆ ಕರೆವನೊ ಯೆಂದು ಮರನ ಮರೆ । ಗೊಂಡು ನಿಂದರು ಕೆಲಬರು ॥
ಹಿಂಡನಗಲಿ ಯೋರೊರ್ವರೆ ಪೋದರು । ಮಂಡೆಯುಬ್ಬಾಗಿ ನುಸುಳುತ ॥ (103)

ಓಡಿಕಲು ತಿಳಿನೀರು ಪಣ್ಗಳಗೆ . . . . . . . . . ತೆಗಳು ॥
ಬೇಡಿದೊಡೀ ರೂಪಿನೊಳು ನಾವು ಕೊಡೆವೆಂ । ದಾಡಿಸ್ತಂಭಿಸಿದರು ಕರವ ॥ (104)

ಈ ರೂಪೆಂಬುದು ಭುವನಾರಾಧ್ಯಮು । ತ್ರೀ ರೂಪಿನೊಳಗಿನಿತುಂಟೆ ॥
ಧಾರಿಣಿ . . . . . . . . . ಳು । ಬಾರಿಸಿ ಜಡಿದು ನುಡಿಗಳು ॥ (105)

ಈಗಳಾ ವೇಷವ ಬಿಟ್ಟು ವಲ್ಕಲವಸ್ತ್ರ । ರಾಗಿ ಕೆಲರು ಭಸ್ಮಗಳನು ॥
ರಾಗದಿಂದನುಲೇಪನ ಗೆಯ್ದು ಜಟಾಧರ . . . . . . . . ॥ (106)

ಏಕದಂಡಿಗಳು ತ್ರಿದಂಡಿಗಳಾದಿಯು । ನೇಕ ವೇಷಗಳ ಕೈಕೊಂಡು ॥
ಬೇಕಾದ ಫಲಪುಷ್ಪ ಕಂದ ಮೂಲಾದಿಯು । ಶಾಕಭಿಕ್ಷುಗರಾದರವರು ॥ (107)

ವನತರು ಕುಸುಮ ಮಾಲಾದಿಗಳಿಂದಾದಿ । ಜಿನಪನ ಪದಪದ್ಮಗಳನು ॥
ಅನುದಿನ ಪೂಜಿಸುತಿರೆ ಭರತೇಶನ । ತನುಜ ಮರೀಚಿಯೆಂಬವನು ॥ (108)

ತಾನು ತಾಪಸನಾಗಿ ತಪಸಿದ್ಧಾಂತವ । ನಾನಾ ತೆರದಿಂದ ಪೇಳ ॥
ಏನೆಂಬೆ ಮಿಥ್ಯಾತ್ವವ ವೃದ್ಧಿಯು ಮಾಡಿ ಸು । ಜ್ಞಾನ ವಿಮುಖರ ಮಾಡಿದನು ॥ (109)

ಕಪಿಲ ಸಿದ್ಧಾಂತವ ಯೋಗಶಾಸ್ತ್ರಂಗಳ । ನಪರಿಮಿತವ ಮಾಡಿ ಬಳಿಕ ॥
ವಿಪರೀತ ವರ್ತನೆಯನು ತೋರಿಜನರನು । ಸುಪವಿತ್ರ ವಿಮುಖರಮಾಡಿ ॥ (110)

ಸುರಗಿರಿಯಂತ ಚಲಿತ ಕಲುಷಿತನು । ಶರಧಿಯಂತನಿಲನಂದದೊಳು ॥
ಹಿರಿದು ನಿಸ್ಸಂಗ ನಿರ್ಲೇಪ ನಂಬರದಂತೆ । ಪುರುಜನಪತಿ ನಿಂದನಿತ್ತ ॥ (111)

ತನುಕಾಂತಿ ವರ್ಧಿತು ದೀಪ್ತ ತಪೋಗ್ನಿಯಿಂ । ದಿನದಿನಕಾ ಜಿನಪತಿಯು ॥
ಕನಕದ ಕಾಂತಿಯಗ್ನಿಯು ಪುಟದಿಂ ವೃದ್ಧಿ । ಯನು ಪಡೆವಂತೆ ಲೋಕದೊಳು ॥ (112)

ಶಿರದೊಳು ಜಡೆಗಳು ನಿಖಿರ್ದುರ್ಘ ಜಿನಕಲ್ಪ । ತರುವಿನ ಬೀಳಲ್ಗಳಂತೆ ॥
ದುರಿತಾದ್ರೇಂಧನ ಸಂಯೋಗ ಧ್ಯಾನಾಗ್ನಿ । ಗಿರಲು ಪುಟ್ಟಿದ ಧೂಮದಂತೆ ॥ (113)

ತರುಕುಸುಮದ ರಜತನು ವಿಂದಿಳಿಸೂಸು । ತಿರಲಾದೇವನ ಧ್ಯಾನ ॥
ದುರವಣ್ಣೆಯಿಂದುದುರುವ ಕರ್ಮದಧೂಳಿ । ನಿರವನಾಂತೊಪ್ಪಿದುದಾಗ ॥ (114)

ಹುಲಿಗಳು ಹುಲ್ಲೆಯು ಮರಿಗೆ ಮೋಹದಿ ಕರಿ । ಕಳಭಕೆ ಕೇಸರಿಣಿಗಳು ॥
ಮೊಲೆಗೊಟ್ಟು ಸಲಹುವವೆನೆ ಶಾಂತರಸದೊಂ । ದಳಕೆಯಾ ದೇವನಿಗೆಂತೊ ॥ (115)

ಹರಿಣಿಸ್ತನ್ಯವನುಂಬವು ಹುಲಿಗಳ ಮರಿ । ಗಳು ವೈರವ ತಾವು ಬಿಟ್ಟು ॥
ಕರಿಣಿಯ ನುಂಬವು ಸಿಂಹನ ಮರಿಗಳಾ । ವನದೊಳಗುಂಬ ವೇಸಂಬೆ ॥ (116)

ಆ ಸಮಯದಿ ಕಚ್ಛರಾಜ ಮಹಾ ಕಚ್ಛ । ರಾಸುಕುಮಾರರೆಯ್ತಂದು ॥
ಭಾಸುರ . . . . . . . . . . . ಯುತರು ॥ (117)

ನಮಿ ವಿನಮಿಗಳು ಭೂತಳವ ನಾಲಿಂಗಿಸಿ । ನಮಿಸಿಯಾ ಪುರುಜಿನ ಪತಿಯ ॥
ಕರ ಕಮಲಗಳ ಮುಗಿದು ನಮಗೊಲಿದು . . . . . . . . . ॥ (118)

ನಮಗಿಂದ ವೆಗ್ಗಳವಾದ ನೆಂಟರು ಸ್ವಾಮಿ । ನಿಮಗಿನ್ನಾರು ಪೇಳೆನುತ ॥
ನಮತಾ ಭಾವದೊಳಿರ್ದ ಮುನಿಪನ ಚೆಲ್ವ । ವಿಮಲ ಸಂಯೋಗ ವಿಘ್ನಗಳ ॥ (119)

ಮಾಡುತಿರಲು ಧರಣೇಂದ್ರ ನವಧಿಯಿಂದ । ನೋಡಿತಿಳಿದು ಬಂದು ಕಂಡ ॥
ನೀಡಿದ ಹಸ್ತ ನಿಶ್ಚಲದೃಷ್ಟಿ ನಿಷ್ಕಂಪ । ಗೂಡಿ ಮಂದರದಂತೆಸೆವ ॥ (120)

ದೇವನ ದೇಹವನಾಗ ವಿಸ್ಮಯಬಟ್ಟು । ಭಾವಶುದ್ಧಿಯೊಳಾಜಿನನ ॥
ಮೂವಳಸಿಂ ಬಲಗೊಂಡು ಕಂಡು ವೀ । ರಾವತಾರದ ಪುರುಷರನು ॥ (121)

ಖೇಚಕ ಖಡ್ಗವ ಪಿಡಿದು ಭಕ್ತಿಯು ಮಾಳ್ಪ । ಬಾಲಕತನ ಚಂದವಾಯ್ತು ॥
ಲೂಟಿಯ ಮಾಡಿ ಸಂಧಾನ ಕೆಳಸುವ । ರಾಟದಂ ತಾಯ್ತು ನಿವ್ಯಾಜ ॥ (122)

ಯುಕ್ತಾ ಯುಕ್ತವ ನರಿಯದೆ ವಿಷಯದಿ । ರಕ್ತನಾದಮಲ ಯೋಗಿಯನು ॥
ಭಕ್ತಿಗೆ ಬೇಳ್ಪುದು ಹಸನಾಯ್ತು ವಿಷಯಾ । ಸಕ್ತರಿಗುಂಟೆ ವಿವೇಕ ॥ (123)

ಭೋಗ ಕಾಂಕ್ಷೆಯ ಬಿಟ್ಟಯೋಗೀಶ ನೊಳುನೀವು । ಭೋಗಕೆ ಬೇಳ್ಪವಿಚಾರ ॥
ಆಗಸದೊಳು . . . . . . . . , । ತಾಗಿ ತೋರುತಲಿದೆ ನಮಗೆ ॥ (124)

ನಿರಪೇಕ್ಷ ನಾಬೇಡಿ ಮರುಳಾಗದೆ ನೀವು । ಭರತೇಶ್ವರನ ನೋಲೈಸಿ ॥
ಹಿರಿದಾದನಿಂದಭಿಮತವನು ಪಡೆವ ನೀ । ಪಿರ . . . . . . ॥ (125)

ಅಂತರಂಗದೊಳು ಕೋಪಾವೇಶರಾಗಿತಾ । ವಿಂತು ನುಡಿದರವನೊಡನೆ ॥
ಅಂತರ ವರಿಯದಿಂತೆಂದು ನುಡಿದ ಮುದಿ । ಭ್ರಾಂತರಿಗುಂಟೆ ವಿವೇಕ ॥ (126)

. . . . . . . . . . . । ಗಳಪುವದೊಳ್ಳಿ ತಂತಾಯ್ತು ॥
ಬಳಲ್ದಿರಿ ನೀವು ಮಾರ್ಗದಿ ಪೋಗಿ ಯೆಂದಲ್ಲಿ । ನುಡಿದರವರು ಅವನೊಡನೆ ॥ (127)

ಕೊಡುವವ ದೇವ ಕೊಂಬವ . . . . . . . . ॥
. . . . . ಕೇನು ಕಾರಣವಿಂತುನಿಮಗೆನ । ವ್ಯೊಡವೆಯೊಳಗೆ ಪಾಲುಂಟೆ ॥ (128)

ಸುರತರುವನು ಬಿಟ್ಟು ಕಾಡೊಳು ಭೂರದ । ಮರನನಾರಲು . . . . ॥
. . . . . . . . . . । . . . . ನಮ್ಮ ಮಹಿಮೆಗೆ ಸಾಕೆ ॥ (129)

ಚಾತಕ ಮುಂಗಾರ ಹನಿಯನು ಬಿಟ್ಟು । ಭೂತಳದೊಳು ಕೆರೆತೊರೆಯ ॥
ಪ್ರೀತಿಯಿಂ ಜಲವ . . . , । . . . . . . ॥ (130)

ಎಂದಾಡಿದವರ ಮಹತ್ವ ಭಕ್ತಿಗೆ ಮೆಚ್ಚಿ । ಮಂದಹಾಸದಿ ನಿಜರೂಪ ॥
ಅಂದು ತೋರಿ ಮಣಿಮಕುಟ ಕುಂಡಲಹಾರ । ದಿಂ . . . . . (131)

. . . . . . ಯ ಕಿಂಕರ ಧರಣೇಂದ್ರನೆಂ । ಬರುಯೆನ್ನ ಪೆಸರನು ನಿಮಗೆ ॥
ಧರೆಯ ಮಿಂಗಡಿಸಿ ಮುನ್ನವೆ ಪೇಳ್ದನು ಸ್ವಾಮಿ । ನಿರವಿಸಿದಂತಿಗೆ . . ॥ (132)

. . . . . . . . . . . । ಲಿನ್ನೊಮ್ಮೆ ಜಿನನ ನಿರೂಪ ॥
ಮುನ್ನಿನಂತದೊಳಾದಲ್ಲದೆ ಬರೆವೆನೆ । ಪನ್ನಗ ಪತಿವಿಕ್ರಿಯೆಯೊಳು ॥ (133)

ಬೆಸಸಿದಂದದಿ . . . . । . . . . . . ಳಿಟ್ಟು ॥
ಒಸೆದಾಕ್ಷಣದೊಳ್ ವಿಜಯಾರ್ಧಗಿರಿಯನೆ । ಯ್ದಿಸಿದನು ಧರಣೇಂದ್ರನಾಗ ॥ (134)

ಪುರು ಪರಮೇಶನ ಕೀರ್ತಿಯ . . . . . . . . . ॥
ಶರಧಿಯ ಫೇನದ ರಾಶಿಯೋ ಎಂಬಂತೆ । ಗಿರಿ ಯೊಪ್ಪುತಿಹುದು ಚೆಲ್ವಿಂದ ॥ (135)

ಉನ್ನತವಾದರೇನಾ ಹಿಮಗಿರಿ ಬಂದು ॥ ತನ್ನ . . . . . . ॥
. . . . . . . ಳ್ಪದೆಂದ । ರುನ್ನತಿಕೆಯನು ಜರೆವುದು ॥ (136)

ಇಪ್ಪತ್ತೈದು ಮಹಾಯೋಜನ ದುಚ್ಚ । ಯಿಪ್ಪದು ತದ್ವಿಗುಣದೊಳು ॥
ದ . . . . . . . . . . . ತಿಹುದು ವಿಜಯಾರ್ಧ ॥ (137)

ಅದರುತ್ತರ ದಕ್ಷಿಣ ಶ್ರೇಣಿಯೊಳೊಪ್ಪುವ । ನೂರಹತ್ತು ಪಟ್ಟಣಗಳೊಪ್ಪಿಹವು ॥
ಅದರಾ . . . . . . . . . . . ರಾಜೇಂದ್ರ ॥ (138)

ಪುರುದೇವನ ಶಾಸನವಿದು ಯಿವರೀ । ವರು ಪೇಳ್ದಂತೆ ನೀವೆಲ್ಲ ॥
ಇರಬೇಕೆಂದು ಕಪ್ಪವ ಕೊಡಿಸಿದ ವಿದ್ಯಾ । ಧರರ ಕೈಯಿಂ ನಾಗರಾಜ। (139)

ಅಂತುಯಿರಿಸಿ ವಿದ್ಯಾಧರ ಪದವಿಯೊಳೋ । ರಂತೆ ತೆರಳಲು ತನ್ನ ಪುರಕೆ ॥
ಅಂತರಿಸ . . . . . . । . . . . ಳು ನಿಂದಿರ್ದ ॥ (140)

ಇದು ಬೇರೊಂದು ನಿಶ್ಚಲ ಹೇಮಾದ್ರಿಯೊ । ಇದು ಬೇರೊಂದು ಗಂಭೀರ ॥
ಸದ . . . . . . . . । . . ಪೂಜಿಸುವರು ॥ (141)

ಇದು ಶ್ರುತ ಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯ । ಪದದೊಳೇಳನೆಯ ಸುಸಂಧಿ ॥ (142)

(ಏಳನೆಯ ಸಂಧಿ ಸಮಾಪ್ತಂ)

## ಎಂಟನೆಯ ಸಂಧಿ-

[ವರರೂಪಜಿತಮಾ] ರ ಸುಜ್ಞಾನ ಸಾಗರ । ನಿರುಪಮ ಗುಣಮಣಿ ಹಾರ ॥
ಕರುಣಾಕರ ಗುಮ್ಮಟ ಸ್ವಾಮಿ ಮತಿದೋರು । ಪರಮ ನಿ [ರಂಜನ ಸಿದ್ಧ] ॥ (1)

. . . . . . . ಯೋಗದೊಳಿದ್ದು । ಪುರುಜಿನಪತಿ ಪೂರ್ಣೈಯನು ॥
ಪರಿಪೂರ್ಣವ ಮಾಡಿ ಚರ್ಯಾಮಾರ್ಗವ । ಧರೆಯೊಳು ತೋರಿಸಲೆಂದು ॥ (2)

. . . . . . . . . ಣಾ ಬೇ ! ಕೆಂದು ಚರಿಸುವಂದದೊಳು ॥
ಮಂದಗತಿಯೊಳೀಯಗೋಚರ ಮಾರ್ಗದಿಂ । ದಂದೈತಂದನಾ ಮುನಿಪ ॥ (3)

. . . . . . . . . . । ಶಾ ಮಾರ್ಗದಿಂದೈತರಲು ॥
ಆ ಮಹಿಮನ ಕಂಡು ವಸ್ತ್ರಭೂಷಣಗಳ । ಪ್ರೇಮದಿಂದೀವರು ಕೆಲರು ॥ (4)

. . . . . . . . . . . । . . ಜಲವನು ತುಂಬಿ ತಂದು ॥
ಉಂಡು ಚಿತ್ತೈಸಬೇಕೆಂದು ಕೊಡುವರೊಳ್ಪು । ಗಂಡರಿಯದ ಮುಗ್ಧ ಜನರು ॥ (5)

ಒಡೆಯ ಚಿತ್ತೈಸಿದ ನಮ್ಮೂರಿಗಿನ್ನೇನ । ಕೊಡುವ ಕಾಣಿಕೆಯೇನೆಂದೆನುತ ॥
ಪಿಡಿದರು ಕೆಲಬರು ತಂದಾನೆ ಕುದುರೆಯ । ಜಡಮತಿಗುಂಟೆ ವಿವೇಕ ॥ (6)

ಮಿಂದುಂಡು ಬಿಜಯಂಗೈಯಬಹುದು ಸ್ವಾಮಿ । ಎಂದು ಬಳಗವೆಲ್ಲ ಬಂದು ॥
ನಿಂದಿರೆನಲು ನಿಲ್ಲದಾಜಿನ ನಲ್ಲಿಂದ । ಮುಂದಕೆ ಚಿತ್ತೈಸಿದನು ॥ (7)

ಇಂತು ದೇಶಂಗಳನಾರುದಿಂಗಳು ಪರಿ । ಯಂತ ವಿಹರಿಸಿ ಬಳಿಕ ॥
ಅಂತರಿಸದೆ ಕುರುಜಾಂಗಣ ವಿಷಯದ । ದಂತಿಪುರಕೆ ಚಿತ್ತೈಸಿದನು ॥ (8)

ಕುರುರಾಜನಾ ಹಸ್ತಿನಾಪುರ ಪತಿಮಂ । ದರಧೀರ ಸೋಮಪ್ರಭಗೆ ॥
ಪುರುಜಿನಪತಿ ವಜ್ರ ಜಂಘನಾದಂದಿನ । ವರಮತಿ ಶ್ರೀಮತಿಕರಿಯ ॥ (9)

ಹಿಂದಾರು ಭವದೊಳಾ ಸ್ವಾಮಿಯೊಡನೆ ತಾನು । ಬಂದು ಶ್ರೇಯೋನೃಪನೆಂಬ ॥
ಅಂದಾತಗನುಜಾತನಾಗಿ ಪುಟ್ಟಿರಲವ ॥ ರಂದಿನ ಬೆಳಗು ಜಾವದೊಳು ॥ (10)

ಕನಸಿನೊಳಗೆ ಕಲ್ಪತರು ಪರಿವೃತನಾದ । ಕನಕಾಚಲವೆ ಬಂದು ತನ್ನ ॥
ಮನೆಯ ರಾಜಾಂಗಣದೊಳು ನಿಂದುದ ಕಂಡ । ಕನಸಿನ ಫಲವ ನಗ್ರಜಗೆ ॥ (11)

ಮಂದರಗಿರಿನಿಭ ಪ್ರಾರ್ಥಿತಾರ್ಥವನೀವ । ನಿಂದಾದಿ ಬ್ರಹ್ಮನು ನಮ್ಮ ॥
ಮಂದಿರಕಾಗಿ ಚಿತ್ತೈಸುವನೆಂದಾ । ನಂದದಿಂ ಪೇಳ್ತಿರಲಾಗ ॥ (12)

ಅತಿದ್ರುತ ಮತಿವಿಲಂಬಿತಗತಿಯಿಲ್ಲದೆ । ಕ್ಷಿತಿಯನು ನೋಗನಂತರದೊಳು ॥
ಪ್ರತಿಪಾದ ವಿನ್ಯಾಸದೊಳು ನೋಡುತಯತಿ । ಪತಿ ಚಂದ್ರಗತಿಯಿಂದೈದಿದನು ॥ (13)

ಉತ್ತಮ ಮಧ್ಯ ಜಘನ್ಯ ಗೃಹಂಗಳ । ವೊತ್ತಿದ ಮಧ್ಯ ವೀಥಿಯೊಳು ॥
ಚಿತ್ತದೊಳಗೆ ಸಮಭಾವದಿಂದಾ ಮುನಿ । ಪೋತ್ತಮ ನೈತರುತಿರ್ದ ॥ (14)

ಪುರದೊಳಗಿಂತು ಬರುತ ಸೋಮಪ್ರಭ । ನರಮನೆಗಭಿಮುಖವಾಗಿ ॥
ಬರುತಿರೆ ಸಿದ್ಧಾರ್ಥನೆಂಬ ಪ್ರತೀಹಾರ । ಪರಿತಂದಾವೃತ್ತಕವನು ॥ (15)

ಸೋಮಪ್ರಭ ಶ್ರೇಯೋನೃಪರಿಗೆ ಪೇಳ । ಲಾಮಹಿಮರು ಭಕ್ತಿಯಿಂದ ॥
ಭೂಮೀಶರೊಡಗೂಡಿ ಅರ್ಘ್ಯಪಾದ್ಯವನಾಂತು । ದಾಮದಿಂ ಪೊರಮಟ್ಟರಾಗ ॥ (16)

ಸ್ವಾಮಿ ಜಾತರೂಪನು ಕಂಡಾಗ ಶ್ರೀ । ಯೋನ್ನೃಪಗೆ ಭವಸ್ಮೃತಿಯಿಂ ॥
ಶ್ರೀಮತಿ ವಜ್ರಜಂಘರು ತಾವಾದಂತಾವು । ನಿಯು ಚರಣಯುಗಲ ದರುಶನದಿ ॥ (17)

ಅನ್ನದಾನವ ಕೊಟ್ಟ ವಿಧಿಯನು ತಾನೆನ । ದುನ್ನತ ಭಕ್ತಿಯೊಳಾಗ ॥
ಮನ್ನಿಸಿ ನಿಲಿಸಲು ನಿಂದನು ವೃಷಭೇಶ । ಸೊನ್ನೆವೆಟ್ಟದ ಮಾಳ್ಕೆಯಿಂದ ॥ (18)

ನವವಿಧ ಪುಣ್ಯ ಸಪ್ತ ವಿಧದ ಭಕ್ತಿಗಳಂ । ದವನಿಪರು ಜನಪತಿಗೆ ॥
ಸುಪವೇಕಿಗಳು ಸುಧೆಗೆಣೆಯಾಗ ಸೊಗ । ಸುವ್ರದಲೇಕ್ಷುರಸವನು ತಂದು ॥ (19)

ಉತ್ತಾನೀಕೃತ ಪಾಣಿಪಾತ್ರದೊಳು ತಾ । ವೆತ್ತಲು ದೇವದುಂದುಭಿಯು ॥
ಮೊತ್ತವೊಳಗಿತಹೋದಾನಿಯು ಹೋಪಾತ್ರ । ಮಿತ್ತಲಹೋದಾನ ದೇಯು ॥ (20)

ಎಂದಾಗಸದೊಳು ದಿವ್ಯಧ್ವನಿ ಪುಟ್ಟ । ಲಂದಾಮದು ವಸುಧಾರೆ ॥
ಮಂದಾರದ ಪೂವಿನ ಮಳೆಗರೆದುದು । ಮಂದಮಾರುತ ಬೀಸಿತಾಗ ॥ (21)

ಕುರುವಂಶವೆಲ್ಲ ಪವಿತ್ರವಾದುದು ಸಂ । ದಿರವೆಲ್ಲ ಪ್ರಾಶ್ಯತಾನಾಯ್ತು ॥
ಇರದೆ ಕೃತಾರ್ಥರಾದೆವುಯೆಂದಾ ಮುನಿ । ವರನ ಚರಣಕೆರಗಿದರು ॥ (22)

ಅಕ್ಷಯಂ ದಾನ ಫಲವು ನಿಮಗಸ್ತೆಂ । ದಾಕ್ಷಿತಿಪರನು ಪರಸಲು ।
ಅಕ್ಷಯ ತದಿಗೆ ಯೆಂದಂದಿಂದಾಮದು । ಯಿಕ್ಷಿತಿಯೊಳು ಪುಣ್ಯದಿವಸ ॥ (23)

ಅರಮನೆಯಿಂ ಕೆಲದಂತರ ತ್ರಿಭುವನ ॥ ಗುರುವಿನೊಡನೆ ಬಂದು ತಾವು ॥
ತಿರುಗಿ ಬಂದೆವೆಯಿಕ್ಕದೆ ನೋಡಿದರು ಪ್ರೀತಿ ವೆರಸಿ ವನವ ಪೊಗುವನಕ ॥ (24)

ತಿರುಗಿ ಬಂದಾರಾಜಾಂಗಣದೊಳು ತುಂಬಿ । ಸುರಿದಿರ್ದ ರತ್ನವನೆಲ್ಲ ॥
ಪುರದೊಳು ಘೋಷಣೆಗೆಯ್ದು ಕೊಟ್ಟರು ಸುರ । ತರುಗಳಂದದಿ ಯಾಚಕರಿಗೆ ॥ (25)

ಭರತೇಶ್ವರನಾಕಂಪನ ಮುಂತಾದ । ದೊರೆಗಳೆಲ್ಲರು ಕೇಳಬಳಿಕ ॥
ಗುರುವಿನ ಹೃದಯುವ ನಿವತಿಳದಂದವ । ಪರಿಕೆಸಬೇಕೆಂದು ಬಂದು ॥ (26)

ಸುರನರಲೋಕಕೆ ವಿಸ್ಮಯಕರವಾದ । ಸುರುಚಿರದಾನದ ಮಹಿಮೆ ॥
ಧರೆಯೊಳು ನಿಮ್ಮೊಳೆ ದೊರೆಕೊಂಡಿತು ಪುಣ್ಯ । ಪುರುಷರಿನ್ನಾರು ನಿನ್ನಂತೆ ॥ (27)

ಎಂದು ಪೂಜಿಸಿ ಗುರುವಿನ ಹೃದಯುವ ತಿಳ ದಂದವ ಪೇಳಬೇಕೆಂದು ॥
ಅಂದು ಶ್ರೇಯೋನ್ನೃಪ ಪೇಳ್ದನವರಿಗೆಲ್ಲ । ಹಿಂದಾದ ವೃತ್ತಾಂತವನು ॥ (28)

ದಾನದ ಭೇದ ಪಾತ್ರಂಗಳ ಭೇದವ । ದಾನಿಯ ಗುಣಗಳೆಲ್ಲವನು ॥
ದಾನದ ಫಲಗಳ ಪೇಳ್ದನವರಿಗ ತ್ಯಾನಂದವಪ್ಪಂದದೊಳು ॥ (29)

ನಿನ್ನಿಂದೀಯುಗದಾದಿಯೊಳಗೆ ದಾನ । ಮನ್ನತಿಕೆಯು ಧರೆಯೊಳಗೆ ॥
ಮುನ್ನಲಾದುದರಿಂದ ದಾನತೀರ್ಥಕೆ ಕರ್ತ । ಸನ್ನುತಗುಣನಿಧಿ ನೀನೆ ॥ (30)

ಎಂದು ನುತಿಸಿ ಕೊಂಡಾಡಿ ದೊರೆಗಳೆಲ್ಲ । ರಂದು ಪೋಗಲು ತಮ್ಮ ಪುರಕೆ ॥
ಬಂದಿತ್ತ ವನಗಿರಿ ಗುಹೆಯೊಳು ಪುರುಜಿನ । ನಿಂದು ಯೋಗದೊಳಿರುತಿರ್ದ ॥ (31)

ಕಳೆದು ಕೆಲವು ಸಂವತ್ಸರಗಳ ನಿಂತು । ಬಳಿಕ ಪೂರಿಮತಾಳವೆಂಬ ॥
ಪೊಳಲ ಬಾಹ್ಯೋದ್ಯಾನವನಮಧ್ಯ ತರುವಿನ । ಕೆಳಗೆ ನಿರ್ಗ್ರಂಥಕವಾದ ॥ (32)

ಶಿಲೆಯ ಪಟ್ಟಕದೊಳು ಪಲ್ಯಂಕಾಸನವನು । ಬಲಿದು ಪೂರ್ವಾಭಿಮುಖದೊಳು ॥
ಕುಳಿತು ಮನವ ನೊಸಲೇರಿಸಿ ಕಣ್ಗಳ । ನೆಳವಡಿಸಿದ ನಾಸಾಗ್ರದೊಳು ॥ (33)

ಕರಪಲ್ಲವಂಗಳ ಜೋಡಿಸಿಯಂಕದೊ । ಳಿರಲ್ದಿಟ್ಟದಂತ ಪಂಕ್ತಿಗಳು ॥
ಸಚಿತ್ರದಿಂ ತಮ್ಮೊಳಗೊಂದಿರೆಯೋಗದೊ । ಳಿರುತಿರ್ದನಾಯೋಗಿರಾಯ ॥ (34)

ಪರಮ ಪದನೆ ಮನದೊಟ್ಟು ಸಿದ್ಧರ । ವರಗುಣಗಳನು ಭಾವಿಸುತ ॥
ತರವಾಯದಿಂ ದ್ವಾದಶಾನುಪ್ರೇಕ್ಷೆಗಳನು । ಸ್ಮರಿಸಿದನಾ ಜಿನರಾಜ ॥ (35)

ಬಳಿಕಾಜ್ಞಾವಿಚಯಾದಿ ಧರ್ಮಧ್ಯಾನ । ದೊಳಗಿದ್ದು ಲೇಶ್ಯಾಶುದ್ಧಿಯನು ॥
ತಳೆದನಂತಾನುಬಂಧಿಯ ವಿಸಂಯೋಜಿಸಿ । ಕಳೆದನು ಕರತ್ರಯದಿಂ ॥ (36)

ಮತ್ತೆ ವಿಶ್ರಮಿಸಿಯಂತರ್ಮುಹೂರ್ತಂ ಬರ । ತತ್ರಿಕರಣ ಪರಿಣತಿಯಿಂ ॥
ದೊತ್ತರಿಸಿದ ದರ್ಶನ ಮೋಹನೀಯದ । ಮೊತ್ತವ ಕ್ಷಾಯಿಕ ದೃಷ್ಟಿ ॥ (37)

ದೇವ ಪ್ರಮತ್ತಾ ಪ್ರಮತ್ತ ಸಹಸ್ರ ಪ । ರಾವರ್ತನೆಗಳ ಮಾಡಿದನು ॥
ಭಾವದೊಳಂತರ್ಮುಹೂರ್ತಕಾಲದಿ ಮುಂದೆ । ಕೈವಲ್ಯನಿಃ ಶ್ರೇಣಿಯೆನಿಪ ॥ (38)

ಕ್ಷಪಕ ಶ್ರೇಣಿಗೆ ಯೋಗ್ಯಮಪ್ಪ ತ್ರಿಕರಣದೊಳ್ । ಕ್ಷಪಕಾಪೂರ್ವಕರಣವನು ॥
ಸುಪವಿತ್ರವಾದ ಶುಕ್ಲಧ್ಯಾನದಿ (ದಂ) । ದು ಪರಿತನದ ಕರ್ಮಗಳೊಳು ॥ (39)
ಆಯುರ್ವರ್ಜಿತಶೇಷಕರ್ಮಗಳ ಗು । ಣಾಯದಿಸ್ಥಿತ್ಯನುಭಾಗ ॥
ಆಯತಕಾಂಡಕಘಾತ ನಿರ್ಜರೆಗಳ । ನಾಯತಿ ಮಾಡುತಲಿರ್ದ ॥ (40)

ಪ್ರತಿಸಮಯದೊಳಗನಂತಗುಣಿತ ವಿಶು । ದ್ಧ್ಯತಿಶಯದಿ ನಿವೃತ್ತಿ ॥
ಯುತ ಕರಣ ಕ್ಷಪಕಯುತನಾಗಿ ಯಾ । ಯತಿಪತಿ ನಾಮ ಕರ್ಮದೊಳು ॥ (41)

ಪದಿಮೂರನು ನಿದ್ರಾಪಂಚಕದೊಳು । ಮೊದಲ ಮೂರನು ಕೆಡಿಸಿದನು ॥
ತದನಂತರ ಮಧ್ಯಮಾಷ್ಟ ಕಾಷಾಯವ ಸದಮಲ ಯೋಗಿ ಕಡಿಸಿದ ॥ (42)

ನವನೋಕಷಾಯ ಚತುಃಸಂಜ್ವಲನಗಳ । ಗವನಂತರ ವಿಧಾನವನು ॥
ಸುವಿವೇಕದಿಂ ಮಾಡಿಕ್ಕಿ ಬಸ್ತ್ರೀವೇದವ । ತವಿಸಿ ಪುಂವೇದವ ಬಳಿಕ ॥ (43)

ನೋಕಷಯಂಗಳೊಳಾರನು ಘಾತಿಸಿ । ಜೋಕೆಯೊಳ್ಪುಂ ವೇದಾದಿಗಳ ॥
ತಾ ಕೆಡಿಸಿದ ಸಮಯೋನದ್ವ್ಯಾವಲಿಕಾಲ । ಸ್ತೋಕದಿ ನವಕಬಂಧವನು ॥ (44)

ಆ ಸಂಜ್ವಲನ ಕಾಷಾಯಾನು ಭಾಗವ । ನಾಸಮಯದೊಳಶ್ವ ಕರ್ಣ ॥
ಲೇಸೆನಿಪಾವಿಧಿಯಿಂದ ಘಾತಿಸಿ ಮ । ತ್ತಾಸುರನರಪತಿ ವಂದ್ಯ ॥ (45)

ಬಾಧರಾಕೃಷ್ಟಿಗಳನು ಮಾಡಿದನು ಮತ್ತೆ । ಭೇದಿಸಿಯದರ ಶಕ್ತಿಯನು ॥
ಆದಿಜಿನೇಶನ ಪರಿಣಾಮವೃದ್ಧಿಯ । ಭೇದವ ಬಣ್ಣಿಪರಾರು ॥ (46)

ದ್ವಾದಶ ಸಂಗ್ರಹಾಕೃಷ್ಟಿಯ ಮಾಡಿದ । ಬಾಧರಸಂಜ್ವಲನಗಳ ॥
ಭೇದಿಸಿ ಶಕ್ತಿಯನಂತ ಗುಣದಿ ಹೀನ । ವಾದುದಪೂರ್ವಸ್ಪರ್ಧಕದ ॥ (47)

ಬಾಧರಾಕೃಷ್ಟಿಗತಾನು ಭಾಗವ ತಾನು । ಭೇದಿಸಿಯನು ಭವಿಸುತ್ತ ॥
ಬಾಧರಸಾಂಪರಾಯಿಕನಾಗಿ ಕ್ರೋಧಮಂ । ತಾದ ಸಂಜ್ವಲನಂಗಳೊಳಗೆ ॥ (48)

ಮೂರುತೆರದ ಕೃಷ್ಟಿಗಳನು ಕೆಡಿಸಿ ಮತ್ತೆ । ತೋರುವ ಲೋಭದ ಮೊದಲ ॥
ತೀರಿಸಿ ಕೃಷ್ಟಿಗತಾನು ಭಾಗವ ಮತ್ತೆ । ಸಾರವಿಶುದ್ಧಿಗಳಿಂದ ॥ (49)

ಅವರ ದ್ವಿತೀಯ ಕೃಷ್ಟಿಗತಾನು ಭಾಗವ । ಮೊದಲಬಾಧರ ಶಕ್ತಿಯಿಂದ ॥
ಇದಕೆಯನಂತ ಗುಣದಿ ಹೀನವ ಮಾಡಿ । ಯೊದಗಿಸಿ ಸೂಕ್ಷ್ಮ ಕೃಷ್ಟಿಯನು ॥ (50)

ಬಾಧರ ಲೋಭ ಸಂಜ್ವಲನವ ಕೆಡಿಸಿ ಮ । ತ್ತಾದನು ಸೂಕ್ಷ್ಮಕಷಾಯ ॥
ಭೇದಿಸಿಯದನು ಕೆಡಿಸಿ ಮೋಹನೀಯದ । ಭೇದವೆಲ್ಲವನು ಕೆಡಿಸಿದ ॥ (51)

ಕ್ಷೀಣ ರಾಗದ್ವೇಷ ಭಾವನಾದುದರಿಂದ ಕ್ಷೀಣ ಕಷಾಯನೆಂದವನ ॥
ಕ್ಷೋಣಿಯೊಳ್ಪೇಳ್ವರು ಚಾರಿತ್ರವಲ್ಲಿಯ । ಕ್ಷೂಣಯಥಾ ಖ್ಯಾತವಿಹುದು ॥ (52)

ಶ್ರೀ ವೀತರಾಗ ಚ್ಛದ್ಮಸ್ಥ ದ್ವಿತೀಯ ಶುಕ್ಲ । ಧ್ಯಾನಾದಿನಿದ್ರೆ ಪ್ರಚಲೆಯ ॥
ಓವದೆ ಕೆಡಿಸಿದ ದ್ವಿರಮ ಸಮಯದೊ । ಳಾಪಿಭ ಚರಮ ಸಮಯದಿ ॥ (53)

ಜ್ಞಾನಾವರಣೀಯ ದರ್ಶನಾವರಣೀಯ । ದಾನವಕವನು ಮುಂದಿರ್ದ ॥
ದಾನಾದಿ ಯಂತರಂಗವ ಪಂಚಕವನು । ತಾನೊಮ್ಮೆಯ ಕೆಡಿಸಿವನು ॥ (54)

ಘಾತಿಕರ್ಮಂಗಳು ಕೆಡಲು ಸಯೋಗಿ ಶ್ರೀ । ವೀತರಾಗನಿಗೆ ಪುಟ್ಟಿದವು ॥
ನೂತನ ಕೇವಲ ಜ್ಞಾನ ದರ್ಶನ ಸುಖನು । ನತಾನಂತ ವೀರ್ಯಗಳು ॥ (?) (55)

ವರ ಫಾಲ್ಗುಣ ಬಹುಳೇಕಾದಶಿಯೊಳು । ಖರಲುತ್ತರಾಷಾಢ ತಾಗೆ ॥
ನಿರುಪಮ ಕೇವಲ ಬೋಧವ ಪಡೆದನು । ಪುರು ಜನಪತಿ ಪುಣ್ಯಚರಿತ ॥ (56)

ಜಿನನೆಂಬ ಉದಯಾದ್ರಿಯೊಳು ಕೇವಲಜ್ಞಾನ । ದಿನಕರನುದಯವಾದಾಗ ॥
ಅನಿಮಿಷಪತಿ ಚಕ್ರವಾಕಕೆ ಭವ್ಯ । ಜನಕಮಲಕೆ ಮುದವಾಯ್ತು ॥ (57)

ಸುರಲೋಕದೊಳು ಘಂಟಾನಾದ ಜ್ಯೋತಿ । ಷ್ಕರೊಳು ಕಂಠೀರವನಾದ ॥
ಉರಗಲೋಕದೊಳು ಶಂಖಧ್ವನಿ ಪಟಹವ್ಯಂ । ತರಲೋಕದೊಳು ಮೊಳಗಿದುವು ॥ (58)

ಅವಧಿಯಿಂದರಿದು ದೇವೇಂದ್ರ ಸಮವಸರ । ಣವನಿರ್ಮಿಸೆಂದು ಧನದಗೆ ॥
ತ್ರವಕದಿಂದಪ್ಪಣೆಯನು ಕೊಡೆ ಬಂದಾಗ । ಳವನಿರ್ಮಿಸಿದ ರಚನೆಯೊಳು ॥ (59)

ಧರೆಯಿಂದೈದು ಸಾಸಿರದಂಡದಿಂ ಮೇಲೆ । ಪರಮೇಶ್ವರನೆಲಸಿರಲು ॥
ಹರಿನೀಲ ರತ್ನದ ಖಂಡಶಿಲೆಯೊಳು ಪ । ನ್ನೆರಡು ಯೋಜನಸಮವೃತ್ತ ॥ (60)

ಇಪ್ಪತ್ತು ಸಾವಿರ ಸೋಪಾನಗಳ ಪಂಕ್ತಿ । ತಪ್ಪದೊಂ [ದೊಂ]ದು ದೆಸೆಯೊಳು ॥
ಒಪ್ಪುತಿಹುದು ಸ್ವರ್ಗೇಕ್ಷಕಾರೋಹಣ । ಕೊಪ್ಪುವ ನಿಶ್ರೇಣಿಯಂತೆ ॥ (61)

ವಲಯಾಕೃತಿ ಯಿಂದಿಂದ್ರಚಾಪವೆ ಬಂದು । ಬಳಸಿದುದೆಂಬ ಮಾಳ್ಕೆಯೊಳು ॥
ವಿಲಸಿತ ಧೂಳಿಶಾಲವಿಹುದು ರತ್ನ । ಗಳ ಕಾಂತಿಯಿಂದೊಪ್ಪವಡೆದು ॥ (62)

ಮರಕತ ತೋರಣ ಜ್ಯೋತಿಷ್ಕ ದೌವಾರಿ । ಕರ ಪರಿವಾರದಿಂದೆಸೆವ ॥
ವರಕಾಂಚನ ಮಯ ಗೋಪುರದಭ್ಯಂ । ತರದ ವೀಥಿಯ ಮಧ್ಯದೊಳು ॥ (63)

ಮಾನಸ್ತಂಭಗಳು ನಾಲ್ಕುದೆಸೆಯೊಳು । ನಾನಾ ಶೋಭೆಯಾಂತಿಹವು ॥
ಏನೆಂಬೆ ನೋಡಿದಾಕ್ಷಣವೆ ಮಿಥ್ಯಾವಾದಿ । ಮಾನವ ಸ್ತಂಭಿಸುತಿಹವು ॥ (64)

ಅದರಂತರದೊಳ್ಮೈದ್ಮೆದು ಹರ್ಮ್ಯಂಗ । ಳವರ ಮಧ್ಯದೊಳಗೊಂದೊಂದು ॥
ನವರತ್ನಮಯಜಿನ ಗೇಹವೊಪ್ಪಿಹವವೆ । ವಿವರಿಸಲೆನಗಳವಲ್ಲ ॥ (65)

ಜಲಪಕ್ಷಿ ಜಲಚರ ಜಲಜೋತ್ಪಲಗಳಿಂ । ಜಲಕೇಳಿಗಳ ಮಾಳ್ಪಸುರರ ॥
ವಿಲಸಿತ ಮಿಥುನವಿಂದೊಪ್ಪುತಿಹುದು ಮುಂದೆ । ಬಳಸಿರ್ದಜಲಖಾತಿಕೆಯು ॥ (66)

ಅಲ್ಲಿಂದಮುಂದೆ ಹಿರಣ್ಮಯ ವೇದಿಕೆ । ಯಲ್ಲಿಹುವವರಿಂದೊಳಗೆ ॥
ಮಲ್ಲಿಗೆ ಜಾಜಿಯಶೋಕೆ ಮಾಕಂದಾದಿ । ವಲ್ಲಿಯುಪವನವೊಪ್ಪುತಿಹುದು ॥ (67)

ಅದರಿಂದೊಳಗೆ ಚಿನ್ನದ ಕೋಟೆಯಿಂಬಳ । ಸಿದವನ ಭೂಮಿಗಳಲ್ಲಿ ॥
ವಿದಿತಾಶೋಕ ಸಪ್ತಚ್ಛದ ಚಂಪಕ । ವಿದಳಿತ ಚೂತವನಗಳು ॥ (68)

ಆ ವನಮಧ್ಯದೊಳಗೆ ಚೈತ್ಯ ವೃಕ್ಷ ಶೋ । ಭಾವಹ ವಾಗಿರುತಿಹವು ॥
ಮೂವಳಸಿದ ಕೋಟೆ ಪೀಠತ್ರಯಾನ್ವಿತ । ದೇವಾರ್ಚನ ಬಿಂಬದಿಂದ ॥ (69)

ಅದರಿಂದ ಮುಂದೆ ಕನಕವೇದಿಕಾಭ್ಯಂತ । ರದೊಳು ರತ್ನ ಪಿ ರಾಗ್ರದೊಳು ॥
ಮುದಗಳ ವೃಷಭಾದಿಪ್ಪತ್ತು ತೆರದ ಧ್ವಜ ಪುದಿದ ಸ್ವರ್ಣದಸ್ತಂಭವಿಹುದು ॥ (70)

ನಾಕುನಾವಿರವ ಮುನ್ನೂರ ಮೇಲೆಪ್ಪತ್ತು । ನಾಕು ದಿಕ್ಕಿನ ಮಹಾಧ್ವಜವು ॥
ಏಕೈಕ ಧ್ವಜದೊಳು ನೂರೆಂಟು ಬಳಸಿದ ನೇಕ ಧ್ವಜಗಳೊಪ್ಪುತಿಹವು ॥ (71)

ಪತ್ತು ತೆರದ ವೃಕ್ಷದೊಡನೆ ದೇವೋತ್ತರ ಕು । ರುಕ್ಷೇತ್ರಕೆ ಸವ ತಾಬಂದು ॥
ಸುತ್ತಿದಂದದಿಕಲ್ಪ ವೃಕ್ಷವನೀಪೆಂಪು । ವೆತ್ತಿಹವದನೇನೆಂಬೆ ॥ (72)

ಚಾಮೀಕರ ವೇದಿಕಾಭ್ಯಂತರದೊಳಧಿ । ರಾಮ ಸಂಗೀತ ಹರ್ಮ್ಯಗಳ ॥
ಭೂಮಿ ಶೋಭಿಪುದು ನರಾಸುರಗಂಧ । ರ್ವಮರದಿಂದ ಸೊಬಗು ವೆತ್ತಿಹುದು ॥ (73)

ಆಗಸವಳುಕಿನ ಕೋಂಟೆಯುಲ್ಲಿಂದೊಳ । ಗಾಗಸವನು ಸೋಂಕುತಿಹುದು ॥
ರಾಗದಿಂದೆಡೆಯಾವ ದೇವ ಮಿಥುನವ । ನಾಗಲ್ಲಿ ಒರವಂತೊಪ್ಪಿಹುದು ॥ (74)

ಆಮಹಾಪ್ರಾಕಾರ ದೊಳಗೊಂದು ಯೋಜನ । ಶ್ರೀಮಂಟಪವೊಪ್ಪುತಿಹುದು ॥
ರಾಮಣೀಯಕವಾದ ದ್ವಾದಶ ಕೋಷ್ಠಂಗ । ಳಾವರಿಯೊಳು ಸುತ್ತಲಿಹವು ॥ (75)

ಮುನಿ ಮುಖ್ಯರು ಕಲ್ಪವಾಸಿನಿಯರು ನರ । ವನಿತಾರ್ಯಕ ಜನವೆರಸಿ ॥
ಅನುಪಮ ಜೋತಿಷ್ಕವ್ಯಂತರ ಭ । ವನಜವನುಕ್ರಮದಿಂ ॥ (76)

ಭವನ ವ್ಯಂತರರು ಜ್ಯೋತಿಷ್ಕರು । ದಿವಿಜರು ನರತಿರಿಯಂಚ ॥
ನಿವಹವಿಹುದು ದ್ವಾದಶ ಭವನಂಗಳೊ । ಳವನು ವರ್ಣಿಸುವರೆನ್ನಳವೆ ॥ (77)

ಆ ಮಂಟಪದ ಮಧ್ಯದೊಳು ವೈಡೂರ್ಯನು । ಹೇಮ ನಾನಾ ರತ್ನಮಯದ ॥
ರಾಮಣೀಯಕವಾದ ಮೂರು ಪೀಠದ ಮೇಲೆ । ಸ್ವಾಮಿಯ ಶ್ರೀಗಂಧ ಕುಟಿಯು (78)

ಐವತ್ತು ಶತದಂಡ ವಿಸ್ತಾರ ಯಾಯತಿಮ ದೊಳ್ನವ । ಶತದಂಡೋ ತ್ಸೇಧದಿಂದ ॥
ಅತಿಶಯ ನವರತ್ನಮಯಗಂಧ ಕುಟಿಗಿನ್ನು । ಪ್ರತಿಯಿಲ್ಲ ತ್ರಿಭುವನದೊಳಗೆ ॥ (79)

ಆಗಂಧ ಕುಟಿಯ ಮಧ್ಯದೊಳು ಸಿಂಹಾಸನ । ಶ್ರೀ ಮೇರುಗಿರಿಯಂದದೊಳು ॥
ರಾಗ ರಂಜಿತ ಮಣಿಕಿರಣಂಗಳಿಂದ । ರಾಗವೆತ್ತಿಹುದೇನೆಂಬೆ ॥ (80)

ಅದರ ಮಧ್ಯದೊಳು ಪೊಂದಾವರೆ ಯೊಪ್ಪುವು । ದದರ ಕರ್ಣಿಕೆಗೆ ನಾಲ್ವೆರಳು ॥
ಪದಸೋಂಕದಂತರದೊಳ ಗೋಲಗವಾಗಿ । ಸದಮಲ ಜಿನನೊಪ್ಪುತಿಹನು ॥ (81)

ಭೂಮಂಡಲದ ದೀಪ್ತಿ ಛತ್ರತ್ರಯದ ಕಾಂತಿ । ಈ ಮಹಿಯೊಳು ಸೂರ್ಯ ಚಂದ್ರ ॥
ಧಾಮವ ಮಸುಳಿಸುತಿಹ ವೆನಲಪರವು । ಹಾಮಹಿಮೆಯು ಸೇನವೇಳ್ವೆ ॥ (82)

ಪಲ್ಲವ ಕುಸುಮ ಕೋರಕದಿಂದ ನೋಳ್ಪರಿ । ಗುಲ್ಲಾಸವನು ಪುಟ್ಟಸುತ ॥
ಅಲ್ಲಿಯಶೋಕ ಮಹೀರುಹ ಶ್ರೀಜಿನ । ವಲ್ಲಭ ನೊತ್ತಿನೊಳಹುದು ॥ (83)

ಸುರರ ಪೂಮಳೆ ಪೊಳಗುವ ದೇವದುಂದುಭಿ । ಯುರುವತ್ತು ನಾಲ್ಕು ಚಾಮರವ ॥
ಕರವೆತ್ತಿ ಢಾಳಿಪ ಯಕ್ಷ ಕುಮಾರರ । ಸಿರಿಯನದೇನ ಬಣ್ಣಿಪೆನು ॥ (84)

ಘಾತಿ ಕರ್ಮಕ್ಷಯದಿಂದ ಪುಟ್ಟಿದ ಪತ್ತು । ವೀತರಾಗನಿಗತಿಶಯವು ॥
ನೂತನ ಗಗನ ಗಾಮಿತ್ವ ಮುಂತಾದ ವಿ । ಖ್ಯಾತತಿಶಯ ವೊಪ್ಪುತಿಹುದು ॥ (85)

ಆಸಮಯದೊಳು ದೇವೇಂದ್ರನು ಬಂದುಸು । ರಾಸುರ ಸಮಿತಿಯೊಂದಾಗಿ ॥
ಭಾಸುರ ದೇವಗಡವ ನೇರಿಯುವನ ವಿ । ಲಾಸವನೇನೆಂದು ಪೇಳ್ವೆ ॥ (86)

ಅನುಪಮ ಜಲಗಂಧಾಕ್ಷತೆ ಪುಷ್ಪನೈವೇದ್ಯ । ಮಿನುಗುವ ರತ್ನದೀಪಗಳು ॥
ಮನವೊಲ್ವ ರತ್ನ ಫಲಾದಿಗಳಿಂದಾದಿ । ಜಿನನಂಘ್ರಿಯ ಸರ್ಚಿಸಿದನು ॥ (87)

ಸಾಸಿರದೆಂಟು ನಾಮಗಳಿಂದ ನುತ್ತಿಸಿದ । ವಾಸವನತಿ ಮುದದಿಂದ ॥
ಶ್ರೀಸುರನರನಾಗ ಪತಿಮೌಳಿ ರಂಜಿತ । ಭಾಸುರ ಪದಪದ್ಮಯುತನ ॥ (88)

ಸ್ವಪುರಿಮ ತಳಪುರ ದಧಿಪತಿ ಯನಿತರೊ । ಳ್ಸುಪವಿತ್ರ ಭರತೇಶನನುಜ ॥
ಕಪಟ ವಿದೂರ ವೃಷಭಸೇನ ಬಂದನು । ಸ್ವಪುರಿಜನದ ಸಂದಣಿಯೊಳು ॥ (89)

ಸಮವಸರಣವನು ಪೊಕ್ಕು ಜಿನೇಶನ । ಕ್ರಮಗಳ ಪೂಜಿಸಿ ಬಳಿಕ ॥
ಮಮತೆಯ ಬಿಟ್ಟುಜಿನ ರೂಪಧರಿಸಿದ । ನಮರೇಂದ್ರ ಜಯಜಯವೆನಲು ॥ (90)

ದೀಕ್ಷಿತ ನಂತರ ಸರ್ವರ್ಧಿ ಸಂಪನ್ನಮು । ಮುಕ್ಷುವಾದ ನು ಜಗಪೊಗಳೆ ॥
ಆಕ್ಷಣದೊಳು ಗಣಧರ ಮುಖ್ಯನಾದಭು । ಭುಕ್ಷ ವಂದಿತ ದಿವ್ಯಾಕರಣ ॥ (91)

ಇತ್ತಲಯೋಧ್ಯೆಯೊಳ್ ಭರತೇಶಗೆಯುಗ । ವತ್ತಾಗಿ ಮೂರೊಸಗೆಗಳ ॥
ಬಿತ್ತರದಿಂದ ಮೂವರು ಬಂದು ಪೇಳ್ದರು । ಚಿತ್ತೋತ್ಸಾಹದಿಂದಾಗ ॥ (92)

ಪುರುಜಿನ ಪತಿಗಾದ ಕೈವಲ್ಯ ಮಹಿಮೆಯು । ವರಚಕ್ರ ರತ್ನದುದ್ಭವವ ॥
ಕರಚೆಲ್ವನಂತಃಪುರದ ಮಹಾದೇವಿ । ವರಕುಮಾರನ ಪೆತ್ತಳೆಂದು ॥ (93)

ಭೂವರ ಕೇಳ್ದು ಸಂತಸದಿಂದಿವರೊಳ । ಗಾವುದು ಮುಖ್ಯವೆಂದೆನುತ ॥
ಭಾವದೊಳಗೆ ಯೋಚಿಸಿ ಯರ್ಥಕಾಮಂಗ । ಳಾವುದರಿಂದಾದುದೆಂದು ॥ (94)

ಧರ್ಮಾರ್ಥಕಾಮಂಗಳೊಳಗೆ ಧರ್ಮವೆ ಮುಖ್ಯ । ಧರ್ಮ ವೃಕ್ಷದ ಫಲವರ್ಥ ॥
ಕರ್ಮವಾಫಲರಸವೆಂದು ನಿಶ್ಚೈಸಿದ । ಕೂರ್ಮೆಯಿಂದಾ ಭರತೇಶ ॥ (95)

ಒಸಗೆಯ ಪೇಳ್ದವರ್ಗಂದಂ ಚಿತ್ರವನಿತ್ತು । ವಸುಧಾಧೀಶ ಪುರದೊಳು ॥
ಎಸೆವಾನಂದ ಭೇರಿಯ ಪೊಯ್ಸಿ ಜನರೆಲ್ಲ । ಒಸಗೆ ಮರುಳ್ಗೊಂಡಂತಾಯ್ತು ॥ (96)

ಪುರಜನ ಪರಿಜನವಂತಃ ಪುರವಜನ । ಪೆರಸಿಗಂ ಧೇಭವನೇರಿ ॥
ಭರತೇಶನೆಯ್ತಂದ ಕೇವಲ ಪೂಜೆಗೆ । ಪುರುಜನಪತಿಯು ಸನ್ನಿಧಿಗೆ ॥ (97)

ಗಗನ ಮಂಡಲವನಲಂಕರಿಸಿದರ್ಾ । ಭಗವದಾಸ್ಥಾನ ಮಂಟಪವ ॥
ಸುಗುಣರ ದೇವನಿಳಿದ ಮದಗಜವನು । ಸೊಗಸುವ ರಾಜಚಿಹ್ನಗಳ ॥ (98)

ಬಟ್ಟಾಸಮಾನಸರಣದ ಸೊಬಗನೆಲ್ಲ । ನಿಟ್ಟಿಸಿ ನೋಡಿ ಆಶ್ಚರ್ಯ ॥
ಬಟ್ಟತನಗೆ ಸಾಸಿರವೇ ಕಾಯ್ತಿಲ್ಲ । ದಿಟ್ಟಗಳಿಂದು ಬಗೆದನು ॥ (99)

ಧೂಳೀ ಸಾಲಿ ಮಾನಸ್ತಂಭ ಖಾತಿಕೆಲೀಲೆ । ದೋರುವ ಪುಷ್ಪವಾಟೀ ॥
ಸಾಲಾದ ಧ್ವಜಕಲ್ಪ ವೃಕ್ಷಸಂಗೀತ ಹರ್ಮ್ಯಂ । ಗಳಾಭೂಮಿಗಳರವ ॥ (100)

ಮಂಗಲಾಷ್ಟಕವೆ ಗೋಪುರ ಸಾಲವೇದಿಕೆ । ಕಂಗೊಳಸುವ ತೋರಣಗಳ ॥
ರಂಗುಧಾಳಪ ಸುನಾಟ್ಯ ಸಾಲೆಗಳ ಬೆ । ಡಂಗನೋಡುತ ಬಂದನಾಗ ॥ (101)

ನವನಿಧಿ ಚೈತ್ಯ ಸಿದ್ಧಾರ್ಥ ವೃಕ್ಷಂಗಳ । ತವೆಯುದ ಧೂಪ ಘಟಗಳ ॥
ಅವರವರಂದವನೋಡುತ ಶ್ರೀಮಂಡ । ಪವನು ಪೊಕ್ಕನು ಭರತೇಶ ॥ (1 2)

ದ್ವಾದಶಗಣದ ತ್ರಿಮೇಖಲೆಗಳಬೆಂಪ । ನಾದರದಿಂಪೀಕ್ಷಿಸುತ ॥
ಮೇದಿನೀಪತಿ ಗಂಧ ಕುಟಿಯು ಮಧ್ಯದೊಳರ್ಪ । ದೇವನಕಂಡನಾ ಚಕ್ರಿ ॥ (103)

ತಲೆದೂಗಿ ವಿಸ್ಮಯ ಸ್ಮೇರಲೋಚನನಾಗಿ ಪುಳಕಾಂಕುರ ದೊಡಗೂಡಿ ॥
ಕಳದಾನಂದಾಶ್ರುಗೂಡಿ ನುತಿಸಿದನು । ಬಲಗೊಂಡು ಬಂದ ಸಮ್ಮುಖದಿ ॥ (104)

ಮೂಜಗದೊಡೆಯರ ಮಕುಟರತ್ನಾಂಶು ವಿ । ರಾಜಿತ ಚರಣಸರೋಜ ॥
ಶ್ರೀಜಿನರಾಜ ಭವ್ಯರಿಗೆ ಸನ್ಮಾರ್ಗದ । ಓಜೆಯು ತೋರಿಸು ಸ್ವಾಮಿ ॥ (105)

ಎಂದಿವ್ರು ಮೊದಲಾದ ಸ್ತೋತ್ರೋತ್ತರ ಶತ । ದಿಂದೊಪ್ಪುವನಾ ಮಂಗಳನು ॥
ಅಂದುಚ್ಚರಿಸಿ ನುತಿಸಿ ಪಸುಗುಣ ರೂಪ । ವೆಂದೆಂಬಸ್ತವದ ದಿಂದಾಗ ॥ (106)

ಜನನಿಗೆ ಸಾಷ್ಟಾಂಗವೆರಗಿ ಪೂಜಿಸಿ ಮತ್ತೆ । ಮನುಜ ಕೋಷ್ಠದೊಳು ಕುಳತು ॥
ವಿನಯದಿ ಕರಕಮಲಗಳನು ಮುಗಿದು ಕೇ । ಳ್ದನು ಜೀವಾದಿ ತತ್ವಗಳ ॥ (107)

ಮಧುರ ಮನೋಹರ ತಾಲ್ವೋಷ್ಠಸ್ಪಂದನ । ವಿಧುರಿತ ಹಿತದೋಷರಹಿತ ॥
ಬಾಧನುತ ದಿವ್ಯಧ್ವನಿಯು ದಯಿಸಿತಂಬು । ನಿಧಿಯಂತೆ ಗಂಭೀರ ಘೋಷ ॥ (108)

ಹೇಯಾದೇಯ ತತ್ವಗಳೆಂದಿತ್ತರ । ರಾಯನೀ ಕೇಳ್ದ ತತ್ವಗಳು ।
ಹೇಯಸಂಸಾರ ಕಾರಣಗಳು ಮುಕ್ತಿಗು । ಪಾಯ ಮುಪಾದೇಯ ತತ್ವ ॥ (109)

ಅದರೊಳು ದ್ರವ್ಯಕ್ಷೇತ್ರಾದಿ ಭೇದವಿ ಪಂಚ । ವಿಧಸಂಸಾರ ಮತ್ತಲ್ಲಿ ॥
ವಿವಿಧ ಮಿಥ್ಯಾತ್ವಾದಿ ಪಂಚಾಸ್ರವವಿಸಂ । ಭವಿಸುವ ಕರ್ಮಗಳೆಂಬು ॥ (110)

ಸಂಸಾರ ಕಾರಣಗಳು ಜ್ಞಾನ ದರ್ಶನ । ಹಿಂಸಾದಿ ವಿರತಿ ಭಾವಗಳು ॥
ಸಂಸಾರ ಮಾರ್ಗಕ್ಕೆ ಧ್ವಂಸ ಕಾರಣ ಭವ್ಯೋ । ತ್ತಂಸಕೇಳೆಂದಾದಿ ಜಿನಪ ॥ (111)

ಅವರೊಳು ತತ್ವಾರ್ಥಂಗಳ ನಂಬುವು । ದದು ಸಮ್ಯಕ್ತ್ವ ತತ್ವಗಳು ॥
ವಿದಿತ ಜೀವಾಜೀವಾಸ್ರ ವಾದಿಗಳ ಭೇ । ದದೊಳೇಳು ತೆರನಾಗಿಹವು ॥ (112)

ಚೇತನೆಯುಳೆ ಲಕ್ಷಣ ವಾಳ್ವುದು । ಮಾತೇನದು ಜೀವತತ್ವ ॥
ಭೂತಳದೊಳು ಮುಕ್ತಾಮುಕ್ತ ಭೇದದಿಂ । ದಾತತ್ವವಿತ್ತೆರನಹುದು ॥ (113)

ಅಲ್ಲಿ ವಿಮುಕ್ತ ಜೀವಂಗಳೊಂದೇ ಭೇದ । ದಲ್ಲಿಹವಿತರ ಜೀವಗಳು ॥
ಎಲ್ಲಿ ನೋಡಿದರು ತ್ರಸ ಸ್ಥಾವರಭೇದ । ವಲ್ಲದೆಬೇರೆತ್ತೊಂದಿಲ್ಲ ॥ (114)

ತ್ರಸ ಸ್ಥಾವರ ನಾಮ ಕರ್ಮೋದಯದಿಂದ । ತ್ರಸ ಸ್ಥಾವರ ಕಾಯಗಳು ॥
ಎಸೆವುದು ಸ್ಪರ್ಶನೆ ಕೇಂದ್ರಿಯ ವಿರತಕ್ಕೆ । ತ್ರಸಕಾಯ ಕೊಂದೊಂದಧಿಕವು ॥ (115)

ಕಂಬು ವೃಶ್ಚಿಕ ಮಧುಕರ ಮನುಷ್ಯಾದೀಶ । ವೆಂಬ ಭೇದದಿ ತ್ರಸಕಾಯ ॥
ಇಂಬಾದ ನಾಲ್ಬೆರ ಸ್ಥಾವರ ಕಾಯಕ । ದಂಬಕ ಭೇದಂಗಳೈದು ॥ (116)

ಮೇದಿನ್ಯಪ್ತೇಜೋ ವಾಯ್ವನ ಸ್ಪತಿಗಳ । ಭೇದದಿಂದೊಪ್ಪುತಲಿಹವು ॥
ಆಧಾರದಿಂದಿವ ರಕ್ಷಿಸುವುದೆ ಧರ್ಮ । ಮೇದಿನೀ ಪತಿಕೇಳೆಂದ ॥ (117)

ಚೈತನ್ಯ ವಿಲ್ಲದಿದರ್ದೆ ಜೀವತತ್ವ । ತೆರನದು ಪಂಚ ಭೇದಗಳು ॥
ಗತಿಸ್ಥಿತ್ಯವಗಾಹ ದೇಹಾದಿ ವರ್ತನ । ಹೇತುಗಳಾಗಿ ಒಪ್ಪಿಹವು ॥ (118)

ಧರ್ಮಾ ಧರ್ಮಾಕಾಶ ಪುದ್ಗಲ ಕಾಲ । ವೊರ್ಮೆಯೆ ಲೋಕದೊಳ್ತುಂಬಿ ॥
ಬೆರ್ಮೆಯಿಂದಿವು ಜೀವತತ್ವ ಕುಪಗ್ರಹ । ಧರ್ಮಕಾಧಾರ ವಾಗಿಹವು ॥ (119)

ಆವುದರಿಂದ ಕರ್ಮಗಳು ಕಟ್ಟುವುದದು । ಜೀವನಿಗಾಸ್ರದ ತತ್ವ ॥
ಭಾವಿಸೆ ಪ್ರಕೃತಿ ಪ್ರದೇಶ ಸ್ಥಿತ್ಯನುಭಾಗ । ದಾವಿಧದಿಂ ನಾಲ್ಕು ಬಂಧು ॥ (120)

ಮುಂದೆ ಬರ್ಪಾಸ್ರವಗಳನು ಗುಪ್ತ್ಯಾದಿಗ । ಳಿಂದ ತಡೆವುದು ಸಂವರೆಯು ॥
ಹಿಂದೆ ಕಟ್ಟಿದ ಕರ್ಮಂಗಳ ತಪದಿಂದ । ಮುಂದುಗಡಿಪುದು ನಿರ್ಜರೆಯು ॥ (121)

ಮೂಲೋತ್ತರಾದಿ ಭೇದವನುಳ್ಳ ಪ್ರಕೃತಿಯ । ಮೂಲೋಚ್ಛಿತ್ತಿಯೆ ಮೋಕ್ಷ ॥
ಕಾಲಾದಿ ಲಬ್ಧಗಳಿಂದವನ ನಂಬುವ । ಶೀಲವೆ ಸಮ್ಯಕ್ತ್ವ ಭವ್ಯ ॥ (122)

ಸಂದೇಹ ವೈಪರೀತ್ಯಾದಿ ದೋಷಂಗಳ । ಹೊಂದದಲೀಯದೆ ತತ್ವಗಳನು ॥
ಮಂದೇತರ ಬುದ್ಧಿಯಿಂದ ತಿಳಿವುದದು । ಸಂದಸಮ್ಯಜ್ಞಾನ ಭವ್ಯ ॥ (123)

ಭವಬೀಜ ನಾಶಕ್ಕೆ ಬಾಹ್ಯಾಭ್ಯಂತರ । ವಿವಿಧ ಕ್ರಿಯಾ ವಿನಿವೃತ್ತಿ ॥
ಸುವಿವೇಕಿಗಳ್ಗೆ ಸಮ್ಯಕ್ಚಾರಿತ್ರ ಕೇ । ಳವನೀಶರೊಳಗಗ್ರ ಗಣ್ಯ ॥ (124)

ನರಕ ಪ್ರಸ್ತಾರ ಭವನವ್ಯಂತರಾವಾಸ । ನರತಿರ್ಯಂಚ [1] ಗೋರಿಕ ವಿಸ್ತಾರ ॥
ವರಜ್ಯೋತಿರ್ಲೋಕ ಸ್ವರ್ಗ ಲೋಕಂಗಳ । ಪರಿಯನೆಲ್ಲವನು ಕೇಳಿದನು ॥ (125)

ಸುರನರ ನಾರಕರುತ್ಸೇಧಾಯುಷ್ಯ । ಸಿರಿಸುಖದುಃಖ ಮುಂತಾದ ॥
ತೆರನತ್ರಿಷಷ್ಟಿಶಲಾಕಾ ಪುರುಷರ । ವರಕಥೆಗಳನು ಕೇಳಿದನು ॥ (126)

ಯೋಗೀಂದ್ರರು ಮುಂತಾದ ದ್ವಾದಶಗಣ । ವಾಗಧರ್ಮಾಮೃತರಸವ ॥
ರಾಗದಿಂ ಕರ್ಣದೊಳಿಂಬಿ ಮನೋಹರ । ವಾಗಿ ಬೀಗಿದರ ನಾನೇನೆಂಬೆ ॥ (127)

ವ್ರತ ಸಮ್ಯಕ್ತ್ವ ಗುಣಂಗಳ ಶುದ್ಧಿಯ । ನತಿಶಯದಿಂ ಭರತೇಶ ॥
ಕ್ಷಿತಿ ನುತಿಪಂತೆಯ್ದಿದನಾತನ ಪುಣ್ಯ । ದತಿಶಯವನು ಪೇಳಲಳವೆ ॥ (128)

---

[1] ಗೈರಿಕ.

ಕುರುರಾಜ ದಾಸಶ್ರೇಯಾಂಸ । ಭರತನು ಜಾತಾನಂತ ವೀರ್ಯ ॥
ಪುರುಜಿನಪನೊಳು ದೀಕ್ಷೆಯನಾಂತು ಗಣಧರ । ಪರಮೇಷ್ಠಿಗಳಾದರಾಗ ॥ (129)

ಪರಮ ವೈರಾಗ್ಯದಿಂ ಬ್ರಾಹ್ಮಿ ಸೌಂದರಿಯರು । [ಪುರು] ಜಿನಪನಸನ್ನಿಧಿಯೊಳು ॥
ವರದೀಕ್ಷೆಯನಾಂತು ಗಣಿನಿಯರ್ಗೆ ಮುಖ್ಯತ್ವ । ಪರಮ ಪದವಿಯನೆಯ್ದಿದರು ॥ (130)

ಶ್ರಾವಕ ವ್ರತಗೊಂಡು ಶ್ರುತಕೀರ್ತಿಯೆಂಬೋರ್ವ । ಶ್ರಾವಕಾಗ್ರೇಸರನಾದನಾಗ ॥
ಶ್ರಾವಕಿ ಪ್ರಿಯ ವ್ರತೆಯೆಂಬಳು ವ್ರತಗೊಂಡು । ಶ್ರಾವಿಕೋತ್ತಮೆ ಯಾದಳಾಗ ॥ (131)

ಮುನ್ನ ಭಗ್ನ ವ್ರತರಾದ ಕಚ್ಛಾದಿಗ । ಳುನ್ನತ ವ್ರತಗಳಧರಿಸಿ ॥
ಚೆನ್ನಾಗಿ ಜಾತರೂಪನು ತಾಳ್ದರಂತಾ । ಸನ್ನ ಭವ್ಯರಿಗಿದಚ್ಚರಿಯೆ ॥ (132)

ಅವರೊಳನಂತ ವೀರ್ಯನು ಬಹುಕಾಲದಿಂ । ಸವೆದ ಮುಕ್ತಿ ಮಾರ್ಗವನು ॥
ಸವರುವೆನೆಂದು ಮುನ್ನವೆ ಮೋಕ್ಷಲಕ್ಷ್ಮಿಗೆ । ಪ್ರವರ ತಾನಾದ ನೇನೆಂಬೆ ॥ (133)

ದಿವ್ಯ ಧ್ವನಿಯಿಂತಾರು ತಿಂಗಳು ಮುಟ್ಟಿ । ನವ್ಯ ತತ್ವಗಳ ಮಾರ್ಗವನು ॥
ಭವ್ಯ ಜನರಿಗೆ ನಿರೂಪಿಸಿ ತಣಿದುದು । ದಿವ್ಯಾಮೋದ ವಪ್ಪಂತೆ ॥ (134)

ಭರತೇಶ್ವರ ಬಾಹುಬಲಿಗಳು ಜಿನಪತಿ । ಗೆರಗಿ ಬೀಳ್ಕೊಂಡು ತಂತಮ್ಮ ॥
ಪುರಕೆಯ್ದಿದರಿತ್ತ ಧರ್ಮ ಚಕ್ರಾಧೀ । ಶ್ವರನ ವಿಹರಣ ಸಮಯವ ॥ (135)

ಅವಧಿಯಿಂದರಿದು ಬಿನ್ನೈಸಿದ ದೇವೇಂದ್ರ । ಸವಿನಯದಿಂ ಭವ್ಯ ಸಸ್ಯ ॥
ನಿವಹ ಪಾಪಗ್ರಹದಿಂದ ಬಾಡಿತು । ದಿವಿಜ ಶಿರೋಮಣಿ ನಿನ್ನ ॥ (136)

ಶ್ರೀವಿಹಾರವ ಮಾಡಿ ಧರ್ಮಾಮೃತದಿಂದ । ತೀವಿದ ಭವ್ಯ ಸಸ್ಯಗಳ ॥
ನೋವನು ಪರಿಹರಿಸಲು ಬೇಕು ಸ್ವಾಮಿಯೆಂ । ದಾವಿಭು ಸೂಚಿಸಲಾಗ ॥ (137)

ವರಭವ್ಯ ಜನರ ಪುಣ್ಯ ಪ್ರೇರಣೆಯಿಂದ । ನಿರುಪಮ ಸಮವಸರಣವು ॥
ಪರಿದುದು ಸೂರ್ಯ ಮಂಡಲದಂತೆ ನಭದೊಳು । ಸಿರಿವೆತ್ತ ಪುರುಜಿನ ಪತಿಯ ॥ (138)

ದೇವೋಪ ನೀತಾತಿಶಯಗಳು ಹದಿನಾಲ್ಕು । ದೇವರ ದೇವ ಗೊಪ್ಪಿಹವು ॥
ಸಾವಿರಧಾರೆಯ ಧರ್ಮ ಚಕ್ರದ ಕಿರ । ಣಾವಳಿ ಪಸರಿಸೆ ದೆಸೆಯ ॥ (139)

ಮಾಳವ ಮಗಧ ಕಾಶ್ಮೀರ ಕರ್ಣಾಟಕ । ಗೌಳ ಗುರ್ಜರ ಮಹಾರಾಷ್ಟ್ರ ॥
ಚೋಳಂಗವಂಗ ಕಳಿಂಗಾಂಧ್ರಾದಿವಿ । ಶಾಲದೇಶಂಗಳನೆಯ್ದಿ ॥ (140)

ಅಲ್ಲಲ್ಲಿ ಧರ್ಮಾಮೃತದ ಮಳೆಯ ಕರೆ । ದಲ್ಲಲ್ಲಿಯಾ ಭವ್ಯ ಜನರ ॥
ಸಲ್ಲೀಲೆಯಿಂದ ಸಮ್ಯಕ್ತ್ವಾಭಿಮುಖರನು । ಬಲ್ಲವರರಸ ಮಾಡಿಸಿದ ॥ (141)

ಇಂತು ವಿಹರಿಸಿ ಕೈಲಾಸಾದ್ರಿಯ । ಪ್ರಾಂತದೊಳ್ಬಂದು ಗಿರಿಯ ॥
ನಿಂತು ಶಿಖರ ಮಧ್ಯವನು ಸಿಂಗರಿಸಿತು । ಕಂತು ವಿಜಯನಾ ಸ್ಥಾನ ॥ (142)

ಇದು ಶ್ರುತಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯ । ಪದದೊಳೆಂಟನೆಯ ಸುಸಂಧಿ ॥ (143)

(ಎಂಟನೆಯ ಸಂಧಿ ಸಮಾಪ್ತಂ)

## ಒಂಬತ್ತನೆಯ ಸಂಧಿ

ಸದ್ಧರ್ಮ ಚಕ್ರವ ಸಾಧಿಸಿ ಮುದದಿಂದ । ಬದ್ಧ ಕರ್ಮಂಗಳ ಗೆಲಿದು ॥
ಬದ್ಧ ಚಿನ್ಮಯನಾದ ಗುಮ್ಮಟ ಸ್ವಾಮಿ ನೀ । ನುದ್ಧರಿಸೆಮ್ಮ ಕೃಪಾಳು ॥ (1)

ಶ್ರೀ ಭರತೇಶನಾಯುಧ ಶಾಲೆಯನು ಪೊಕ್ಕು । ಶೋಭಿಪ ಚಕ್ರರತ್ನವನು ॥
ನಾಭಿರಾಜನ ಪೌತ್ರನೊಸೆದು ಪೂಜಿಸಿದೊಂದು । ಸೌಭಾಗ್ಯವನೇನ ಪೇಳ್ವೆ ॥ (2)

ನೆಲನಾಕಾಶ ದಿಙ್ಮಂಡಲವನು ಚಕ್ರಿ । ಯುಳರ್ವ ಪ್ರತಾಪಾನಲವು ॥
ಜ್ವಲಿಸುವಂದದಿ ದಿಕ್ಚಕ್ರವ ಬೆಳಗಿತು । ಕಳಕಳಸುತ ಚಕ್ರರತ್ನ ॥ (3)

ಧಾರೆಯೊಂದೊಂದಕೆ ಸಾಸಿರ ಯಕ್ಷಂಗ । ಳಾರೈದು ರಕ್ಷಿಸುತಿಹವು ॥
ಧಾರೆಗಳ್ ಸಾಸಿರವಾ ಚಕ್ರರತ್ನಕೆ । ಧಾರಿಣಿಯೊಳಗೊಪ್ಪುತಿಹುದು ॥ (4)

ಪುತ್ರೋತ್ಸವವನು ಮಾಡಿಸಿದನು ಮತ್ತೆ । ನೇತ್ರಕಾನಂದವಪ್ಪಂತೆ ॥
ಶತ್ರುಗಳಗೆ ಮಿತ್ರರಿಗೆ ಶೋಕಹರುಷವ । ಸೂತ್ರಿಸಿತಾಭಯೋತ್ಸಹವು ॥ (5)

ಸೂರಭೂಜವೆ ಕೈಬಿಟ್ಟಂತೆ ಕೊಟ್ಟನು । ಕರೆಸಿ ಕರೆಸಿಯಾಚಕರಿಗೆ ॥
ಭರತೇಶ್ವರನ ತ್ಯಾಗಕೆ ಸರಿಯಿಲ್ಲೆಂದು । ಧರೆಯೆಲ್ಲ ಪೊಗಳುವಂದದೊಳು ॥ (6)

ಇಂತೊಂಬತ್ತು ದಿವಸ ಪರಿಯಂತ ನಿ । ರಂತರ ಚಕ್ರಪೂಜೆಯನು ॥
ಸಂತೋಷದಿಂದ ನಿರ್ವರ್ತಿಸಿದನು ಭೂ । ಕಾಂತ ಸಂಭ್ರಮದೊಡಗೂಡಿ ॥ (7)

ಆ ಸಮಯದೊಳು ಶರತ್ಕಾಲ ಬಂದು ವಿ । ಲಾಸದೋರಿತು ಧರೆಗೆಲ್ಲ ॥
ಕಾಸಾರ ದಿಙ್ನಭ ನಿರ್ಮಲವಾಯ್ತು ವಿ ಕಾಸ ಪದ್ಮೋತ್ಪಲ ಕಾಯ್ತು ॥ (8)

ದಿನಕರ ಕಿರಣದೊಳ್ತೀವ್ರತೆ ಭರತೇ । ಶ್ವರನ ತೀವ್ರತೇಜದಂತಾಯ್ತು ॥
ಅನುಪಮ ಕೀರ್ತಿಸಂಕ್ರಮಿಸಿದಂತಾ ಚಂದ್ರ । ಮನ ಬಿಂಬ ಪ್ರಜ್ವಲನಾಯ್ತು ॥ (9)

ರಾಜ ಹಂಸೆಗಳು ಸರೋವರದೊಳಗೆ ವಿ । ರಾಜಿಸುತ್ತೆಡೆಯಾಡಿದುವು ॥
ರಾಜಾಧಿರಾಜನಂತಃಪುರ ಕಾಂತೆಯ । ರೋಜೆಯ ಗಮನದಂದದೊಳು ॥ (10)

ಬೆಳೆದೆರಗಿದ ಕಳವೆಯ ತೆನೆಗಳ ಕಂಪಿಂ । ಗಳಗಳು ಬಂದೆರಗಿದುವು ॥
ತೊಳಗುವ ಮಲ್ಲಿಗೆ ಜಾಜಿಯ ಲತೆಗಳು । ತಳೆದೊಪ್ಪಿದುವು ನಾನಾಪೂಗಳ್ವಿನು ॥ (11)

ಇಂತೊಪ್ಪುವ ಶರತ್ಕಾಲದೊಳಗೆ ಭೂ । ಕಾಂತ ದಿಗ್ವಿಜಯ ಸೂಚನೆಯ ॥
ಅಂತರಿಸದೆ ಪೊಯ್ಸೆ ಭೇರಿಯನಾದ ದಿ । ಗಂತವೆಲ್ಲವನು ವ್ಯಾಪಿಸಿತು ॥ (12)

ಆಸ್ಥಾನ ಮಂಟಪದೊಳಗೋಲಗವಾಗಿ । ಪ್ರಸ್ಥಾನ ಭೇರಿಯ ಪೊಯ್ಸೆ ॥
ದುಸ್ಥಿತಿಯಾಯ್ತರಿಗಳಗೆಯವರದೊಂದ । ವಸ್ಥೆಯನೇನೆಂದು ಪೇಳ್ವೆ ॥ (13)

ಕಡಗ ಕುಂಡಲ ಹಾರಕೇಯೂರ ಪದಕ ಮ । ಕುಟ ಮುದ್ರಿಕೆ ಯಜ್ಞಸೂತ್ರ ॥
ಕಟಿಸೂತ್ರ ಮೊದಲಾದಾಭರಣದಿಂದೊಪ್ಪಿದ । ಪುಟವಿಟ್ಟ ಚಿನ್ನದಂದದೊಳು ॥ (14)

ದಕ್ಷಿಣ ಭುಜ ಕುಣಿದುದು ರಾಯ ಪ್ರತಿ । ಪಕ್ಷಭೂಪಾಲರ ವಿಜಯ ॥
ಲಕ್ಷ್ಮಿಯಾಲಿಂಗನವನು ಸೂಚಿಸುವಂ । ತಕ್ಷಿ ಸ್ಪಂದವಾಯ್ತು ಬಲವ ॥ (15)

ವಿಜಯ ಲಕ್ಷ್ಮಿಯ ಗೃಹದಂತೆ ಶೋಭಿಸುತಿರ್ಪ । ಅಜಿತಂಜಯವೆಂಬ ರಥವ ॥
ಸೃಜಿಸಿದ ತಕ್ಷಕರತ್ನ ಸಾರಥಿತಂದ । ಸುಜನ ಚಕ್ರೇಶನಿದ್ದೆಡೆಗೆ ॥ (16)

ರನ್ನದಗಾಲಿ ವಜ್ರದ ಕೀಲುನವರತ್ನ । ಚಿನ್ನದಿಂದೊಪ್ಪುವ ರಥಕೆ ॥
ಚೆನ್ನಾಗಿ ಜೋಡಿಸಿ ಕಟ್ಟಿದ ತುರಗವನು । ಬನ್ನಣದಿಂ ತಂದನಾಗ ॥ (17)

ಹಲ್ಲಣಿಸಿದುವು ಕುದುರೆಗಳು ಜಯವೆಂದು । ಸೊಲ್ಲಿಸಿದರು ಪಾಠಕರು ॥
ನಿಲ್ಲದಾಶೀರ್ವಾದವನು ಮಾಡಿದರು ಭೂ । ವಲ್ಲಭನಿಗೆ ವಿದ್ವಜ್ಜನರು ॥ (18)

ಇದುದು ವಿಜಯ ಪ್ರಸ್ಥಾನದ ಲಗ್ನವೆಂ । ದಾದರದಿಂ ಪೇಳೆ ಗಣಕ ॥
ಆದಿ ಜಿನೇಶನೆ ಶರಣೆಂದು ಪೊರವಟ್ಟ । ಮೇದಿನೀಪತಿ ಯುತ್ಸವದೊಳು ॥ (19)

ಭೋರೆಂದು ಶಂಖವ ಪೂರೈಸಿದರು ವಾದ್ಯ । ಭೇರಿಗಳ್ಮೊಳಗಿದುವಾಗ ॥
ವೀರ ಭಟರು ಬಂದು ಶರಣೆಂದು ನಿಂದರಿ । ನ್ನಾರು ಬಣ್ಣಿಪರಾ ಸೊಬಗ ॥ (20)

ಮದಗಜಗಳನು ಸಿಂಗರಿಸಿ ತಂದರು ಕಡು । ಮುದದಿಂದ ಮಾವುತರೇರಿ ॥
ಕುದುರೆಗಳನು ಸಿಂಗರಿಸಿ ರಾವುತರೇರಿ । ಒದಗಿ ಬಂದರು ನೃಪನೆಡೆಗೆ ॥ (21)

ಆ ರಥವನು ತಂದು ಪಿಡಿಯಲು ಮುದದಿಂದ । ಸಾರಭರತ ಚಕ್ರೇಶ ॥
ಏರಿದ ತರಣಿಯುಡರುವಂತೆ ಬೆಡಗಿನ । ಭೂರಿವಿಭವದೊಡಗೂಡಿ ॥ (22)

ಮಿತ್ರನಾಗಿಯು ತಾಪವನು ಪುಟ್ಟಿಪನಿವ । ಶತ್ರುವಿನಂದದೊಳೆಂದು ॥
ಚಕ್ರ ರತ್ನವು ಸೂರ್ಯ ಬಿಂಬವ ಹಳದಾತ । ಪತ್ರವಾಯ್ತುದನೇನನಂಬೆ ॥ (23)

ಸೇನೆಯೆಂದೆಂಬ ಸಮುದ್ರದ ತೆರೆಯಂ । ತಾನಂದದಿಂದ ಥಾಳಿಸುತ್ತ ॥
ಏನೆಂಬೆ ಮೂವತ್ತೆರಡು ಚಾಮರವಂ । ದಾನರನಾಥ ಗೊಪ್ಪಿಹವು ॥ (24)

ಆ ರಥದೊಳು ಕುಳ್ತಮರೇಂದ್ರ ವಿಭವ ಗಂ । ಭೀರದಿಂ ಕೈವೀಸಲಾಗ ॥
ಸಾರಥಿ ರಥವನು ತೆರಳಿಸಿದನು ಪ್ರಣ್ಯ । ಸಾರಥಿ ಚಕ್ರಮುಂದೆಯ್ದೆ ॥ (25)

ಮುಕುಟ ಬದ್ಧರು ಗಜತುರಗಾದಿ ವಾಹನ । ನಿಕರವನೇರಲಪ್ಪಣೆಯ ॥
ಅಕಲಂಕ ಚರಿತ ಕೊನಮ ಕೊಟದ ರಕ್ಷ । ಪ್ರಕಟಿಸಿ ಭ್ರೂಭಂಗದಿಂದ ॥ (26)

ತೇಜವಡೆದ ಪಂಚರತ್ನ ತೋರಣ ರತ್ನ । ರಾಜಿತ ರಾಜ ಮಾರ್ಗದೊಳು ॥
ರಾಜಾಧಿರಾಜನು ಬರೆ ನೋಡಿದರು ಬಂದು ರಾಜೀವಮುಖಿಯರಾ ಪುರದ ॥ (27)

ಭರತ ಚಕ್ರೇಶನ ಸೇನೆಯು ಕೆಂದೂಳ । ಪುರವನೆಲ್ಲವನು ವ್ಯಾಪಿಸಿತು ॥
ಪರಿತಂದರು ಮೂವತಿಯಾಗೆಲ್ಲ ಸ್ತ್ರೀವಶ್ಯ । ಕರಚೂರ್ಣವನು ತಳದಂತೆ ॥ (28)

ಕಂಗಳ ಕಿರಣಗಳೆಂಬ ನಾಳಗಳಿಂದ । ಸಿಂಗರವೆತ್ತ ಭರತನ ॥
ಅಂಗದ ಲಾವಣ್ಯರಸವ ನೀಂಟುವರು ಬೆ । ಡಂಗಿಂದಲಾಯುವತಿಯರು ॥ (29)

ನೋಡುವ ಹೆಂಗಳ ಕಂಗಳ ಪ್ರತಿಬಿಂಬ । ಗಾಡಿವೆತ್ತವನಂಗದೊಳು ॥
ಬೀಡ ಬಿಟ್ಟಂತಿರೆಯಿವನೆ ಮೃಗಣ್ಣನೆಂ । ದಾಡಿದರಾ ಜನರೆಲ್ಲ ॥ (30)

ಆ ಚಂದ್ರಿಕೆಯ ಕಂಡು ಪಾನಕೆಳಸುತಿ । ರ್ಪಾ ಚಕೋರಿಗಳಂದದೊಳು ॥
ಆ ಚಕ್ರಿಯ ರೂಪ ಕಂಡು ತರುಣಿಯರ । ಲೋಚನಕಾನಂದವಾಯ್ತು ॥ (31)

ಅದೆ ಬಂದ ಚಕ್ರೇಶನೆಂಬ ಮಾತನು ಕೇಳ । ಸುದತಿಯೊರ್ವಳು ಪರಿತಂದು ॥
ಮುದದಿಂದ ನೋಡಿ ಸಾತ್ವಿಕ ಭಾವ ಪೊಣ್ಮಿತು । ಮದನಗ್ರಹ ಪಿಡಿದಂತೆ ॥ (32)

ಆತನ ರೂಪವಿಲಾಸ ವಿಭ್ರಮಗಳ । ಕಾತರಾಕ್ಷಿಯರೆಲ್ಲ ನೋಡಿ ।
ಈತನೆ ನೂತನ ಮನ್ಮಥನಲ್ಲ ದೊ : ಡೇತರಿಂದೆಮಗೀಯವಸ್ಥೆ ॥ (33)

ಬಿಡುಮುಡಿ ಬೆವರಿದ ಗಲ್ಲ ಮಂದೋಚ್ಛ್ವಾಸ । ಕಡೆಗಣ್ಣ ಕೆಂಪು ಕಂಪಿಸುವ ॥
ಒಡಲು ನೂತನ ರಥವನು ಸೂಚಿಸಲೊರ್ವ । ಮಡದಿ ನೋಡಿದಳು ಚಕ್ರಿಯನು ॥ (34)

ಪರಿಪರಿಯೊಳು ಪರಸುವ ವೃದ್ಧಜನಗಳ । ಪರಕೆಯ ಶೇಷಾಕ್ಷತೆಯ ॥
ಶಿರದೊಳಗಾಂತು ಸಂಭ್ರಮದಿಂದ ಬಂದನಾ । ಪುರದ ಗೋಪುರದ ಸನ್ನಿಧಿಗೆ ॥ (35)

ಪ್ರಾಕಾರ ಗೋಪುರ ದ್ವಾರವ ಪೊರಮಟ್ಟು । ನೇಕ ವಿಭವದೊಡಗೂಡಿ ॥
ಆ ಕಡೆಗಾದ ನೆರದಿರ್ದ ಬಲವನು । ತಾ ಕಂಡನು ಮುದದಿಂದ ॥ (36)

ಭದ್ರಜಾತಿಯ ಮೃಗ ಸಂಕೀರ್ಣ ಜಾತಿಯ । ಮಂದ್ರಜಾತಿಯ ಗಜಘಟೆಯ ॥
ಕ್ಷುದ್ರಾರಾತಿಯ ವಿದ್ರಾವಣ ಕಂಡ ಮ । ದೋದ್ರೇಕ ಕಾರ್ಜ ಗಂಡವನು ॥ (37)

ಚೀರಮಂಗಳ ಕನ್ನೀಲ ಬಿಳಿಯ ನೀಲ । ಜೋರ ಕಲ್ಯಾಣಿ ಮುಂತಾದ ॥
ವಾರುವಗಳನು ಕಂಡನು ತನ್ನ ಬಲವೆಂಬ । ವಾರಾಶಿಯ ತೆರೆಯಂತೆ ॥ (38)

ಉಟ್ಟ ಚಲ್ಲಣ ದಟ್ಟಿಬಲದೊಳು ಸೊಬಗಿಂದ । ಕಟ್ಟಿದ ಛಾಕು ಕಸ್ತೂರಿಯ ॥
ಬೊಟ್ಟು ಪೂಸಿದ ಗಂಧ ಖಡ್ಗ ಖೇಟಕವಳ । ವಟ್ಟ ವೀರರ ಕಂಡನಾಗ ॥ (39)

ಹರಿಗೆಯ ಕೂರ್ಮವಾಸೆಗಳು ನೆಗಳು ಮುಂದೆ । ಪರಿವ ತುರಂಗ ತರಂಗ ॥
ಪಿರಿದಾದ ರಥಯಾನ ಪಾತ್ರನಂತೀ ಬಲ । ಶರನಿಧಿಯಂತೊಪ್ಪಿತಾಗ ॥ (40)

ಜಕ್ಕವಕ್ಕಿಗಳು ಸೂರ್ಯನ ಬರವನು ಮನ । ದಕ್ಕರಿಂ ನೋಡುವಂತದೊಳು ॥
ದಿಕ್ಕು ದಿಕ್ಕಿನ ದೊರೆಗಳು ಚಕ್ರವರ್ತಿಯ । ನಕ್ಕರು ಮಿಗೆ ನೋಡಿದರು ॥ (41)

ಬಂದೆರಗಿದ ಮಕುಟ ಬದ್ಧರಿಗಾ । ನಂದವನಾಗ ಪುಟ್ಟಿಸುತ ।
ಮಂದ ಹಾಸದಿ ಭ್ರೂವಿಭ್ರಮ ಮೃದುನುಡಿ । ಯಿಂದ ನೇತ್ರಾವಲೋಕದಿಂದ ॥ (42)

ಪುರದಿಂದನತಿ ದೂರದೊಳು ತಕ್ಷಕ ರತ್ನ । ವಿರಚಿಸಿದಾ ಶಿಬಿರದೊಳು ॥
ಕರಚೆಲುವಾದ ವಿಜಯ ಶ್ರೀ ಗೃಹವ ಬಂ । ದರಸಪೊಕ್ಕನು ಲೀಲೆಯಿಂದ ॥ (43)

ಅಲ್ಲಿ ಸ್ನಾನಾನಂತರ ದೇವ ಪೂಜೆಯ । ಸಲ್ಲೀಲೆಯಿಂದ ತಾ ಮಾಡಿ ॥
ವಲ್ಲಭೆಯರು ಪುತ್ರರೊಡನೆ ಭುಂಜಿಸಿದನು । ಕಲ್ಯಾಣವಪ್ಪಾಹಾರವನು ॥ (44)

ಆರೋಗಣೆಯ ಮಾಡಿ ಕರ್ಪೂರಯುತ ಗಂಧ । ಸಾರವಲೇಪಿಸಿ ಮೈಗೆ ॥
ನೂರು ಹೆಜ್ಜೆಯ ಹಾವುಗೆಯ ಮೆಟ್ಟಿನಡೆದು ಕ । ರ್ಪೂರದ ವೀಳ್ಯವನು ಮಾಡಿದನು ॥ (45)

ಸುರಭಿ ಮಾಲೆಯ ಸೂಡಿ ಸಿಂಹಾಸನವ ನಲಂ । ಕರಿಸಿ ಸಂಗೀತ ಗೋಷ್ಠಿಯೊಳು ॥
ಇರುತಿರ್ದ ಸುಖದೊಳಗಮರ್ದನ ಕಡಲೊಳ । ಗಿರುತಿರ್ಪಂತೆ ಸುಖದೊಳು ॥ (46)

ಮರುದಿನ ಗಂಭೀರವಾದ ರವದಿ ಪ । ನ್ನೆರಡು ಯೋಜನವ ವ್ಯಾಪಿಸುವ ॥
ಪರಮಾನಂದಿಗಳೆಂಬ ಪೆಸರ ಪ ನ್ನೆರಡು ಭೇರಿಗಳ್ ಪೊಯ್ಸಿದನು ॥ (47)

ವಿಜಯ ಘೋಷಗಳೆಂಬ ಪಟಹ ಹನ್ನೆರಡು ದಿ । ಗ್ವಿಜಯ ಘೋಷಣೆಯ ಮಾಡಿದುವು ॥
ನಿಜದಿ ಗಂಭೀರಾವರ್ತ ಕಂಗಳ । ವ್ರಜವ ವ್ಯಾಪಿಸಿತಾಗ ॥ (48)

ಗರುಡ ಮಕರ ಮತ್ಸ್ಯಗಳನು ಕುಲಿಶ ನಾ । ನರ ಸೊಡಲಾದ ಚಿಹ್ನಗಳ ॥
ಪಿರಿದಾದ ಧ್ವಜನಾಲ್ವತ್ತೆಂಟು ಕೋಟಿ ಸಿಂ । ಗರಿಸಿತು ಗಗನ ಮಂಡಲವ ॥ (49)

ಪೂರ್ವಾಭಿ ಮುಖವಾಗಿ ಚಕ್ರರತ್ನದ ಕಾಂತಿ । ಪೋಗುತ ಗಗನ ದೊಳಗೆಯ್ದೆ ॥
ಸರ್ವಸನ್ನಾಹದಿ ಚತುರಂಗ ಬಲಗೂಡಿ । ಸಾರ್ವಭೌಮನು ತೆರಳಿದನು ॥ (50)

ಮದಗಜ ವೆಂಭತ್ತುನಾಲ್ಕು ಲಕ್ಷಂಗಳು । ಹದಿನೆಂಟು ಕೋಟಿ ಜಾತ್ಯಶ್ವ ॥
ಮದಗಜ ಸಂಖ್ಯೆಯು ರಥಗಳೈದಿದವೆನ । ಲದನು ಬಣ್ಣಿಸುವಗೆನ್ನಳವೆ ॥ (51)

ಕಾಲಾಳು ವೆಂಬತ್ತು ನಾಲ್ಕು ಕೋಟಿಗಳಾಗ । ಸಾಲಾಗಿ ನಡೆಯೆ ಕಂದೊಳು ॥
ಮೇಲ ಕದಡಿತು ಭೂತಳದಿಂದ ರವಿರಶ್ಮಿ । ಜಾಲವನೆಲ್ಲವ ಮರೆಸಿ ॥ (52)

ಅಂತರಿಕ್ಷದಿ ದೇವ ವಿದ್ಯಾಧರ ಬಲ । ವಂತರಿಸದೆ ಪೋಗಲಾಗ ॥
ಚಿಂತಿಸಿ ರಿಪ್ರಗಳು ವಾಸಿ ಪಂಥವ ಬಿಟ್ಟು । ಮುಂತೆ ಕೊಟ್ಟರು ಕಪ್ಪಗಳನು ॥ (53)

ದೊರೆದೊರೆಗಳ ಚಾಮರಂಗಳ ವಾತದಿಂ । ದಿರದಿರಿಕೆಡಿದ ಕಂದೊಳ ॥
ಪರಿಹರಿಸಲು ಚಕ್ರರತ್ನದ ಬೆಳಗಿಂ । ದುರು ಸೇನೆ ನಡೆದುದಿಟ್ಟಣಿಸಿ ॥ (54)

ಪಟ್ಟಿಯು ಪನ್ನಂಗದ ಪಲ್ಲಕ್ಕಿಯೊ । ಳ್ಪಟ್ಟದ ರಾಣಿಯರೆಯ್ದೆ ॥
ಕಟ್ಟಾಣಿವೆಂಗಳು ಕರಿಣಿಯು ವೃಂದದೊ । ಳ್ಪಟ್ಟಯು ತಳೆಯೊಳ್ಯದಿದರು ॥ (55)

ಆಲವಟ್ಟಲು ಕುಂಚ ಕಾಳಂಚಿಗಳೆ ನಾಂತ । ವಾಲು ಚಾಮರವಢಾಳಸುವ ॥
ಊಳಿಗವೆಂಗಳ ತಂಡವೆಯ್ತಂದುದಾ । ಬಾಲೆಯರೆಡ ಬಲದಲ್ಲಿ ॥ (56)

ಎತ್ತಿದ ಬೆಳ್ಗೊಡೆಗಳ ನೆಳವೊಳಗೆ ಮ । ಹೋತ್ತರಿಯರು ಗೋಳಗೆಯು ॥
ಮೊತ್ತವ ಸೇರಿ ಬಂದರು ಕಟ್ಟಿಗೆಯವ । ರತ್ತಿತ್ತ ತೊಲಗಿಸೆ ಜನಗಳ ॥ (57)

ಆ ಸಮಯದೊಳು ಲಲಾಟಂತಪ ನಾಗ । ಲಾ ಸೂರ್ಯನ ರಶ್ಮಿಯಿಂದ ॥
ಕಾಸಾರಗಳ ಜಲ ಕಾದ ನೀರಂತಾಯ್ತು । ಓಸರಿಸಿದುವು ಹಂಸೆಗಳು ॥ (58)

ಕರಿಗಳು ತಮ್ಮ ಬಾಯೊಳು ಪುಷ್ಕರವ ನಿಟ್ಟು । ಕರದಿಂ ತೆಗೆದು ಜಲವನು ॥
ಎರಡು ಬರಿಯು ಮೈಗೆ ಸೇಚಿಸಿ ತಮ್ಮಯು । ಪರಿಹರಿಸಿದುವು ಶ್ರಮವ ॥ (59)

ಫುಲ್ಲನಾಂದ್ರೀಕ ಪುಟ ವಿಕಸಿತ ಮುಖ । ದಲ್ಲಿ ಸುರಿವ ನೊರೆಯಿಂಡು ॥
ಹಲ್ಲಣಿಸುವ ರವಂಗಳು ತುರಗಗಳು । ಸೊಲ್ಲಿಸಿದುವು ಪಂಶ್ರಮವ ॥ (60)

ಲಾವಣ್ಯ ರಸ ಸರಸಿಯು ಕ್ರಂತುರುಗಳಂ । ತಾಪರಿಸಿತು ಯುವತಿಯರ ॥
ತಾವರೆ ಮೊಗದೊಳು ಬೆಮರ್ವನಿಜಲಕಣ । ವಾವರಿಪಂತೆ ಚಂದದೊಳು ॥ (61)

ಅನಿತರೊಳ್ಗಂಗೆಯ ಜಲಶಿಖರಂಗಳು । ವನದ ರಜವನೆತ್ತಿಕೊಂಡು ॥
ಅನಿಲನೆಯ್ದಿತು ಮಂದಗತಿಯಿಂದಿದಿಗೊಂಡಾ । ವನಿತೆಯರ ಕರೆವಂತೆ ॥ (62)

ರಂಗತುರಂಗ ತರಂಗ ಹಸ್ತಿಗಳಿಂದ । ಕಂಗೊಳಸುವ ತಾರೆಗಳ ॥
ಮಂಗಳಾರತಿಯು ನಿಧೀಶಗೆತ್ತಿದಳೆನೆ । ಗಂಗಾನದಿ ಯೊಪ್ಪಿತಾಗ ॥ (63)

ತೆರೆಕೈದಾವರೆ ಮೊಗ ಮತ್ಸ್ಯನೇತ್ರಂಗ । ಳೊಪ್ಪಿರವಾರು ಮಳಲೊಟ್ಟುಗಳು ॥
ಪಿರಿದಾದ ಸುಳನಾಭಿ ತುಂಬಗುರುಳಂತೆ । [ವರ] ಗಂಗೆ ಯುವತಿಯಂತಿಹಳು ॥ (64)

ಆರಥವನು ಮೆಲ್ಲನೆ ನಡೆಸುತ ಪುಣ್ಯ । ಸಾರಥಿಯಿಂತೆಂದು ನುಡಿದ ॥
ಧಾರಿಣಿಪತಿಯೊಡ ನದರ ಶೃಂಗಾರವಿ । ಶೇಷಗಳನು ತಾಕಂಡು ॥ (65)

ಇದು ಪುರು ಪರಮೇಶನ ಕೀರ್ತಿಯಂತೆ ಸಂ । ಮುದವ ಪುಟ್ಟಿಪುದು ಭುವನಕೆ ॥
ಇದು ರಾಜಹಂಸ ನಿಮಿಷ ಚಕ್ರ ಸೇವಿತ । ಪದಯುತ ನಿನ್ನಂತೆ ಸ್ವಾಮಿ ॥ (66)

ಗಗನದಂತಿದು ಮೀನ ಮಕರ ಕರ್ಕಟ ರಾ । ಶಿಗಳಿಂದ ಶೋಭಿಸುತಿಹುದು ॥
ಮೃಗಧರನಂತೆ ಕುವಲಯ ಕಾನಂದವ । ಮಿಗೆ ಪುಟ್ಟಿಪುದು ರಾಜಹಂಸ ॥ (67)

ನಿನ್ನ ಹೃದಯದಂತಗಾಧ ಗಾಂಭೀರ್ಯ ದೊಂ । ದುನ್ನತಿಕೆಯ ನಾಂತಿಹುದು ॥
ನಿನ್ನ ಶತ್ರುಗಳ ಸಮೂಹ ದಂತಾವಾಗ । ಭಿನ್ನ ಭಂಗಗಳ ನಾಂತಿಹುದು ॥ (68)

ಇಕ್ಕೆಲದೊಳು ವನರಾಜಿಗಳಿಂದ ದೇ । ವರ್ಕಳು ಮಿಥುನಗಳಾಗಿ ॥
ಪಕ್ಕದ ವಜ್ರ ವೇದಿಕೆಯಿಂದ ಜನರಮ । ನಕ್ಕೆ ಸಂತಸವ ಪುಟ್ಟಿಪುದು ॥ (69)

ಏಳೆಲೆ ಬಾಳೆಗಳವು ನಿನ್ನ ತನುವಿನ । ಗಾಳಸೋಂಕಿದ ಕಾರಣದಿಂ ॥
ಬೇಳಲಳವೆ ದಿವ್ಯಗಂಧಂಗಳಾದುವು । ಕೇಳು ಭೂಪಾಲಾಗ್ರ ಗಣ್ಯ ॥ (70)

ಇವು ದೇವ ಕುಸುಮ ವೃಕ್ಷಂಗಳು ನೋಡುಮ । ತ್ತಿವು ಹರಿಚಂದನ ವಿಟಪಿ ।
ಇವುಕಾಳಾಗರುಗಳು ರಕ್ತಚಂದನ । ಇವು ದೇವದಾರು ವೃಕ್ಷಗಳು ॥ (71)

ರಾಜ ಹಂಸೆಗಳು ನಿನ್ನಯ ತರುಣಿಯರ ಸ । ಮಾಜದ ನಡೆಯನು ಕಂಡು ॥
ರಾಜೀವಗಳ ಮರೆಹೊಕ್ಕವು ಲಜ್ಜೆಯಿಂ । ದಾಜಿಸ ಪತಿಯ ಕುಮಾರ ॥ (72)

ನಾರಿಯರೆಸೆವ ಕಣ್ಗಳ ಭಾವವ ಕಂಡು । ನೀರೊಳು ಮುಳುಗಿದವೀಗ ॥
ವಾರಿಚರಗಳು ಮುಕುಲಿತಗಳಾದುವು ಕೈರವಗಳು ಲಜ್ಜೆಯಿಂದ ॥ (73)

ಈ ಪುಣ್ಯನದಿಯ ಸಮೀಪದೊಳಗೆ ಬೀಡ । ಭೂಪಾಲ ಬಿಡಬಹುದಿಂದು ॥
ಈ ಪಗಲೊಳಗೆಂದು ಬಿನ್ನವಿಸಿದ ನಾಗ । ಶ್ರೀ ಪತಿಯೊಡನೆ ಸಾರಥಿಯು ॥ (74)

ಇನನ ಸಂತಾಪವ ತಾಳಲಾರದೆ ಸರ್ವ । ಜನವೀಗ ಬಾಯುಸುತಲಿದೆ ಕೊ ॥
ವನಜಲ ಕೇಳಿಗೆ ನೀವಪ್ಪಣೆಯ ಕೊಡಿ । ಸರುಪಮ ಗುಣಮಣಿ ಸಿಂಧು ॥ (75)

ಎಂದು ಬಿನ್ನವಿಸಲು ಭರತೇಶ್ವರನಾ । ನಂದದಿಂ ಬೀಡನು ಬಿಡಿಸಿ ॥
ಸ್ಯಂದನದಿಂದ ತಾನಿಳಿದಾ ವನಕೆ । ಯ್ತಂದನು ಲೀಲೆಯಿಂದಾಗ ॥ (76)

ವನತರುಲತೆಗಳ ತಳರು ಪೂಗೊಂಚಲೊ । ಳನುರಾಗದಿಂದಿಟ್ಟಯಿಟ್ಟು ॥
ವನಿತೆಯ ರಾವನವನು ಬಂದು ಪೊಕ್ಕರು । ವನದೇವತೆಗಳಂದದೊಳು ॥ (77)

ಪರಿಮಳಸುವ ಸುಯ್ಲ ಗಂಪಿಗೆ ಬಂ । ದೆರಗಿದ ಮಲರನು ಬಿಟ್ಟು ॥
ಪರಮೊಗಳೆಂದೆನಲವರ ಮೈಗಂಪಿನ । ಸಿರಿಯನುದೇನ ಬಣ್ಣಿಪುದು ॥ (78)

ಆಗಳಾ ವನಲತೆಗಳ ಮಂಟಪದೊಳು । ಭೋಗಿಗಳರಸ ಕರ್ಪುರದಿಂ ॥
ಆಗಮಾಡಿದ ಜಗಲಿಯ ಮೇಲೆ ಕಂಪಿನ । ಪೂಗಳಸಳ ಗದ್ದುಗೆಯೊಳು ॥ (79)

ಓಲಗವಾಗಲೊಡನೆ ಸುರಭಿಗಂಧ । ಜಾಲವನಾಂತು ತಂಗಾಳ ॥
ಲೀಲೆಯಿಂದಲಿ ಶ್ರಮವನು ಪರಿಹರಿಸಿತು । ಮೇಳದ ಸಖನಂತದೊಳು ॥ (80)

ಅಲ್ಲಲ್ಲಿ ಲತೆಗಳ ಗೃಹದೊಳು ಶೋಭಿಸು । ಪಲ್ಲವಂಗಳ ಶಯ್ಯೆಯೊಳು ॥
ನಿಲ್ಲದೆ ಬೀಸುವ ತಂಗಾಳಿಗೆ ಮೈಯ್ಯ । ಪಲ್ಲವಾಧರೆಯು ರೊಡ್ಡಿದರು ॥ (81)

ಯುವತಿಯರಿಸೆ ಚಕ್ರಿ ರತಿಸಮಯದೊಳು ತ । ನ್ನಮಯುವಾಂಕಿತ ಚಿಹ್ನಗಳನು ॥
ಸವತಿಯ ರೊಡನೆ ಮೆರೆಯಲೆಂದು ರು ವಿಲಾಸದಿಂ । ರವಿಕೆಗಳನು ಕಳೆದರು ॥ (82)

ಕುಸುಮಗಳನುಸುತ್ತಸೇರಿಸಿ ಕಟ್ಟಿದ । ಪೊಸತಳಿರ್ಗಳ ತಾಳವೃಂತ ॥
ಎಸೆದುದು ಯುವತಿಯರೆಲ್ಲರ ಕೈಯೊಳು । ಪೊಸತೊಂದು ಸೊಬಗ ಪುಟ್ಟಿಸುತ ॥ (83)

ಅವರಿಂದ ಬೀಸಲಾಯುವತಿಯು ರಂಗದ । ಬೆಮರ್ವನಿಗಳನು ಪೀರಿದುವು ॥
ಅವರ ಕುಸುಮ ರಜ ಮೆಯ್ಯೊಳು ಪಸರಿಸಿ । ಪೊಸಬಣ್ಣದೋರಿದುವಾಗ ॥ (84)

ತಳಿರ ಹಾಸಿಗೆಗಳು ತಳಿರ ಬಿಜ್ಜಣಿಗೆಗಳ್ । ತಳಿದೆರ್ಳಂಗಲ ಕರ್ಣಪೂರ ॥
ಬಳಲಿಕೆಯನು ಪರಿಹರಿಸಿದು ವಾಕ್ಷಣ । ದೊಳಗಬಲೆಯ ರಂಗದಿಂದ ॥ (85)

ಕಳಕಂಠ ಪಾಠಕ ನಿಕರ ಕೊಂಡಾಡಲು । ಛಲಬೇರಿದನು ಚಕ್ರವಾಕ ॥
ಕಳಹಂಸೆ ಮುಂತಾದ ಬಳಗದೊಡನೆ ಬಂದ । ಗಿಳಿದೇರನೇರಿ ಮನ್ಮಥನು ॥ (86)

ಮಲ್ಲಿಗೆಗಳ ಬಿರುಮುಗುಳೊಳು ತುಂಬಿಗ । ಳಲ್ಲಲ್ಲಿ ಝೇಂಕರಿಸುವವು ॥
ಪುಲ್ಲಶರನು ಬರ್ಪ ಸಮಯದೊಳ್ ಶಂಖವ । ನಿಲ್ಲದೆ ಪೂರೈಸುವಂತೆ ॥ (87)

ಬಳಲಿಕೆಯನು ಪರಿಹರಿಸಿ ವನಾಂತರ । ದೊಳಗೆ ಚರಿಸಬೇಕೆಂದು ॥
ಲಲನೆಯ ರೊಡಗೂಡಿ ಭರತ ಚಕ್ರೇಶತಾ । ನೆಳಸಿದನತಿಮುದದಿಂದ ॥ (88)

ಆರು ಋತುಗಳೊಳು ತೋರುವ ಫಲಪುಷ್ಪ । ತೋರಿದುವಾ ವನದೊಳಗೆ ॥
ಆರು ಖಂಡವನಾಳ್ವ ದೊರೆಯ ಪುಣ್ಯೋದಯ । ವಾರಿಗೆ ಮುದವ [1] ಪುಟ್ಟಿಸದು ॥ (89)

ಪೊಸತಾದ ಮಾವಿನ ಪೂವಿನ ತಳಿರ್ಗಳ । ರಸವನುಸವಿದು ಕೋಗಿಲೆಯು ॥
ರಸವೊಸರುವ ಪಂಚಮರವದಿಂದ ಸಂ । ತಸವ ಪುಟ್ಟಿಸಿತು ರಾಯನಿಗೆ ॥ (90)

ಪಾದರಿ ಮಲ್ಲಿಗೆ ಪೂವಾವ ವಿವಸ್ತ್ರವು । [ಪೋವಗೊಳಪ] ಸ್ವಾದು ಫಲಗಳು ॥
ಮೇದಿನಿಯೊಳು ಮಧು ಮಾಸ ನಿದಾಘದ । ಭೇದವ ತೋರಿಸುವಂತೆ ॥ (91)

ಪೀಲಿಯ ಕಣ್ಗಳ ಕೆದರಿ ನರ್ತನದೊಂದು । ಲೀಲೆಯ ತೋರಿದನಾಗ ॥
ಸಾಲಾಗಿ ನಿಂತು ನವಿಲ್ಗಳು ವರುಷಾ । ಕಾಲವ ಸೂಚಿಸುವಂತೆ ॥ (92)

ಮಲ್ಲಿಗೆ ಜಾತಿಯ ಪೂವಿನ ಕಂಪನು । ಸಲ್ಲೀಲೆಯಿಂದ ತಾನಾಂತು ॥
ಮೆಲ್ಲನೆ ಬೀಸೆ ತಂಗಾಳಿ ಶರತ್ಕಾಲ । ದುಲ್ಲಾಸವನು ಕಾಣಿಸಿತು ॥ (93)

ಅಲರೇರಿದುವು ಸಿಂದುವಾರಂಗಳಿಳ ಸಂ । ಕುಳವೇರಿತು ಕಂಪಿಗವರ ॥
ಒಲೆದುದು ತಂಗಾಳಿ ಹಿಮಕಾಲ ದೊರ್ತನೆ । ತಲೆದೋರಿದಂತೆ ಬಾನದೊಳು ॥ (94)

ತರುಗಳ ಪತ್ರವ ನೊಯ್ಯನೊಯ್ಯನೆ ಪರಿ । ಹರಿಸಿ ಕಾಳಕೆಯ ಪುಟ್ಟಿಸುತ ॥
ಪರಿತಂದುದು ಶಿಶಿರರ್ತುವೆಂಬುದನನು । ಕರಿಸಿ ತೋರಿತಾ ವನವು ॥ (95)

ಇಂತಾರು ಋತುಗಳು ದಿವ್ಯ ಪ್ರಭಾವವ । ಸಂತರಿಸಿದೆ ಬೇರೆ ಬೇರೆ ॥
ತಾ ತೋರುವಾವನ ಲಕ್ಷ್ಮಿಯ ನೋಡಿದ । ಸಂತೋಷದಿಂದ ಚಕ್ರೇಶ ॥ (96)

---

[1] ಪುಟ್ಟಿದರು.

ತಂಗಾಳಿಯೆಂಬ ನರ್ತಕ ತಳಿರ್ಪುಷ್ಪ ಘ । ಟಂಗಳಿಂ ಸಿಂಗರವಾದ ॥
ಮಂಗಲ ವನಲಕ್ಷ್ಮಿಯೆಂಬ ನರ್ತಕಿಯು ಬೆ । ಡಂಗಿಂದ ಲಾಸ್ಯ ಮಾಡಿಸಿದ ॥ (97)

ಕಾಮಿನಿಯರು ತಮ್ಮ ತಮ್ಮ ವಿಲಾಸದಿಂ । ದಾಮಹಾವನದೊಳಗಾಗ ॥
ಪ್ರೇಮದಿಂದಾ ಪುಷ್ಪ ಚಯವನು ಮಾಡಲು । ಕಾಮಿಸಿದರು ವಿಭವದೊಳು ॥ (98)

ಮಲ್ಲಿಗೆಯಂತೊಪ್ಪುವ ಮೈಗಂಪಿನ । ಸಲ್ಲಲಿ ತಾಂಗಿಯರಾಗ ॥
ಮಲ್ಲಿಗೆಗಳ ಲತೆಗಳ ನಡರಿವರು ಸಂ । ಗಲ್ಲ ಪುಷ್ಪವ ಕೊಯ್ಯಲೆಂದು ॥ (99)

ಕೆಂದಳಿರ್ಗಳ ಪೋಲ್ವ ಕರಚರಣಾಧರ । ಬಿಂದೊಪ್ಪುವ ಕೋಮಲೆಯರು ॥
ಬಂದು ರಕ್ತಾಶೋಕದ ತಳಿರ್ದೊಂಗಲ । ಕೆಂದಳಿರಿಂ ಕೊಯ್ದರಾಗ ॥ (100)

ಹೇಮಚಂಪಕ ಪುಷ್ಪದಂಡ ದೊಳತಿರಾನು । ಣ್ಣೇಯಕ ಭೂಷಲತೆಯು ॥
ಕೋಮಲಾಂಗಿಯರು ಕೊಯ್ದರು ನವ । ಚಂಪಕ । ಸೌಮನಸವನು ಸಂತಸದಿಂ ॥ (101)

ಪೊಂಬಾಳೆ ದೊಡೆಯು ನೀರೆಯರು ಪೊಕ್ಕರು ಪೊಸ । ಪೊಂಬಾಳೆಗಳ ವನಗಳನು ।
ಕಂಬಾರಿಯು ಮದಗಜದಂತೆ ಕ್ರೀಡಿಸ । ಲಿಂಬಾದ ಸುಳಿಗಳ ಕೊಯ್ದು ॥ (102)

ಪಲ್ಲವ ಸುಮಕೋರಕ ಫಲ ಪಣ್ಗಳಿಂ । ದುಲ್ಲಾಸವನು ಪುಟ್ಟಿಸುವ ॥
ನಿಲ್ಲದಿವ್ಯ ಮಾವಿನ ಮರವ ನಾಲಿಂಗಿಸಿ । ನಿಲ್ಲದೆ ಪೊಗಳ್ದಳಂತೆಂದು ॥ (103)

ತಳಿರೊಳು ನಗೆಗಳೊಳ್ಪೂವಿನೊಳ್ಮಿಡಿಗಳೊ । ಳ್ಪಲಸಿತ ಪಕ್ವಫಲದೊಳು ॥
ಇಳೆಯೊಳು ನಿನ್ನಂತೆಸೆವ ತರುಗಳುಂಟೆ । ಜ್ವಲಿತಾನಂದ ಮಾಕಂದ ॥ (104)

ರತಿಗಮೊದಲು ಚುಂಬನಾಲಿಂಗನ ವೆಂದು । ಸತಿಯರೆಲ್ಲರಿಗೆತೋರ್ಪಂತೆ ॥
ಅತಿ ಪಕ್ವ ಚೂತ ಫಲಂಗಳ ಚುಂಬಿಸಿಶುಕ । ತತಿಯುಮರ್ದಪ್ಪಿದುವು ॥ (105)

ಲಲನೆಯೋರ್ವಳು ರತಿಭಾವದೊಡನೆ ಗೂಡಿ । ತಿಲಕ ವೃಕ್ಷವ ನಡೆನೋಡಿ ॥
ಕಳಿಕೆಗಳನು ಪುಟ್ಟಿಸಿದಳು ಪತಗೆ ಪುಳ । ಕಾಂಕುರವನು ಪುಟ್ಟಪಂತೆ ॥ (106)

ಕಾಮೋದ್ರೇಕದಿ ಕಾಮಿನಿ ಯೊರ್ವಳು । ವಾಮಪಾದ ಹತಿಯಿಂದ ॥
ಪ್ರೇಮವ ಪುಟ್ಟಿಸೆ ಪಲ್ಲವ ಕುಸುಮಾಘ । ರಾಮ ವಾಯ್ತು ಸುಗೆಯ ಮರನು ॥ (107)

ಕುರವಕ ವೃಕ್ಷವ ನಾಲಿಂಗಿಸಿ ಯೋರ್ವ । ತರುಣಿ ಪುಟ್ಟಿಸಿದಳಂಕುರವ ॥
ಸ್ಮರಭಾವದಿಂದಾ ತರುಣಿಯು ಕುಚಸೋಂಕೆ । ನರಗೆ ಪುಳಕವಪ್ಪುದರಿದೆ ॥ (108)

ಸುಧೆಗೆಣೆಯೆಣಿಸುವ ಮಧುವ ಮುಕ್ಕುಳಿಸಿಯು । ವಿಧುಮುಖಿಯುಗುಳಲುವಕುಲ ॥
ಮಧುವನು ಕಂಡುಕ್ಕಲಿಕೆಯನಾ ಜಲ । ನಿಧಿ ಪಡೆವಂತೆ ಪಡೆದುದು ॥ (109)

ವರ್ಣನೆಯನು ಪರಿಪರಿಯೊಳು ತಾಮಾಡಿ । ಕರ್ಣಿಕಾರವ ವೃಕ್ಷಕ್ಕೆ ॥
ಪರ್ಣಕಳಿಕೆಗಳ ಪುಟ್ಟಿಸಿದಳು [ಬಹು] । ವರ್ಣಿಸಿಯೆಕ್ಷ[1]ದಲ್ಲಿ ॥ (110)

ಪರಿಮಳಸುವ ಪೊಸ ಸುರಗಿಯ ಪೂಗಳ । ನರಸಿಕೊಯ್ದಳು ಮನ್ಮಥನ ॥
ಸುರಗಿಯಂತೊಪ್ಪುವ ತರುಣಿಯೊರ್ವಳು ಬೇಗ । ಪರಿತಃದಾವನದೊಳಗೆ ॥ (111)

ಅಳಿಯೊಳು ಪಗೆಯಾದುದೊಂದೇ ಪೊಲ್ಲಮ । ತ್ತುಳಿದ ಗುಣಗಳ ಗೆಲ್ಲ ॥
ಇಳೆಯೊಳು ನಿನಗೆಣೆಯಿಲ್ಲೆಂದಾಡಿದಳೋರ್ವ । ಲಲನೆ ಬಳಯ ಸಂಪಗೆಯೊಳು ॥ (112)

---

[1] ಪಂಚಕ.

ರತಿಗೆ ಮೋಹವನು ಪುಟ್ಟಿಪ ಗುಣ ನಿನ್ನೊಳ । ಗತಿಶಯ ಮಾದುದರಿಂದ ॥
ಪ್ರತಿಯಿಲ್ಲ ನಿನಗೆಂದು ಪೊಂಗೇದಗೆಯನೋರ್ವ । ಸತಿಕೊಯ್ದು ಕೊಂಡಾಡಿದಳು ॥ (113)

ಜಾತಿಯೊಳ್ಪುಟ್ಟಿದ ಕಾರಣದಿಂ ಪುಷ್ಪ । ಜಾತಿಗೆ ಮೇಲೆನಿಸಿರ್ದ ॥
ಜಾತಿಯ ಪೂಗಳ ಕೊಯ್ದರುತ್ಸವದಿಂ । ದಾತರುಣಿಯರು ಲೀಲೆಯೊಳು ॥ (114)

ಬೆಟ್ಟದಾವರೆಗಳು ಮನಸಿಜ ರಾಯಗೆ । ಪಟ್ಟವ ಕಟ್ಟೆ ವಸಂತ ।
ಕಟ್ಟದಿ ರೊಳಗೆತ್ತಿ ದಾರತಿಗಳ ಪೊಂ । ದಟ್ಟೆಯಂ ತೊಪ್ಪಿದುವಲ್ಲಿ ॥ (115)

ಮರುಗದೊಳಗೆ ರಸಗಂಧ ಕಬ್ಬಾಳದೊ । ಳರೆ ಪರಿಮಳವನು ಬಿಟ್ಟು ॥
ಮರುಳಾಗುಳದ ಪೂಗಳ ಗೆರಗುವ ಮಧು । ಪರಿಗೆ ವಿವೇಕಗಳುಂಟೆ ॥ (116)

ಇಂತಾತಂತಮ್ಮ ಬಗೆಗೆ ಮೆಚ್ಚಿ ಪೂಗಳಾತ । ಕಾಂತೆಯರೆಲ್ಲರುತ್ಸವದಿ ॥
ಅಂತರಿಸದೆ ಪೂಗಳನು ಕೊಯ್ವರು ಪ್ರಾಣ । ಕಾಂತನ ಬಗೆ ಮೆಚ್ಚುವಂತೆ ॥ (117)

ಪಿಂಡು ಗಂಕಣ ಕಟಿ ಸೂತ್ರ ಕರ್ಣೋತ್ತಂಸ । ದಂಡೆ ಸೂಸಕ ಕಂಠಸರವ ॥
ಕೊಂಡೊಯ್ದು ಪೂಗಳಂ ಕಟ್ಟಿದರಾಷಟ್ಖಂಡಾಧಿಪತಿಯ ರಾಣಿಯರು ॥ (118)

ನಿಮ್ಮ ನೋಯಿಸಿದೆವು ಫಲಪುಷ್ಪತಳಿರ್ಗಳ । ಗಮ್ಮನೆ ಕೊಯ್ವ ವೇಳೆಯೊಳು ॥
ನಿಮ್ಮಪರಾಧಕೆ ಕ್ಷಮಿಸಿ ನೀವೆಂದವ । ರಿಮ್ಮರವುಗಳ ಮನ್ನಿಸಿದರು ॥ (119)

ಪಾದಾಹತಿಯಿಂ ಮಧುಗಂಡೂಷದಿಂ । ದಾದನೋವನು ನೋಡಬೇಡ ॥
ಆದರವಿರಲಿ ನಮ್ಮೊಳಗೆಂದು ಬೀಳ್ಕೊಂಡ । ರಾದಿ ಚಕ್ರಿಯ ರಮಣಿಯರು ॥ (120)

ಎಲೆಲತೆಗಳಿರ ನಮ್ಮಯ ತನು ಲತೆಯೊಳು । ಕೆಳೆಯುಳ್ಳುದರಿಂದ ನಿಮ್ಮ ।
ಬಳಲಿಸಿದೆವು ನಾವೆಂದು ಬೀಳ್ಕೊಂಡರಾ । ಲಲನೆಯರಾಲತೆಗಳನು ॥ (121)

ಇಂತು ವಿಹರಿಸಿ ವನದೊಳು ಭರತೇಶ । ನಂತಃ ಪುರದ ರಾಣಿಯರು ॥
ಮುಂತಿರ್ದ ಗಂಗೆಯ ಜಲಕೇಳಿಗೆಳಸಿದರ್ । ಕಾಂತನೊಡನೆ ಲೀಲೆಯಿಂದ ॥ (122)

ಮದಕರಿ ಕರಿಣಿಗಳೊಡಗೂಡಿ ಕ್ರೀಡೆಗೆ । ನದಿಯ ಜಲವ ಪೊಗುವಂತೆ ॥
ಮದನ ಸನ್ನಿಭ ಭರತೇಶ್ವರನಾ ಗಂಗಾ । ನದಿಯ ಪೊಕ್ಕನು ಲೀಲೆಯಿಂದ ॥ (123)

ನದಿಯನು ಪೊಗುವರೆ ಸುದತಿಯರೆಲ್ಲರು । ಬೆದರು ತಿರಲು ಭರತೇಶ ॥
ಅದಕಂಡು ಮುಂಪೊಕ್ಕುನಿಂದ ಮಂದರಗಿರಿ । ಸುಧೆಗಡಲೊಳು ನಿಂದಂತೆ ॥ (124)

ನೀರಾಟಕೆ ತಕ್ಕ ಶೃಂಗಾರವನಾಂತು । ನಾರಿಯರೆಲ್ಲರು ಬಂದು ॥
ವಾರಿಯ ಪೊಕ್ಕರು ಜಲದೇವತೆಗಳು । ನೀರಾಟಕೆಯ್ದುವಂದದೊಳು ॥ (125)

ಹಾರದ ರುಚಿ ನಿರ್ಮಲ ಜಲ ಕುಚ ಚಕ್ರ । ವಾರಿಜ ಮುಖ ತುಂಬಿಗುರುಳು ॥
ಕೈರವ ನೇತ್ರ ಮಾಗಿರಲಾ ನಾರಿಯ । ರ್ಗೀರೊಂದು ಗಂಗೆಯಂತಿಹರು ॥ (126)

ಅವರವಿಲಾಸ ವಿಭ್ರಮ ಗಾಢ ಮೋದಿಗ । ಳವನಂತರಂಗವನೆಲ್ಲ ।
ತವಕದಿ ಸೂರೆ ಗೊಳುವೆ ವೆಂದೆನಲಾ । ಯುವತಿಯರಂದ ನಿನ್ನೆಂತೊ ॥ (127)

ಜಲಕೇಳಿಗೆಳಸುವ ಭರತನಂತಃಪುರ । ಲಲನೆಯ ಗೆ ಪೊಗೆ ಪೊಗಲು ॥
ಜಲದೇವಿಯು ಬೆಸದಿಂದಾ ಗಂಗೆಯ । ಜಲಕಟದಷ್ಟು ಮಾಯ್ತಾಗ ॥ (128)

ತೆರೆಗಳು ಮೇಲ್ವಾಯ್ದು ಕುಂಕುಮ ಲೇಪವ । ಪರಿಹರಿಸಿದುವು ಕುಚಗಳ ॥
ತರುಣ ವಿಟರ ನವಕಂದೊಳ್ವೆಣ್ಗಳ ' ಪರಿಹರಿಪಂತೆ ಲಜ್ಜೆಯನು ॥ (129)

ನೊಕ್ಕು ಜವ್ವನೆಯರ ಕಕ್ಕಸ ಕುಚಗಳ । ಚಕ್ಕವಕ್ಕಿಗಳಾಗ ಕಂಡು ॥
ಪಕ್ಕಕೈತಂದುವು ಭ್ರಾಂತಿಯಿಂ ತಮ್ಮೆಣೆ । ವಕ್ಕಿಗಳೆಂದು ಲೀಲೆಯೊಳು ॥ (130)

ಅಮರ್ದಿನ ಕಿರಣದಿಂದಮೃತಾಂಶು ಮುದದಿಂದ । ಕುಮುದಿನಿಯನು ಸೇಚಿಪಂತೆ ॥
ರಮಣಿಯರೆಲ್ಲರ ಮೇಲೆ ಸೇಚಿಸಿದ । ಸಂಭ್ರಮದಿಂದ ಜಲವ ಚಕ್ರೇಶ ॥ (131)

ಮಂದರ ಗಿರಿಯನು ದುಗ್ಧಾಬ್ಧಿಯ ಜಲ । ದಿಂದ ಮರಿಯರುತ್ಸವದಿ ॥
ಬಂದು ಸೇಚಿಸಿದಂತೆ ಭರತನಂಗವನಾ । ಸೌಂದರಿಯರು ಸೇಚಿಸಿದರು ॥ (132)

ಬಳಲಿದ ಮುಡಿ ಕೆದರಿದ ಕುಟಿಲಾಳಕಂ । ಗಳು ತೊಲಗಿದ ಪತ್ರಭಂಗ ॥
ಪುಳಕಾಂಕುರಂಗಳು ಮನಸಿಜ ಕೇಳಿಯ । ಜಲಕೇಳಿಯೊಳು ಸೂಚಿಸಿದವು ॥ (133)

ಪೊನ್ನಂಡೆ ಜೇಕೊರ್ಳವಿಯೊಳು ಜಲವ ತುಂಬಿ । ಚೆನ್ನೆಯರೆಸದೆಸೆದಾಡೆ ॥
ಬಿನ್ನಾಣದಿಂದ ಜಲಕ್ರೀಡೆಯೊಳು ಪತಿ । ಗುನ್ನತ ಮುದವಿತ್ತರಾಗ ॥ (134)

ಅಂಗದ ಕುಂಕುಮ ಯಕ್ಷಕರ್ದಮದಿಂದ । ಗಂಗೆಯ ಜಲವೆಲ್ಲ ಕದಡೆ ॥
ಕಂಗೊಳಸಿತು ಯಮುನಾಶೋಣ ನದಿಗಳ । ಸಂಗಮವಂತಾ ಜಲವು ॥ (135)

ಸ್ವರದೊಳು ಗದ್ಗದ ಕಂಗಳೊಳ್ಕೆಂಪು ಪಿಂ । ಡುರತೆ ಯುದರದೊಳಗೆಸೆಯೆ ॥
ಸುರತಾಂತ್ಯ ವಿಭವವ ಸತಿಯರೊಳ್ಕಾಣಿಸಿ । ಪೊರಮಟ್ಟ ಭರತ ಚಕ್ರೇಶ ॥ (136)

ಜಲ ದೇವತೆಗಳು ಜಲದಿಂದ ಪೊರಮ ಟ್ಟೊಲಿದು ವನಕ್ರೀಡೆಗೆಂದು ॥
ಘಳಿಲನೆ ಬರ್ಪಂತು ಬಂದರು ಚಕ್ರಿಯು । ಲಲನೆಯರಲ್ಲಿಂದಾವನಕೆ ॥ (137)

ನನೆದ ದುಕೂಲ ಮೈಯನು ಪತ್ತೆ ಮರಸಿರ್ದ । ಮನಸಿಜ ಕಲೆಗಳ ಚಿಹ್ನ ॥
ವನಿತೆಯ ರಂಗದೊಳಗೆ ಕಂಗೊಳಸಲು । ಜನಿಸಿತು ಚಕ್ರಿಗಾನಂದ ॥ (138)

ಉಟ್ಟರು ಧೌತ ದುಕೂಲ ವಸ್ತ್ರಂಗಳ ಮೊದ । ಲುಟ್ಟದುಕೂಲ ವಸ್ತ್ರಗಳ ॥
ಬಿಟ್ಟುಕಳೆದರು ಜವಾತ್ಕರಾ ಸತಿಯರು । ದಿಟ್ಟದೆರೆದು ನೋಡುವರೆ ॥ (139)

ಬಾವನ್ನ ಚಂದನದಪ್ಪನು ಲೇಪಿಸಿ । ಪೂವಿನ ತೊಡಿಗೆಯ ತೊಟ್ಟು ॥
ಭಾಮೆಯರೆಲ್ಲರು ಬೆಡಗಿಂದ ಬಂದರಿ । ನ್ನಾ ವಿಭವವನೇನ ಪೇಳ್ವೆ ॥ (140)

ವನಲಕ್ಷ್ಮಿಯರಂತಾವನದೊಳು ಯಿರೆ । ವನಲಕ್ಷ್ಮಿಯನು ತಾನು ಮರೆಯೆ ॥
ಮನುವಂಶ ತಿಲಕ ವಸಂತರಾಜನ ಪೋಲ್ತು । ವನದೊಳೊಪ್ಪಿದನು ಲೀಲೆಯೊಳು ॥ (141)

ವನಜ ಕೇಳಿಯ ನೀತೆರದಿಂ ಮಾಡಿ । ಮನು ಕುಲಾಂಗಣೆಯರ ಮನೆಗೆ ॥
ವನಿತೆಯರೊಡನೆ ತೆರಳಯಾರೋಗಣೆ । ಯನು ಮಾಡಿ ಸುಖದೊಳಗಿರ್ದ ॥ (142)

ಇದು ಶ್ರುತ ಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯ । ಪದದೊಳೊಂಬತ್ತನೆ ಸುಸಂಧಿ ॥ (143)

(ಒಂಬತ್ತನೆಯ ಸಂಧಿ ಸಮಾಪ್ತಂ)

## ಹತ್ತನೆಯ ಸಂಧಿ.

ಭಾವದೊಳಗೆ ಮುಕ್ತಿ ಕಾಂತೆಯನಮರ್ದಪ್ಪಿ । ಕೇವಲ ಬೋಧದಿಂದೆಸೆವ ॥
ದೇವರ ದೇವ ಗುಮ್ಮಟಸ್ವಾಮಿ ಸಲಹು ನೀ । ಭಾವ ಶುದ್ಧಿಯನೆಮಗಿತ್ತು ॥ (1)

ಆ ಸಮಯದೊಳಸ್ತಾಚಲ ಮಸ್ತಕ । ಕಾಸೂರ್ಯ ನೆಯ್ದಿಯೊಪ್ಪಿದನು ॥
ಭಾಸುರ ಪದ್ಮರಾಗದ ಮುಕುರವ ನೃಪ । ಗಾಶಾವಧು ಪಿಡಿದಂತೆ ॥ (2)

ವರುಣ ನರುಣ ರುಣಿ ಹಾರಾಂಬರಗಳ । ಕಿರಣ ಜಾಲವೆ ಪರ್ವಿಸಿದಂತೆ ॥
ವರುಣನ ದೆಸೆಯೊಳೊಪ್ಪಿತು ಸಂಧ್ಯಾರಾಗ । ಕರ ಚೆಲುವಿಂದ ನೋಳ್ಪರಿಗೆ ॥ (3)

ಆ ಸಮಯದೊಳು ಸಂಧ್ಯಾಕ್ರಿಯೆಗಳ ಮಾಡ । ಲಾ ಸಾರ್ವಭೌಮನೆಯ್ತಂದ ॥
ಭಾಸುರ ವೆನಿಪ ಗಂಗೆಯ ತಡಿಯೊಳಗೆ ವಿ । ಲಾಸದಿಂದಾಚಮನವನು ॥ (4)

ಮಾಡಿ ಬಳಿಕ ದೇವ ವಂದನೆಯೊಳು ಕೂಂ । ಡಾಡಿ ವೃಷಭ ಜಿನಪತಿಯ ॥
ಕೂಡೆ ನಾಸಾಗ್ರದೊಳಗೆ ದಿಟ್ಟಿಯ ನಿಟ್ಟು । ನೋಡಿ ನಿಜವ ಧ್ಯಾನಿಸಿದನು ॥ (5)

ತನುವೆಂಬ ದೇಗುಲದೊಳಗೆ ತನ್ನಾತ್ಮನ ಜಿನನೆಂದು ಭಾವಿಸಿ ಬಳಿಕ ॥
ತನುವಿನಿಂದಗಲಿದ ಸಿದ್ಧಾತ್ಮ ತಾನೆಂದು । ನೆನೆದನು ಭಾವಶುದ್ಧಿಯೊಳು ॥ (6)

ಪ್ರತಿ ಸಮಯದೊಳನಂತಗುಣಿತ ವಿಶು । ದ್ಧ್ಯತಿಶಯ ದೊರೆಕೊಂಡುದಾಗ ॥
ಯತಿಗಳಂದದೊಳಾ ಕ್ಷಿತಿಪತಿ ಯಿರ್ದನ । ಪ್ರತಿಮಾಯೋಗದೊಳೀನ ನೆಂಬೆ ॥ (7)

ಮುನ್ನೇಸರು ಮೂಡಲೊಡರೆ ಮಂಜಿನ ಪುಂಜ । ತನ್ನಿಂದ ತಾನಳಿವಂತೆ ॥
ತನ್ನಾತ್ಮನ ತಾನು ಭಾವಿಸಲಗು ತ್ರತಿ । ಗುನ್ನತ ನಿರ್ಜರೆಯಾಯ್ತು ॥ (8)

ಅಂತರ್ಮುಹೂರ್ತ ಕಾಲಂಬರ ಯೋಗದೊ । ಳಂತಿರಲಾ ರಾಜಯೋಗಿ ॥
ಅಂತರಿಸದೆ ಶಂಖನಾದ ವ್ಯಾಪಿಸಿತು ದಿ । ಗಂತವನಾ ಸಮಯದೊಳು ॥ (9)

ಜಿನಸಿದ್ಧ ಶರಣೆಂದು ಯೋಗನಿಷ್ಠಾಪನೆ । ಯನು ಮಾಡಿ ಭರತ ಚಕ್ರೇಶ ॥
ವನಿತೆಯರಿತ್ತ ದಿವ್ಯಾಂಬರ ಭೂಷಣ । ವನು ತೊಟ್ಟು ಬಂದ ನುತ್ಸಹದಿ ॥ (10)

ಆ ಕ್ಷಣದೊಳಗೆ ಕೈದೀವಿಗೆಗಳು ಮತ್ತೆ । ಯಿ ಕ್ಷಿತಿಯೊಳು ವ್ಯಾಪಿಸಿತು ॥
ನಕ್ಷತ್ರಗಳ ಬೆಳಗಾಕಾಶದೊಳು ಪರ್ವಿ । ತೀಕ್ಷಿಸಲಾ ಕ್ಷಿತಿಯಂತೆ ॥ (11)

ತಕ್ಷಕ ರತ್ನ ನಿರ್ಮಿಸಿದ ಶಿಬಿರದೊ । ಳಾ ಕ್ಷಿತಿಪಾಲನೈತಂದು ॥
ಆಕ್ಷಣ ರಾಜ ಮಂದಿರವನು ಪೊಕ್ಕ ಸು । ಕ್ಷೇಮದಿಂದಿರ್ದನಲ್ಲಿ ॥ (12)

ಕುಮುದವನಂಗಳ ಗುತ್ಸಹವನು ಚಂ । ದ್ರಮನು ಪುಟ್ಟಿಸು ತುದಯಿಸಲು ॥
ರಮಣೀಜನ ನಯನೋತ್ಪಲ ಹರ್ಷವ । ನಮಿಸಿದನು ರಾಜೇಂದ್ರ ॥ (13)

ಅಂತಃಪುರದ ಕಾಮಿನಿಯರು ಭರತೇಶ । ತಂತಮ್ಮ ಮನೆಯೊಳಿರ್ದಂತೆ ॥
ಕಾಂತರೊಡನೆ ಕೂಡಿ ಸುಖಮಿರ್ದರೆನಲು ನಿ । ನ್ನಿಂತೆಂಬೆನವನ ವಿಕ್ರಿಯೆಯ ॥ (14)

ಸುರತಾಮೃತಾಂಬುರಾಶಿಯ ಮೂಗಿನಿದ್ರಾ । ತರುಣಿಯಾಲಿಂಗನ ವೆರಸಿ ॥
ಇರಲಾಗ ಶಂಖ ದುಂದುಭಿ ಮಂಗಲ ಪಾಠ । ಕರಘೋಷಣೆ ಕೇಳಲಾಯ್ತು ॥ (15)

ಸರಸಿಜಗಳ ಬಿರುಮುಗುಳ ಗಂಪಿಗೆ ಬಂ । ದೆರಗುವ ತುಂಬಿ ವಿಂಡುಗಳ ॥
ಕರಚೆಲ್ವಗಾನ ಸುರಭಿ ಮಂದ ಮಾರುತ । ಸಿರಿವೆತ್ತು ರಂಜಿಸಿತಾಗ ॥ (16)

ಆ ಮರುದಿವಸ ಕೇಸಮರ್ಾಡೆದ ಮುನ್ನ । ಭೂಮಿಪ ದಿವ್ಯಾಸ್ತ್ರಗಳನು ॥
ತಾಮಾಸವಿಲ್ಲದೆ ಅಜಿತಂ ಜಯವೆಂಬ । ಆ ಮಹಾರಥ ದೊಳು ತೀವಿ ॥ (49)

ಸ್ಥಲಜಲ ಗಾಮಿಗಳೆನಿಸುವ ಬಲ್ಕೆಯು । ಗಿಳಿವಣ್ಣದ ತೇಜಿಗಳ ॥
ಒಲಿದು ಹೂಡಿಸಿ ರಥವೇರಿ ಜೋಡಿಗೆ ತನ್ನ । ದಳಪತಿಯನು ಕಾಪಿಟ್ಟು ॥ (50)

ಸಾರಥಿ ಪ್ರೇರಿಸಲಾರಥ ಗಂಗಾ । ದ್ವಾರದೊಳಗೆ ಜಲನಿಧಿಯ ॥
ತೀರಿವಳುವೆಯೊಳು ಪೊಕ್ಕು ನಡೆಸುವವ । ರಾರುಭಟೆಯ ನೇನನೆಂಬೆ ॥ (51)

ತನ್ನ ಗುಂಪನು ಕೆಡಿಸಲು ಬಂದನೀ ಚಕ್ರಿ । ತನ್ನ ಗಂಭೀರತೆಯಿಂದ ॥
ಮುನ್ನವಿಂತೆಂದಬ್ಧಿಸುಯ್ಯು ಘೋಷಿಸುವಂ । ತುನ್ನತ ನಿನದ ವ್ರೊಪ್ಪಿಹುದು ॥ (52)

ತೆರೆಕೈಯಿಂದೆತ್ತಿ ಮುತ್ತಿನಕ್ಷತೆಗಳ । ಭರತೇಶನಿಗೆ ಸೇಸೆಯಿಕ್ಕಿ ॥
ಶರಧಿ ತಾನಿದಿರ್ಗೊಂಡು ಕರಕೊಂಡು ಪೋದಂತೆ ಪಂದುದಾರಥ ಜಲದೊಳು ॥ (53)

ತೆರೆಗಳೆ ತುರಗವಾನೆಗಳೆ ನೆಗಳು ವರ್ನ । ರರೆ ಕಾಲಾಳು ಕೂರ್ಮಗಳು ॥
ಪರಿವ ರಥಗಳಾಗೆ ಶರಧಿ ರಾಜನು ಬಂದು । ಭರತ ಚಕ್ರಿಯನಿದಿರ್ಗೊಂಡ ॥ (54)

ಪಚ್ಚೆ ಪವಳ ನೀಲ ಮುತ್ತು ಹೇಮದಕಾಂತಿ । ಉಚ್ಚಳಿಸಲು ಬಲದೊಳಗೆ ॥
ಅಚ್ಚರಿಯನು ಪುಟ್ಟಿಸುವುದಿಂದ್ರ ಚಾಪ । ನಟ್ಟಂತೆ ಚಕ್ರಿಯ ಕಣ್ಗೆ ॥ (55)

ಯೋಜನ ವೆರಡು ಲಕ್ಷ ವ್ಯಾಸದಿಂದವು । ರಾಜಿಪ್ಪುದು ವೃತ್ತವಾಗಿ ॥
ಮಾಜವಂತರ್ದ್ವಿಪ ನಾಲ್ವತೆಂಟುಹವಲ್ಲಿ । ಸೋಜಿಗವನು ಪುಟ್ಟಿಸುತ ॥ (56)

ಅವನು ಕುಭೋಗ ಭೂಮಿಗಳೆಂದು ಪೇಳ್ವರು । ಅವರೊಳು ಕುತ್ಸಿತನರರು ॥
ವಿವಿಧ ಕುಪಾತ್ರದಾನದ ಫಲದಿಂದ ಸಂ । ಭವಿಸುವರಾರ್ತದಿಂ ಪೋಗಿ ॥ (57)

ಕೋಕನಾಸಿಕ ದೀರ್ಘನಾಸಿಕ ಲಂಬಕ । ಕರ್ತಾರಾಂಕಿತರಾಕೆ ಪುಟ್ಟಿ ॥
ಏಕಪಲ್ಯೋಪಮಾಯುಷ್ಯರಲ್ಲಿಹರು ವಿ । ವೇಕರಹಿತ ದಾನ ಫಲದಿಂ ॥ (58)

ಲೋಲ ಕಲ್ಲೋಲ ಮಾಲೆಗಳ ಮೇಲ್ಗಡೆಯೊಳು । ಲೀಲೆದೋರುತ ಲೊಪ್ಪುತಿರ್ಪ ॥
ಮೇಲಂಧರ ಭುಜಗರ ವಿಮಾನಂಗಳ । ಸಾಲನೋಡುತಲೈದಿದನು ॥ (59)

ಹವಳದ ಲತೆಗಳ ಶಂಖದ ಹುಳುಗಳ ವಿವಿಧ ರತ್ನದ ಕಣಿಕಗಳನು ॥
ನವನಿಧಿ ಪತಿನೋಡು ತೆಯ್ದಿದ ಮುದದಿಂ । ದವರವರಧಿಕ ಶೋಭೆಯನು ॥ (60)

ಕಡುವೇಗದಿ ಪೋಪಗಾಲಿಯು ಚೀತ್ಕಾರ । ತಡೆದುದು ಜಲವೇಗದಿಂದ ॥
ಜಡಸಂಸರ್ಗದಿ ವೃತ್ತ ಶಾಲಿಗಳಗೆ । ಕೆಡುವುದಚ್ಚರಿಯೆ ಸದ್ಗುಣವು ॥ (61)

ತನ್ನ ಮನೋರಥ ದೊಡನೆ ಮಚ್ಚರಿಪಂತೆ । ಮುನ್ನವೆ ಪರಿದುದಾ ರಥವು ॥
ಬಿನ್ನಣದಿಂದಾ ಲವಣಾಬ್ಧಿಯ ಜಲ । ದುನ್ನತ ತೆರೆಗಳ ನೂಂಕಿ ॥ (62)

ಭಂಗವೆಂದೆಂಬ ಪೆಸರು ತೆರೆಗಾದುದು । ತ್ತುಂಗ ರಥದ ಹೋಲಿನಿಂದ ॥
ಸಂಗರದೊಳಗಾವನಿದಿರಾವ ನೃಪನಿಗೆ । ಭಂಗವಾಗುವ ದೊಂದರಿದೆ ॥ (63)

ನೆಲದೊಳು ಪರಿವಂತೆ ಜಲದೊಳಗಾ ರಥ । ಘಳಿಲನೆಯ್ದಿತು ನಮ್ಮಪತಿಗೆ ॥
ಜಲವಸ್ತಂಭಿಪ ವಿದ್ಯೆ ದೊರೆಯದಿಂತಪ್ಪುದೆ । ಜಲವೆಂದಾಡಿತು ಸೇನೆ ॥ (64)

ಶರನಿಧಿಯೊಳು ಚೈತ್ರ್ಯ ನೆಯ್ದುವಂದದೊಳತಿ । ಭರದಿಂದ ಪರಿದಾ ರಥವು ॥
ಕರಚೆಲ್ವಿಂದ ಪನ್ನೆರಡು ಯೋಜನ ಮು । ಟ್ಟಿರಿಸದೆ ನಿಂದುದು ಮುಂದೆ ॥ (65)

ನಂಗಲ್ಲ ನಿಕ್ಕಿದ ಹಡಗಿನಂತಾ ರಥ । ಕಂಗೊಳಸುತ ನಿಂದಿರಲು ॥
ಮುಂಗಡೆಯೊಳು ತೋರ್ಪ ಮಗಧನ ದ್ವೀಪದ । ಸಿಂಗರವನು ಕಂಡ ಚಕ್ರಿ ॥ (66)

ಗಡಿಯಿಲ್ಲಂಪಿತ್ತನೀ ಪ್ರೀಗಲಾಗದೊಂ । ಪಡಿಯುನೆಂದೆನುತಲಾ ಜಲಧಿ ॥
ತಡೆವಂತೆ ರಥನಿಲೆ ಚೋದ್ಯ ಪಟ್ಟಾ ಚಕ್ರಿ । ಕಡುಮುಳಿಸಿಂದ ನೋಡಿದನು ॥ (67)

ಚಕ್ರ ಕೋದಂಡವೆನಿಪ ತನ್ನ ಬಿಲ್ಲಿಗಾ । ಚಕ್ರಿ ಕೈನೀಡಿ ಹೆದೆಯನು ॥
ವಿಕ್ರಮದಿಂದೇರಿಸಿ ಜೇವಡೆಯೆ ದಿ । ಕ್ಚಕ್ರವ ತುಂಬಿತಾ ಧ್ವನಿಯು ॥ (68)

ಕಡಲುಕ್ಕಿತು ಕುಲಪರ್ವತಂಗಳು ನಡ । ನಡುಗಿದು ಪಮರರ ವಾಸ ॥
ಕೆಡೆದವು ಭೂತಳದೊಳು ಭರತೇಶ ಜೇ । ವಡೆಯಲಾ ವಿಸ್ತಾರದಿಂದ ॥ (69)

ಪುರು ಪರಮೇಶನ ಸುಕುಮಾರ ಭರತೇ । ಶ್ವರ ಚಕ್ರವರ್ತಿ ಮಾಗಧಗೆ ॥
ಬರೆಸಿ ಕಳುಹಿದ ನಿರೂಪ ಮದ್ಭಕ್ತ್ಯವ್ಯಂ । ತರವಾಸದ ಮರರನೆಲ್ಲ ॥ (70)

ಕರಕೊಂಡು ಬಂದು ಕಾಣಿಸಿ ಕಪ್ಪವ ಕೊಟ್ಟು । ಚರಣಕೆರಗಿಯಾಳ್ವೆಸನ ॥
ಸ್ಮರಿಸಿದಾಗಳೆ ಬಂದು ಮಾಡಿಯೆನ್ನಾಜ್ಞೆಯ । ಶಿರಸಾವಹಿಸಿ ಕೊಂಡುಯಿಹುದು ॥ (71)

ಎಂಬಕ್ಕರವನು ಬರೆಯಿಸಿ ಯಮೋಘ ವೆಂ । ದೆಂಬ ಬಾಣವನಳವಡಿಸಿ ॥
ತುಂಬ ತೆಗೆದು ಬಿಡಲಾ ಬಾಣ ಬೆಳಗಿದು । ದಂಬರ ತಳವನೆಲ್ಲವನು ॥ (72)

ಪುರಜನ ಪರಿಜನವಂತಃಪುರದ ಜನ । ನೆರೆದೆಲ್ಲ ಬೆದರುತಲಿಹರು ।
ಪರಿತಂದುಳ್ಕ ಬೀಳ್ವಂತೆ ಬೀಳ್ವುದು ದೇವ । ನರಮನೆ ಯುಗ್ರ ಭಾಗದೊಳು ॥ (73)

ಪ್ರಳಯ ಕಾಲದ ರುದ್ರನಂತೆ ಮಾಗಧನಾಗ । ಹುಳಿದು ಗದ್ದುಗೆಯನು ಪೊಯ್ದು ॥
ಫಳಲನೆ ಕೋಪಾಗ್ನಿಯ ಕಿಡಿಗಳು ಸೂಸೆ । ನಡೆತಂದು ಕಂಡ ಬಾಣವನು ॥ (74)

ಆಗಲವನ ಪರಿವಾರ ದೇವರ್ಕಳು । ಬೇಗ ರೌದ್ರಾವತಾರದೊಳು ॥
ಲಾಗು ಬಾಗಿನೊಳೈತಂದರಾಯುಧ ಹಸ್ತ । ರಾಗಿ ಮಾಗಧನಿರ್ದೆಡೆಗೆ । (75)

ಬಂದು ಮುಂಗಡೆಯೊಳು ನಿಂದು ಮಾಗಧನೊಳಂ । ತೆಂದು ಪೇಳಿದರೀ ಶರವ ॥
ಇಂದೆ ಸದವನ ಪೊದರ್ಪ ಗೆಡಿಸಿನಾವು । ತಂದೊಪ್ಪಿಸುವೆವು ನಿನ್ನಡಿಗೆ ॥ (76)

ದೇವನಾಗಲಿ ದಾನವನಾಗಲಿ ಮ । ರ್ತ್ಯವನಾಗಲಿಯವನ ॥
ನಾವು ಪಿಡಿದು ಕಟ್ಟಿ ತಂದೀಗ ನಿನ್ನಡಿ । ದಾವರೆಗೆರಗಿಪೆವಣ್ಣ ॥ (77)

ಬೆಸಸು ಬೆಸನ ಸ್ವಾಮಿ ನಿನ್ನೊಳು ಸೆಣಸುವ । ವಸುಧಾಧೀಶನ ನಾವು ॥
ಉಸಿರುಂ ಗುಬ್ಬಸವನು ಪುಟ್ಟಿಸಿ ಕಪ್ಪವ । ನೊಸೆದು ಕೊಡಿಸುವೆವು ನಿನಗೆ ॥ (78)

ಎನಲು ಮಾಗಧನಿಂತೆಂದನು ಬಲ್ಲೆ ನಿ । ಮ್ಮನಿಬರ ವಿಕ್ರಮಗಳನು ।
ಎನಗಿದಿರಾಗಿ ನಿಲುವ ಪಗೆಗಳ್ ತ್ರಿಭು । ವನದೊಳಗಾರುಂಟು ಪೇಳ ॥ (79)

ಪಗೆಗಳ್ಗೆ ಕಪ್ಪವ ಕೊಟ್ಟವರಿಗೆ ಕೈ । ಮುಗಿದೆಲೋಲಗಿಸಿ ಧರೆಯೊಳು ॥
ನಗೆ ಗೇಡಿನಾಗಿ ಬಾಳುವನು ಜೀವನ್ಮೃತ । ನಾಗೆ ನೋಡಲವನೊಬ್ಬ ದೊರೆಯ ॥ (80)

ಬೇಡಿದವರಿಗೀಯದೆ ಬಿರುದನು ಕೊಂ । ಡಾಡಿಸಿ ಕೊಳ್ಳದೆ ರಣಕೆ ॥
ಹೇಡಿಗಳಾಗಿ ಬಾಳುವ ದೊರೆಗಳ ಬಾಳ್ಕೆ । ನಾಡೊಡು ನಗೆಗೆಡೆಯಲ್ತೆ ॥ (81)

ಕುಲಧನವನು ಕೊಟ್ಟು ಕಂಗೆಟ್ಟು ತನ್ನಯ । ಕುಲ ಛಲ ಬಿರುದನು ಬಿಟ್ಟು ॥
ತಲೆವಾಗಿ ಪೊರಮಟ್ಟು ಬಾಳ್ವುದೇತರಗುಟ್ಟು । ನೆಲದೊಳು ಪಗೆಗಳವಟ್ಟು ॥ (82)

ಎಂದಾಡಿದ ಮಾಗಧನೊಳು ಕುಲವೃದ್ಧ । ರಂದಿಂತೆಂದು ಪೇಳ್ದರು ॥
ಮುಂದರಿಯದೆ ಪೊಗದಿಚ್ಚೆಯ ನಾಡುವ । ಮಂದಭಾಗ್ಯರಿಗುಂಟೆ ಸೌಖ್ಯ ॥ (83)

ತನ್ನಿಂದ ಹೀನಬಲರು ಮಾರ್ಮಲೆತರೆ । ಬೆನ್ನಟ್ಟಿ ಕಪ್ಪವಕೊಂಡು ॥
ತನ್ನಾಜ್ಞೆಯೊಳಗಿಟ್ಟು ಬಾಳಿಸಿಕೊಂಬುದು । ಮುನ್ನಿನರಸುಗಳ ನೀತಿ ॥ (84)

ತನ್ನ ಸಮಾನ ಬಲವನುಳ್ಳ ದೊರೆಗಳ । ಭಿನ್ನ ತಂತ್ರಗಳಿಂದ ಜಯಿಸಿ ॥
ಚೆನ್ನಾಗಿ ಹದುಳಿಸಿ ಕಪ್ಪವ ಕೊಂಬುದ । ತ್ಯುನ್ನತ ರಾಜರ ನೀತಿ ॥ (85)

ತನ್ನಿಂದಧಿಕ ಬಲಾಢ್ಯರ ಕಂಡರೆ । ಮುನ್ನವೆ ಕಪ್ಪವ ಕೊಟ್ಟು ॥
ಮನ್ನಣೆಯಿಂದ ಬಾಳ್ವುದು ಲೇಸು ನೀತಿಸಂ । ಪನ್ನವ್ಯಂತರ ಕುಲತಿಲಕ ॥ (86)

ಮುನ್ನಪಚಾರಿಸಿ ಮಾಡಿದ ಕಾರ್ಯವ । ದುನ್ನತವಪ್ಪುದೆ ದೇವ ॥
ಚೆನ್ನಾಗಿ ಲಾಲಿಸು ಶರವನೆಚ್ಚಾತನ । ಬಿನ್ನಾಣವೇನೆಂಬುದನು ॥ (87)

ಶರಧಿಯ ಪೊಕ್ಕು ನಮ್ಮದ್ವೀಪಕೆ ತನ್ನ । ಶರವನೆಚ್ಚವನು ಸಾಮಾನ್ಯ ॥
ಪುರುಷನಲ್ಲವನ ಬಿಂಕದ ಮಹಿಮೆಯ ನಾ । ಶರವೆ ಪೇಳುತಲಿದೆ ದೇವ ॥ (88)

ಭರತ ಕ್ಷೇತ್ರದೊಳೀ ಯುಗದೊಳು ತೀರ್ಥ । ಕರು ಚಕ್ರಧರರು ಪುಟ್ಟುವರು ॥
ನಿರುತ ಸರ್ವಜ್ಞರಿಂತೆಂದು ಪೇಳ್ದರು ಪೂರ್ವಾ । ಪರವಿದೇಹದೊಳು ಕೇಳದೆವು ॥ (89)

ಅವರಿಂದೀತನು ಚಕ್ರೇಶ್ವರನಲ್ಲ । ದೊಶೀ ಸಾಮರ್ಥ್ಯ ವಿವಗೆ ॥
ಒದಗದು ಶರದೊಳು ಬರೆದಕ್ಕರವನೋಡೆ । ಲದು ಪೇಳ್ವುದುಯೆಂದು ಪೇಳದರು ॥ (90)

ಎನಲಾಶರದೊಳು ಬರೆದಕ್ಕರದ ಪಂಕ್ತಿ । ಯನು ತಾನು ಓದಿಸಿ ಕೇಳಿ ॥
ಜನಿಸಿದವನ ಗರ್ವ ಸೂರ್ಯನಿದಿರಿನ ಮಂ । ಜಿನ ಪುಂಜದಂತೆ ಕರಗಿತು ॥ (91)

ಪುರುಜಿನ ಪತಿಯ ಕುಮಾರ ಚಕ್ರೇಶ್ವರ । ಚರಮಾಂಗ ಚೌಪಟ ಮಲ್ಲ ॥
ಪುರುಷರೊಳುತ್ತಮನಿವನ ಕಾಲ್ಗೆರಗಲು । ದೊರೆಕೊಂಬುದರಿದೆ ಸತ್ಪುಣ್ಯ ॥ (92)

ಎಂದಾಶರವ ಪೂಜಿಸಿ ಪಡಲಿಗೆಯೊಳ । ಗಂದಿಟ್ಟು ಪರಿವಾರ ಸಹಿತ ॥
ಬಂದು ಕಂಡನು ಭರತೇಶನ ಚರಣಾರ । ವಿಂದವ ಮಾಗಧನಾಗ ॥ (93)

ಮೂರೆಡೆಯೊಳು ಸಾಷ್ಟಾಂಗವೆರಗಿದನು । ಬೀರುತ ತನ್ನ ಬಿಂಕವನು ॥
ಗಾರುಮಾಡುವನೊ ಮನ್ನಿಸುವನೊ ಯೆಂದು ಮೈ । ಗೇರುವ ಕಂಪನ ಗೂಡಿ ॥ (94)

ಚಕ್ರ ರತ್ನವು ಪುಟ್ಟಲೊಡನೆ ಪುಟ್ಟಿತು ಪರ । ಚಕ್ರಕೆ ಭಯವೆಂದೆನಲು ॥
ಚಕ್ರವರ್ತಿಯ ದಂಡೆತ್ತಿ ಬರಲು ರಿಪು । ಚಕ್ರಕೆ ಭಯವಪ್ಪುದರಿದೆ ॥ (95)

ನಿನ್ನ ಪಾದಾಂಬುಜ ರಜಸೋಂಕಲೊಡನೆ ಯೀ । ಮುನ್ನೀರಾಯ್ತು ಪವಿತ್ರ ॥
ಎನ್ನಯ ಗಾತ್ರ ಪವಿತ್ರವಾದುದು ನೀ । ನಿನ್ನಭಯವನಿತ್ತು ಸಲಹು ॥ (96)

ಇವು ನಮ್ಮ ಲೋಕದೊಳಗಗ್ಗಳವೆನಿಸುವ । ಸುಲಲಿತವಹ ರತ್ನಂಗಳು ನಿನ್ನ ॥
ನವನಿಧಿಗಧಿವಾಸನೆಯು ಮಾಡಲಪ್ಪವೆಂ । ದವತಂದು ಮುಂದಿಟ್ಟನಾಗ ॥ (97)

ಮುನ್ನೇಸರನೇಳಿಪ ಕಾಂತಿಯುಳ್ಳ । ರನ್ನ ಗುಂಡಲವಿವು ಸ್ವಾಮಿ ॥
ನಿನ್ನ ಕರ್ಣಕೆಯೋಗ್ಯ ವಪ್ಪವೆಂದೆನುತವ । ಬಿನ್ನಾಣದಿಂದ ತಂದಿತ್ತ ॥ (98)

ತಾರಾಳಿಯಂತೆ ವಿರಾಜಿಪ ತ್ರೈಲೋಕ್ಯ । ಸಾರವೆನಿಸಿ ಶಾಂತಿವೆತ್ತ ॥
ಓರನ್ನದ ಮುತ್ತುಗಳಿಂದ ರಚಿಸಿದ । ಹಾರವ ನೃಪಗೆ ತಂದಿತ್ತ ॥ (99)

ಇಂತು ತನ್ನಯ ಸರ್ವಸ್ವವನೆಲ್ಲವ । ನಂತರಂಗದ ಶುದ್ಧಿಯಿಂದ ॥
ಮುಂತೆ ತಂದಿಟ್ಟೆರಗಿದ ಮಾಗಧನನು । ಸಂತೈಸಿದನು ಮುದದಿಂದ ॥ (100)

ಅವರೊಳು ಪತ್ತೆಂಟು ರತ್ನವ ತೆಕ್ಕೊಂ । ಡವನ ಮನ್ನಿಸಿ ಕಳುಹಿದನು ॥
ನವನಿಧಿ ಯಾಣ್ಮಗಾಜ್ಞಾಮಾತ್ರವೇ ಫಲ । ವವಗುಂಟೆ ವಸ್ತುವಿನಾಶ ॥ (101)

ಪಾಳೆಯಕಭಿಮುಖವಾಗಿ ತಿರುಗಿಸಲು । ಪೇಳದ ರಥವ ಸಾರಥಿಗೆ ॥
ಕಾಲವರಿದು ಬಿನ್ನವಿಸಿದ ಸಾರಥಿ । ಲೀಲೆ ಕೈಮಿಗಲಿಂತೆಂದು ॥ (102)

ಮಾಗಧಾಮರನ ಗೆಲಿದು ಬಂದನೆಂದನು । ರಾಗದಿಂದೀ ಜಲನಿಧಿಯು ॥
ಬೇಗ ನಿನಗೆ ತುಂತುರ್ವನಿ ಸೇಸೆಯ । ನಾಗುಮಾಡುತಲಿದೆ ಸ್ವಾಮಿ ॥ (103)

ಅರುಣ ಮಣಿಗಳ ಕಿರಣಗಳ ಪಿಶಿತವೆಂ । ದುರುಮುದದಿಂದೆಯ್ದಿ ಬಳಿಕ ॥
ಉರಿಮಾಲೆಗಳೆಂದು ಶಂಕಿಸಿ ದೂರಾಂ । ತರದೊಳೈದಿದವು ಮತ್ಸ್ಯಗಳು ॥ (104)

ತಮ್ಮ ಮೇರೆಯ ವಜ್ರ ವೇದಿಕೆಯನು ದಾಂಟಿ । ನಮ್ಮೊಳಗಿರ್ದ ಮಾಗಧನ ॥
ಗಮ್ಮನೆ ಜೈಸಿದನೆಂದು ತೆರೆಗಳು । ನಮ್ಮ ಬೆನ್ನಟ್ಟಿ ಬರುತವೆ ॥ (105)

ಆ ಸಮಯದೊಳಂಬುಧಿ ತಟದೊಳಗಿ । ರ್ದಾ ಸೇನೆಯೋಚಿಸುತಿರಲು ॥
ಈ ಸಮುದ್ರವ ಪೊಕ್ಕು ಪೋದನೊರ್ವನೆ ಚಕ್ರಿ । ಯಾ ಸಾರಥಿಯೊಡಗೂಡಿ ॥ (106)

ಹಿಂದು ಮುಂದೆಡಬಲವನು ಹಾರೈಸದೆ । ಒಂದೆ ರಥದೊಳೆಯ್ದಿದನು ॥
ಇಂದು ಮಾಗಧನೊಳು ಜಯವೆಂತಪ್ಪುದೊ । ಎಂದು ನೋಡುತಲಿರಲಾಗ ॥ (107)

ಅದೆ ಕಾಣುತಿದೆ ಮಕರವೊ ಪೆರ್ದೆರೆಯೊ ಮೇ । ಣದು ಭೈತ್ರವೊಯೆನುತಿರಲು ॥
ಒದವಿ ಬಂದುದು ರಥವವನ ಪುಣ್ಯೋದಯ । ಕೆದಿರಿಲ್ಲವೆಂದು ಕೊಂಡಾಡೆ ॥ (108)

ತೆರೆಗಳ ಹೊಯ್ಲ್ಗೆ ಮೊಗವೆತ್ತಿ ಕಾಲ್ಗಳಿಂ । ತೆರೆಗಳ ನೂಂಕಿ ರಥವನು ॥
ತೆರೆಯಿಲ್ಲದೆಡೆಯೊಳು ತಡಿಗೆಯ್ದಿಸಿದ ವಾ । ತುರಗಗಳತಿ ವೇಗದೊಳು ॥ (109)

ಸಾಗರವನು ಪೊಕ್ಕು ಅತಿವೇಗದಿಂದಾ । ಮಾಗಧಾಮರನ ಕೈಯಿಂದ ॥
ಈಗ ಕಪ್ಪವಕೊಂಡ ಮಹಿಮೆಗೆ ನಿನಗಿದಿ । ರಾಗುವ ದೊರೆಗಳನ್ನುಂಟೆ ॥ (110)

ಎಂದು ಮಕುಟಬದ್ಧರೆಲ್ಲ ಕೊಂಡಾಡುತ । ತಂದು ನಿವಾಳಿಯನಿಟ್ಟು ॥
ಬಂದೆರಗಿದರು ಗಂಗಾದ್ವಾರವ ಪೊಕ್ಕು । ಬಂದ ಚಕ್ರಿಯ ಪದಯುಗಕೆ ॥ (111)

ರಾಣಿಯರೆಲ್ಲ ರಾರತಿಯೆತ್ತಿ ಸೇಸೆಯ । ಪ್ರಾಣಕಾಂತನಿಗಿಕ್ಕಿದರು ॥
ಮಾಣದೆ ಸಕಲ ಸಾಮ್ರಾಜ್ಯ ಸುಖದಿಬಾಳು । ಜಾಣರ ದೇವನೀನೆನುತ ॥ (112)

ಇಂತು ಮಾಗಧನ ಜಯಿಸಿ ಬಂದು ಭರತೇಶ । ನಂತಃಪುರದ ಸ್ತ್ರೀಯರೊಳು ॥
ಕಂತ್ರು ಸಾಮ್ರಾಜ್ಯ ಸುಖದೊಳಿರ್ದ ಸಕಲ ದಿ । ಗಂತದೊಳಟ್ಟು ಜಸವನು ॥ (113)

ಇದು ಶ್ರುತಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯ । ಪದದೊಳು ದಶಮ ಸುಸಂಧಿ । (114)

(ಹತ್ತನೆಯ ಸಂಧಿ ಸಮಾಪ್ತಂ)

## ಹನ್ನೊಂದನೆಯ ಸಂಧಿ-

ದುರಿತ ಶತ್ರುಗಳ ನಿರ್ಧಾಟಿಸಿ ಕೈವಲ್ಯ । ಕರನಾಗಿ ಕಾರಕಳದೊಳು ॥
ಸಿರಿವೆತ್ತು ಮೈದೋರುವ ಗುಮ್ಮಟಸ್ವಾಮಿ । ಶರಣಾಗೆನಗೆ ಸರ್ವೇಶ ॥ (1)

ದಕ್ಷಿಣ ದಿಗ್ವಿಜಯವ ಮಾಡಬೇಕೆಂ । ದಾ ಕ್ಷಿತಿಪಾಲ ದಂಡೆತ್ತಿ ॥
ಆ ಕ್ಷಣದೊಳು ತೆರಳದ ನೆಡಬಲದೊಳ । ಗೀಕ್ಷಿಸುತೆರಡು ಸಾಗರವ ॥ (2)

ನಡುವೆ ಪಲವು ದೇಶದರಸರ ಸಾಧಿಸಿ । ಪಡೆವಳನವರ ಕೈಯಿಂದ ॥
ಕೊಡಿಸುವ ಕಪ್ಪವ ಕೈಕೊಳ್ಳುತೆಯ್ದಿದ । ಕಡುವೇಗದೊಳು ಸಾರ್ವಭೌಮ । (3)

ಇಂತು ಬಂದಾ ದಕ್ಷಿಣಾಬ್ಧಿಯ ಶ್ರೀ ವೈಜ । ಯಂತವೆಂದೆಂಬ ದ್ವಾರದೊಳು ॥
ನಿಂತು ಬೀಡನು ಬಿಡಿಸಿದಾತೆರಪನು ನೋಡಿ । ಸಂತಸದಿಂ ಸಾರ್ವಭೌಮ ॥ (4)

ಮುನ್ನ ಮಾಗಧನ ಸಾಧಿಸಿದಂತೆ ಪೊಕ್ಕನು । ಮುನ್ನೀರನು ರಥವೇರಿ ॥
ಉನ್ನತಾವರತನುವೆಂಬ ಮಾರನು ಕಡು । ಬಿನ್ನಾಣದಿಂದೆರಗಿದ ॥ (5)

ಅವನ ಕೈಯಿಂದವ ಭೇದ್ಯ ವೆಸರ ವಜ್ರ । ಕವಚ ಚೂಡಾಮಣಿ ರತ್ನ ।
ದಿವಿಜ ಲೋಕದ ರನ್ನಗಡಗವ ತೆಕ್ಕೊಂ । ಡವನ ಮನ್ನಿಸಿ ಕಳುಹಿದನು ॥ (6)

ಅಲ್ಲಿಂದ ಮರಳ ಬಂದಾಲವಣಾಬ್ಧಿಯ । ಕ್ಷುಲ್ಲಕಾಬ್ಧಿಯ ಮಧ್ಯದೊಳು ॥
ಸಲ್ಲೀಲೆಯಿಂ ಸೇನೆ ನಡೆದುದು ದೊರೆಗಳ । ನೆಲ್ಲರ ಕಾಣಿಸಿ ಕೊಳುತ ॥ (7)

ಘನ ಸಾಮ್ರ ಚಂದನ ನಾಳಕೇರಂಗಳ । ವನದೊಳು ತಾಂಬೂಲದಲ್ಲಿ ॥
ವನದೊಳು ವಿಜಯ ಗಜಂಗಳ ನಡಸಿದ । ಜನಪತಿ ಕಡುವೇಗದಿಂದ ॥ (8)

ಬಂದು ಸಿಂಧು ದ್ವಾರದೊಳ ಪೊಕ್ಕು ನೃಪನಾ । ನಂದದಿಂ ವೇಲಾವನದ ॥
ಚಂದವ ನೋಡುತ ಕ್ರಮುಕ ಚಂಪಕ ತಾಳ । ವೃಂದದ ಶ್ರೀತಾಳಗಳ ॥ (9)

ಆ ವನದೊಳು ತನ್ನ ವಿಜಯ ಕಟಕವನು । ದೇವನಿರಿಸಿ ಮೊದಲಂತೆ ॥
ಆವನಧಿಯೊಳು ರಥವ ನಡೆಸಿದ ನಿ । ಸ್ನೀ ವೇಳ್ವನವನ ಸಾಹಸವ ॥ (10)

ಮೊದಲಂತೆ ಬಾಣ ಪ್ರಯೋಗವ ಮಾಡಲು । ಬೆದರಿ ಪ್ರಭಸಾಮರನು ॥
ಮಾದವನೆಲ್ಲವ ಬಿಟ್ಟು ತನ್ನ ಸರ್ವಸ್ವವ । ಕದನ ಕೋವಿದಗೆ ತಂದಿತ್ತ ॥ (11)

ಅವನ ಕೈಯಿಂದ ಕಪ್ಪವನು ತೆಕ್ಕೊಂ । ಡವನ ಮನ್ನಿಸಿ ಬೀಳ್ಕೊಟ್ಟು ॥
ನವನಿಧಿ ಪತಿ ತೆರಳದನತಿ ಮುದದಿಂದ । ಭುವನ ಕಚ್ಚರಿಯ ಪುಟ್ಟಿಸುತ ॥ (12)

ಬಂದನು ಸಿಂಧು ನದಿಯು ತಡಿವಿಡಿದದ । ರಂದವ ನೋಡುತ ನೃಪನು ॥
ಮಂದಿ ಕುದುರೆ ಗಜ ರಥ ಕಡ್ಯಂಗಳ । ಸಂದಣಿಯೊಳು ಸೊಬಗಿಂದ ॥ (13)

ವಿಜಯಾರ್ಧ ಗಿರಿಯು ಸನ್ನಿಧಿಗೆಯ್ತಂದನು । ನಿಜಬಲಗೂಡಿ ಚಕ್ರೇಶ ॥
ಭುಜಬಲದಿಂದ ದೊರೆಗಳ [ಸೋಲಿಸಿ] ಕೊಳ್ಳು । ತಜಿತಂಜಯು ರಥವೇರಿ ॥ (14)

ಗಗನವ ಚುಂಬಿಪ ಮಣಿಕೂಟಗಳಿಂದ । ಸೊಗಯಿಪ ವನವೇದಿಕೆಯಿಂದ ॥
ಬಗೆ ಗೊಳಿಸುವ ಖಚರ ಶ್ರೇಣಿಯಿಂದಾ । ನಗವೊಪ್ಪುತಿಹುದೇನನೆಂಬೆ ॥ (15)

ಆವನ ವೇದಿಕೆಯಿಂದೊಳ ಪೊಗುವಾಗ ಬಂ । ದಾವರಿಸಿತು ತಂಗಾಳಿ ॥
ಭೂವರನ ಬಳಿಯು ರಂಗಾಲಿಂಗನದಿಂದ । ಪಾವನ ಗಂಧವಾಯ್ತುದಕೆ ॥ (16)

ವನವೇದಿಕೆಯು ಮಣಿದೋರಣದೊಳ ಪೊಕ್ಕು । ಮನುಜೇಶವನವೀಥಿವಿಡಿದು ॥
ಅನುಪಮ ಗಿರಿಯು ಮಧ್ಯದ ಕೂಟ ಸನ್ನಿಧಿ । ಗನುಚಾರಣರೊಡನೆಯ್ತಂದ ॥ (17)

ಭರತೇಶ್ವರ ಚಕ್ರಿ ಬಂದುನಿಂದಾಗಿರಿ । ವರಕಭಿ ಮುಖವಾಗಿ ಧನುವ ॥
ಕರದೊಳಗಾಂತು ಶರವ ಸಂಧಾನಿಸೆ । ಪರಿದುದು ಗಗನ ಮಾರ್ಗದೊಳು ॥ (18)

ಅದು ಪೋಗಿಯಾಗಿರಿಯು ಮಧ್ಯಕೂಟದ ಮಣಿ । ಸದನದ ರಾಜಾಂಗಣದೊಳು ॥
ಪೊದಲು ಮಾಗಧನಿಗೆ ಪೇಳ್ದಂತೆ ಬೀಳಲಂ । ತದ ಕಂಡ ವಿಜಯಾರ್ಧನೆಂಬ ॥ (19)

ದೇವನು ಮುನ್ನಿನಂದದಿ ರನ್ನದರ್ಘ್ಯವ । ತಾವಿಡಿದತಿ ಭಕ್ತಿಯಿಂದ ॥
ದೇವ ಸಮೂಹದೊಡನೆ ಬಂದು ಕಂಡಾ । ಭೂವರನಡಿಗೆರಗಿದನು ॥ (20)

ಶಿರದ ಮಕುಟವೆ ಶಿಖರದ ಮುತ್ತಿನ ಹಾರ । ಪರಿವನಿರ್ಝರದಂತಿರಲು ॥
ಕರದ ಕಟಕವೆ ಕಟಕದಂತಿರಲಾ । ಗಿರಿಯಂತೆ ಬಂದೆರಗಿದನು ॥ (21)

ಬಂದು ಕಾಲ್ಗೆರಗಿ ಕೈಮುಗಿದು ಕಪ್ಪವ ಕೊಟ್ಟು । ನಿಂದ ಕುಮಾರನ ಕಂಡು ॥
ಮಂದಹಾಸದೊಳತ್ತ ಬಾಯೆಂದು ಕರೆದಾ ನಂದದಿ ಭದ್ರಾಸನವನು ॥ (22)

ಕೊಡಿಸಲು ಕುಳಿತಾ ವಿಜಯಾರ್ಧ ದೇವನು । ನುಡಿದನಿಂತೆಂದು ನೃಪನೊಳು ॥
ಪೊಡವಿಯೊಳಗೆ ನಿನ್ನಂತೆ ಸತ್ಪುಣ್ಯವ । ಪಡೆದವರಾರು ಚಕ್ರೇಶ ॥ (23)

ಚಕ್ರವರ್ತಿಗಳಲ್ಲದೀಗಿರಿಯನು ಪೊ । ಕ್ಕಾಕ್ರಮಿಸುವರಳವಲ್ಲ ॥
ವಿಕ್ರಮಶಾಲಿ ನಾನಾರಿಗು ಮಣಿಯೆನು । ಚಕ್ರೇಶ ನಿನಗಿದಿರಿಲ್ಲ ॥ (24)

ನಿನ್ನಾಜ್ಞೆಯೆಂಬ ಹೂಮಾಲೆಯು ಧರಿಸಿದೆ । ನೆನ್ನ ಮಸ್ತಕದೊಳಗೆಂದು ॥
ಬಿನ್ನಹವನು ಮಾಡಿ ವಿಜಯಾಭಿಷೇಕವ । ತನ್ನಕೈಯಾರೆ ಮಾಡಿದನು ॥ (25)

ಸಾರರತ್ನದ ಭೃಂಗಾರ ಶ್ವೇತಾತಪ । ವಾರಣ ಸಿಂಹವನ ॥
ಕ್ಷೀರಾಬ್ಧಿಯು ತೆರೆಯಂದದೊಳೊಪ್ಪುವ । ಚಾರು ಚಾಮರಗಳನಿತ್ತು ॥ (26)

ತನ್ನಾಜ್ಞೆಗಳವಟ್ಟ ವಿಜಯಾರ್ಧ ದೇವನ ಮನ್ನಿಸಿ ಬೀಳ್ಕೊಟ್ಟು ಬಳಿಕ ॥
ಮುನ್ನ ಪೂಜಿಸಿದಂತೆ ಚಕ್ರರತ್ನವನಲ್ಲಿ । ಬಿನ್ನಾಣದಿಂದ ಪೂಜಿಸಿಪ ॥ (27)

ವಿಜಯಾರ್ಧ ಜಯವೆನಗಾದುದಿನ್ನುತ್ತರ । ವಿಜಯಾರ್ಧ ಜಯವಾಗಲೆನಗೆ ॥
ನಿಜರಾಜ್ಯ ಸಾಮ್ರಾಜ್ಯವೆಂದು ಚಿಂತಿಸಿ ದಿ । ಗ್ವಿಜಯಕೆ ಮಗುಳ್ದ ಚಕ್ರೇಶ (28)

ಮುನ್ನ ಬಂದಂದದಿ ವನವೀಥಿಯೊಳು ಬಂದು । ರನ್ನದೋರಣದ ಬಾಗಿಲೊಳು ॥
ತನ್ನ ಬಲವನು ನಡೆಸಿ ಪೊರಮಟ್ಟನು । ಚೆನ್ನಿಗರರಸ ಸಂತಸದಿ ॥ (29)

ಅಲ್ಲಿ ವಿಶಾಲ ಮಪ್ಪೆಡೆಯೊಳು ಪಾಳ್ಯವ । ನಿಲ್ಲಿಸಿ ಯೆಡೆಬೀಡ ಬಿಡಿಸಿ ॥
ಅಲ್ಲಿಗೆ ಗಂಗಾ ಸಿಂಧು ಮಧ್ಯದ ಭೂ । ವಲ್ಲಭರೈತಂದರಾಗ ॥ (30)

ಕುರುರಾಜ ಮುಂತಾದ ದೊರೆಗಳೆಲ್ಲರು ಮುನ್ನ । ಪುರುಪರಮೇಶನೊಳಾದ ॥
ವರಭಕ್ತಿ ಸ್ನೇಹದಿಂ ಬಂದು ಕಂಡರು ಬಲ । ವೆರಸಿ ಚಕ್ರೇಶ್ವರ ನಾಗ ॥ (31)

ಒಡೆವುದು ವಜ್ರ ಕವಾಟವ ಖಚರಾದ್ರಿ । ಗಡವುರ್ದುಮಾ ಸಿಂಧು ನದಿಯು ॥
ಗಡಿಯು ಮ್ಲೇಂಛರನು ಸಾಧಿಸ ಬೇಕು ನೀನಿಲ್ಲಿ । ತಡೆದಿರು ಬೆಸಸೆಮಗೆಂದು ॥ (32)

ಉತ್ತರ ಭರತ ಪ್ರೊಂವನೆ ನೀನು ಸಾಧಿಸು । ಮತ್ತುಳಿದವ ನಾವು ನಿನ್ನ ॥
ಚಿತ್ತಕೆ ಬರುವಂತೆ ಸಾಧಿಸುವೆವು ಭೂ । ಪೋತ್ತಮ ಕೊಡು ನೀನೇ ಬೆಸನ ॥ (33)

ಎಂದು ಪೇಳುವ ಸಮಯದೊಳೊರ್ವ ದೇವನು । ಬಂದು ಕಂಡನು ಚಕ್ರಧರನ ॥
ಅಂದು ತನ್ನಯ ಮಣಿ ಮಕುಟ ಕಿರಣ ಮಕ । ರಂದ ರಂಜಿತ ತತ್ಪದ್ಮವನು ॥ (34)

ದೇವಕುಲದೊಳು ಪುಟ್ಟಿದರೇನು ಪುಣ್ಯಪ್ರ । ಭಾವ ನಿನ್ನೊಳಗಿದ್ದುದರಿಂ ॥
ನಾವೆಲ್ಲರು ನಿನ್ನ ಸೇವಕರಾದೆವು । ಭಾವಿ ಭರತ ಚಕ್ರೇಶ ॥ (35)

ನಿನ್ನ ತೇಜವೆ ಚಕ್ರ ರತ್ನ ದಾಕಾರದಿಂ । ದುನ್ನತಿಕೆಯ ನಾಂತುದರಸ ॥
ನಿನ್ನಯ ದಂಡನೀತಿಯೆ ದಂಡರತ್ನವಾ । ಯ್ತಿನ್ನೆರಗದರಾರು ನಿನಗೆ ॥ (36)

ಕೃತ್ರಮಾಲನೆಂಬ ಪೆಸರ ದೇವನೀ ಗಿರಿ । ಯತಿಮಿಶ್ರ ಗುಹೆಯ ಕೂಟದೊಳು ॥
ಸತತ ನಿವಾಸವೀ ಗಿರಿವರ ದೊಳಗಿ । ರ್ದತಿ ರಹಸ್ಯವನು ನಾ ಬಲ್ಲೆ ॥ (37)

ಬೆಲೆಯಿಲ್ಲ ಭುವನದೊಳೀ ರನ್ನದುಡಿಗೆಗೆ । ಪಲವು ಮಾತೇನು ಚಕ್ರೇಶ ॥
ಒಲಿದೊಪ್ಪುಗೊಳ್ಳೆಂದು ಪದಿನಾಲ್ಕು ಭೂಷಣಂ । ಗಳನು ಕಾಣಿಕೆಯನುಮಾಡಿ ॥ (38)

ಆ ವಿಜಯಾರ್ಧ ಗುಹಾದ್ವಾರದೊಳು ಪೋಪ । ಭಾವವನೆಲ್ಲ ಪೇಳುವೆನು ॥
ಭೂವರ ಕೇಳ ಮನ್ನಿಸಿ ಬೀಳ್ಕೊಟ್ಟನಾ । ದೇವನ ಸಂತೋಷದಿಂದ ॥ (39)

ಅನಿತರೊಳಗೆ ಸೇನಾಪತಿ ಕಂಡನು । ಪಾರ್ಥಿವರ ಸಂದಣಿಯೊಳಗೆ ॥
ಮನು ವಂಶ ತಿಲಕನಿಗಾನತರಾದ ರಾ । ಜನಪತಿಗಳು ಕಾಣ್ಕೆಯಿಕ್ಕೆ ॥ (40)

ಅವರ ಕ್ಷೇಮವನು ವಿಚಾರಿಸಿ ವೀಳ್ಯವ । ನವರಿಗೆ ಕೊಡಿಸಿ ಬೀಡುಗಳ ॥
ಅವರಿಗೆ ಮಾಡಿಸಿ ಸೇನಾಪತಿಯು ಮೊಗ । ವನು ನೋಡಿ ನುಡಿದ ನಿಂತೆಂದು ॥ (41)

ಕೃತಮಾಲ ಪೇಳಿದು ಪಾಯವನೆಲ್ಲವ । ನತಿಮುದದಿಂ ಪೇಳ ಗಿರಿಯ ॥
ವಿತತ ಸುವಜ್ರ ಕವಾಟವ ನೊಡೆದದ । ರತಿತಾಪವಾರುವ ತನಕ ॥ (42)

ಪಡುವಣ ಮ್ಲೇಂಛ ಖಂಡವನು ಸಾಧಿಸು ನೀನೀ । ಪಡೆಯೊಡೆಗೂಡಿಯೆಂದೆನಲು ॥
ಪಡಿವಾಳನಶ್ವ ರತ್ನವನೇರಿ ನಡೆದನಾ । ಪಿಡಿದುದ್ದಂಡ ರತ್ನವನು ॥ (43)

ಸಿಂಧು ನದಿಯ ವನವೇದಿಕೆಯೊಳು ಪೋಗಿ । ಬಂಧುರ ಗಿರಿಯ ವೇದಿಕೆಯ ॥
ಸೌಂದರ ಮೂಡಣ ಮಣಿಸೋಪಾನವ । ನಂದೇರಿದನು ಮುದದಿಂದ । (44)

ಬಲವನೆಲ್ಲವ ಪಡುವಣ ಸೋಪಾನದಿಂ । ದಲಘು ವಿಕ್ರಮಿಯಿರವೇಳ್ದು ॥
ತಳುವದೆ ಮ್ಲೇಂಛ ಕಾಂಡಕೆ ಕಳುಹಿಸಿತಾನೆ । ಗೆಲವಾಂತು ಬಂದಾಗುವಹೆಯು ॥ (45)

ಸನ್ನಿಧಿಯೊಳು ಪಶ್ಚಿಮಾಭಿ ಮುಖದಿ ನಿಂದು । ತನ್ನಾಣ್ಮ ಭರತೇಶ್ವರಗೆ ॥
ಇನ್ನುತ್ತರೋತ್ತರ ಜಯವಾಗಲೆಂದು ತಾ । ನುನ್ನತ ದಂಡ ರತ್ನವನು ॥ (46)

ಬಲಗೈಯೊಳಾಂತು ಪೊಡೆಯಲು ವಜ್ರದ ಪಡಿ । ಘಳಲನೆ ತೆರೆಯೆ ಭೋರ್ಗರೆದು ॥
ಅಳುರ್ವ ಜ್ವಾಲೆಯು ಗುಹೆಯಿಂದ ಪೊರಮಟ್ಟು । ತಿಳಿಯುಸಲ್ಲವನು ವ್ಯಾಪಿಸಿತು ॥ (47)

ಪ್ರಳಯ ಕಾಲದ ಬರಸಿಡಿಲ ಧ್ವನಿಯೊ ನಭ । ಎಳೆಗುರುಳ್ದುದೋ ಗಿರಿಶಿಖರ ॥
ತಳುವದೆ ಬಿರಿದುದೊ ಎಂಬಂತನರ ಘೋಷ । ಮೊಳಗಿತು ವಾರ್ಧಿಯಂದದೊಳು ॥ (48)

ಪಡಿಯು ಸಂಪುಟಗಳು ಜೇರ್ಗರೆಯಲು ತಾನು । ಪೊಡೆದ ಭರಕೆ ಗಿರಿನೊಂದು ॥
ನಡನಡ ನಡುಗಿ ನರಳ್ವ ಮಾಳ್ಕೆಯೊ ಯೆಂದು । ಪಡೆವಳ ಬಗೆದನಾಕ್ಷಣದಿ ॥ (49)

ನೊಂದ ಭರಕೆಯಾಗಿಗಿ ನಿಡುಸುಯಿಲಿಡು । ವಂದದೊಳಾ ಗುಹೆಯಿಂದ ॥
ಮುಂದಕೆ ಸೆಕೆ ಪೊರಮಡುವನಿತರೊಳಶ್ವ । ವಂದು ದ್ವಾದಶಯೋಜನವನು ॥ (50)

ಉಲ್ಲಂಘಿಸಿತೇನಲದರ ವೇಗವನೆಂತು । ಸೊಲ್ಲಿಪೆನಂತಿಂತೆಂದು ॥
ಬಲ್ಲವರದ ಕಶ್ವರತ್ನವೆಂದೇತಕೆ । ಸೊಲ್ಲಿಪರಂತಲ್ಲದೊಡೆ ॥ (51)

ತುರಗ ರತ್ನದ ಸೇನಾಪತಿ ರತ್ನದ । ಪೊರೆಯೊಳು ವ್ಯೆಗಾಪಾಗಿ ॥
ಇರುತಿರ್ದ ದೇವತೆಗಳ ಬಲದಿಂದಾ । ಗಿರಿಯ ವೇದಿಕೆಯೊಳು ಬಂದು ॥ (52)

ಆ ಸಿಂಧು ನದಿಯ ದಕ್ಷಿಣ ದಿಗ್ಭಾಗದ । ಭಾಸುರ ವನವೇದಿಕೆಯ ॥
ಲೇಸಾದ ತೋರಣ ದ್ವಾರದಿಂ ನೂಕ್ಕು ವಿ । ಲಾಸದಿ ಮ್ಲೇಂಛ ಖಂಡವನು ॥ (53)

ಗ್ರಾಮ ಸೀಮಾ ರಾಮಪುರ ಖೇಡ ಖರ್ವಡ । ಸೀಮೆಯ ಮ್ಲೇಂಛರೆಲ್ಲರನು ॥
ತಾಮಸವಿಲ್ಲದೆ ಕಾಣಿಸಿ ಕೊಂಡು ಮ । ತ್ತಾಮಹಿಯೊಳು ಸಾರವೆನಿಪ ॥ (54)

ಧನಕನಕಶ್ವ ಗಜೇಂದ್ರ ಮುಂತಾದ ವಾ । ಹನ ದಿವ್ಯ ಭೂಷಣ ರತ್ನ ॥
ವನಿತಾ ರತ್ನವೆರಸು ಮ್ಲೇಂಛ ರಾಜರ । ಘನತೇಜೋನಿಧಿ ಕರಕೊಂಡು ॥ (55)

ಮುನ್ನಿನಂದದಿ ಸಿಂಧು ವೇದಿಕೆ ಯೊಳು ಬಂ । ದುನ್ನತ ವಿಜಯಾರ್ಧಗಿರಿಯ ॥
ಸನ್ನಿಧಿ ಸೋಪಾನ ವೇದಿಕೆ ಜಗಲಿಯ । ಮನ್ನೆಯನೇರಿ ಬಪ್ಪಾಗ ॥ (56)

ಆ ಗುಹೆಯೊಳಗಣ ತಾಪತಣಿದು ತಂ । ಪಾಗೆ ಷಣ್ಮಾಸ ಪರ್ಯಂತ ॥
ಆ ಗುಹಾದ್ವಾರಕ್ಕೆ ಕಾಪಿಟ್ಟು ಬಂದನು । ಬೇಗ ವಿಜಯ ಶಿಬಿರಕ್ಕೆ ॥ (57)

ಕಂಡು ಚಕ್ರಿಗೆ ವಿನಮಿತನಾಗಿ ಯಾ ಮ್ಲೇಂಛ । ಖಂಡದರಸುಗಳ ಕೈಯ ॥
ಕೊಂಡ ಕಪ್ಪಗಳನು ಕೊಡಿಸಿಯವರ ಪೆಸ । ರ್ಗೊಂಡು ಕಾಣಿಸಿದ ಸೇನೇಶ ॥ (58)

ಅವರವರಿಗೆ ತಕ್ಕ ವಿನಯ ಸನ್ಮಾನ ದಿಂ । ದವನಿ ಪಾಲಕನು ಸಂತೈಸಿ ॥
ಅವರನು ತನ್ನಾಜ್ಞೆಗಳ ವಟ್ಟು ಬರ್ಪಂತೆ । ಸುವಿವೇಕಿ ಬೀಳ್ಕೊಟ್ಟನಾಗ ॥ (59)

ಉತ್ತರ ದಿಗ್ವಿಜಯವ ಮಾಡಬೇಕೆಂದು । ಉತ್ತಮವಾದ ಲಗ್ನದೊಳು ॥
ಮತ್ತೆ ವಿಜಯ ಭೇರಿಯ ಪೊಯ್ಯಲಾ ಧ್ವನಿ । ಪತ್ತು ದಿಕ್ತಟವ ವ್ಯಾಪಿಸಿತು ॥ (60)

ವಿಜಯ ಲಕ್ಷ್ಮಿಯ ಪರಿಣಯಕೆ ಪೋಪಂದದಿ । ವಿಜಯ ಪರ್ವತವೆಂಬ ಪೆಸರ ॥
ಗಜವೇರಿ ವೀರ ಶೃಂಗಾರದಿ ನಡೆದನು । ನಿಜಸೇನೆಯೊಡಗೂಡಿ ಚಕ್ರಿ ॥ (61)

ಆಗಿರಿ ನಿಕಟಕ್ಕೆ ತನ್ನ ಕಟಕವನು । ರಾಗದಿಂದಭಿಮುಖವಾಗಿ ॥
ಪೋಗಿಯದ . . . . ಮಯಸೋಸವ । ಬೇಗದೊಳ್ಗಿರಿತೇನೆಂಬೆ ॥ (62)

ಬಳಿಕ ಪಶ್ಚಿಮದಿಕ್ಕಿಗಭಿಮುಖವಾಗಿ ಅ । ಖಿಲ ಬಲದೊಡಗೂಡಿ ತೆರಳಿ ॥
ಕಲಿಗಳ ದೇವನಾ ವಜ್ರಕವಾಟದ । ಬಳಿಗೆಯ್ತಂದು ನೋಡಿದನು ॥ (63)

ಯೋಜನ ದ್ವಾದಶ ವಿಸ್ತಾರ ಪಂಚ ಷ । ಡ್ಯೋಜನಯಾವೋತ್ಸೇಧ ॥
ಯೋಜನಾಷ್ಟಕವಾ ವಜ್ರ ಕವಾಟಕೆ । ರಾಜಿಸುತಿಹುದೇನನೆಂಬೆ ॥ (64)

ನಾನಾಮಣಿಮಯ ದ್ವಾರಬಂಧಗಳಿಂದ । ತಾನೊಪ್ಪುವವದರಡಿಯ ॥
ಪೀನ ಪ್ರವಾಹವಾ ಸಿಂಧು ನದಿಯದೊಂದ । ನೂನತೆಯೊಳಗೆಯ್ದುತಿಹುದು ॥ (65)

ದೇಹಲಿ ಅಡಿಯೊಳಗಾ ಸಿಂಧು ನದಿಯ ಪ್ರ । ವಾಹಾಷ್ಟಯೋಜನ ವ್ಯಾಸ ॥
ದೇಹದಿಂದೆಯ್ದುವ್ರು ವದರ ಸೊಬಗನೆಂತು । ಊಹಿಸಿ ಪೇಳ್ವೆನಿಂತೆಂದು ॥ (66)

ಕುತಪದಿಂ ಸದ್ಗತಿಯಾಗದೆಂಬೀ ಜಿನ । ಮತದೋಜೆಯನು ಕೇಳ್ದರಂತೆ ॥
ಕುತಪವ ಸೋಂಕದೆಡೆಯೊಳ್ಪೈದಿತಾ ಸಿಂಧು । ಅತಿವೇಗದಿಂ ಪ್ರೊರಮಟ್ಟು ॥ (67)

ಅದರೊಳ್ಗೂಭಾಗದೊಳಗೆ ಕತ್ತಲೆ ದುಂಬಿ । ಪುದಿದಿದ್ದುರ್ದರಿಂದ ಗುಹೆಗೆ ॥
ಪದವಿಟ್ಟು ಪೋಗಲಣ್ಮವ ಸೇನೆಯ ಕಂಡು । ಚದುರ ಚಕ್ರೇಶ ಚಿಂತಿಸಿದ ॥ (68)

ಆಂಧಾತ್ರವಾದ ಗುಹೆಯ ಕತ್ತಲೆಯನು । ಪಾಯದಿ ಪರಿಹರಿಸುವರೆ ॥
ರಾಯ ಪುರೋಹಿತನೊಳು ಪೇಳಲವನೊಂದು । ಪಾಯವ ಪೇಳ್ದನಿಂತೆಂದು ॥ (69)

ಎರಡು ಭಿತ್ತಿಗಳೊಳು ಚಂದ್ರಾದಿತ್ಯರ । ಬರೆಸಿ ಕಾಣಿಸಿ ರತ್ನದಿಂದ ॥
ತರುವಾಯದಿಂದೊಂದು ಯೋಜನವನಂ । ತರಿಸಿಪೋಪುದು ಲೇಸೆನಲು ॥ (70)

ಎನಲಂತೆಗೆಯ್ಸಲಾ ಗುಹೆಯ ಕತ್ತಲೆ ಪೋಗೆ । ಮನವೊಲ್ದು ನಡೆದುದಾಸೇನೆ ॥
ಅನುಪಮ ಸಿಂಧುವಿನುಭಯ ತಟದೊಳಾ । ಮನುಜೇಶನಪ್ಪಣೆಯಿಂದ ॥ (71)

ಬಿಸಿಲು ಬೆಳ್ದಿಂಗಳಂ ತಾಗಲಾಗುಹೆಯೊಳು । ಪಸರಿಸಿದಾ ಕತ್ತಲೆಯು ॥
ದೆಸೆಗೆಟ್ಟು ಪೋಗಲಾ ಚಕ್ರರತ್ನದ ಕಾಂತಿ । ಪಸರಿಸಿತತಿಶೋಭೆವೆತ್ತು ॥ (72)

ಎರಡುಯೋಜನದಗಲದೊಳಾಗುಹೆಯೊ । ಳೆರಡು ತಡಿಯೊಳಾ ಸೇನೆ ॥
ಭರದಿಂದ ಕೆಲವು ಪಯಣವನು ಬರಲಲ್ಲಿ । ಎರಡು ಭಿತ್ತಿಗಳ ಕುಂಡದೊಳು ॥ (73)

ಜನಿಯಿಸಿ ಸಿಂಧುನದಿಯ ದುನ್ಮ । ಘ್ನನಿಮ . . . . ವೆಂಬ ನದಿಗಳ ॥
ಮನುಜೇಶ ಜೋಡನು ಬಿಡಿಸಿದ ತಡಿಯೊಳು । ಮನವೊಲ್ದು ನೋಡುತ ಜಲವ ॥ (74)

ಒಂದರ ನೀರೊಳು ಗುಂಡಹಾಕಲು ತೇಲ್ವು । ದೊಂದ . . . . ಳು ಬೆಂಡ ॥
ತಂದು ಹಾಕಲು ಮುಳುಗುವದೀಗಲೀ ಜಲ । ದಂದವೇನೆಂದು ನೋಡಿದನು ॥ (75)

ಆ ನದಿಗಳ ವೈಷಮ್ಯವ ಕಂಡು ಮ । ತ್ತಾ ನದಿಗಳ ದಾಂಟುವರೆ ॥
ಏನುಪಾಯವ ಮಾಡಬಹುದೆಂದು ಕರೆಸಿದ । ತಾನುಸ್ಥಪತಿ ರತ್ನವನು ॥ (76)

ಅವನಿಗೆ ತೋಱಲೀ ಜಲದ ವೈಷಮ್ಯವ । ನವನಿಂತೆಂದು ಪೇಳ್ದನು ॥
ಇವರಡಿಯೊಳ್ಗಾಳ ಯೂರ್ಧ್ವಾರ್ಧೋಮುಖವಾಗಿ । ಭುವನೇಶ ಚರಿಸುವುದೆನಲು ॥ (77)

ಬಿನ್ನವಿಸಲು ಕೇಳ್ದು ದೇವಾರಣ್ಯದಿಂ । ದುನ್ನತ ತರುಗಳ ತಱಿಸಿ ॥
ಚೆನ್ನಾಗಿ ಸಾರವ ಕಟ್ಟಿಸಿ ನಡೆಸಿದ । ತನ್ನ ಸೇನೆಯನದರೊಳಗೆ ॥ (78)

ಕೆಲವು ಪಯಣದಿಂದುತ್ತರ ದ್ವಾರದ । ಬಳಗೈ ತಂದು ಚಕ್ರೇಶ ॥
ಘಳಿಲನಾನೆಗಳಿಂದ ತೆಗೆಯಿಸಿ ಬಾಗಿಲ । ಕಳಯನು ಪೊರಮಟ್ಟನಾಗ ॥ (79)

ಅಂತಾ ಗುಹೆಯಿಂದ ಪೊರಮಟ್ಟು ವಿಜಯಾರ್ಧೋ । ಪಾಂತದೊಳ್ಬೀಡನು ಬಿಡಿಸಿ ॥
ಸಂತೈಸಿ ಬಲವನು ಮುನ್ನಿನಂದದಿ ಬೇಗ । ತಾಂತೆರಳ್ದ ನುತ್ಸವದಿ ॥ (80)

ಪಡುವಣ ಮ್ಲೇಂಛ ಖಂಡವನು ಸಾಧಿಸಲೆಂದು । ಪಡೆವಳಬಲದೊಡನೈದಿ ॥
ನಡೆಯದೆ ಮೊದಲಂತೆ ಸಾಧಿಸಿ ಯವನಮೋ । ಲಡಿಗೆಱಗಿಸಿದ ಮ್ಲೇಂಛರನು ॥ (81)

ಅಲ್ಲಿಂದ ಬಳಿಕ ಮಧ್ಯಮ ಮ್ಲೇಂಛ ಖಂಡಕೆ । ಸಲ್ಲೀಲೆಯಿಂ ಬಲಗೂಡಿ ॥
ಮೆಲ್ಲನೆ ಚಕ್ರೇಶ ಬರೆ ಮ್ಲೇಂಛರಾಜರು । ತಲ್ಲಣಿಸಿದರದ ಕಂಡು ॥ (82)

ಗಂಡರಗಂಡ ಷಟ್ಖಂಡ . . . . ಕರಲ ದೋ । ರ್ದಂಡ ಮಂಡಲಿಕರಗಂಡ ॥
ಕಂಡು ಕಾಲ್ಗೆಱಗಿದ ಭೂ ಭುಜರತ್ನ ಕ । ರಂಡ ವಿಜಯ ದೋರ್ದಂಡ ॥ (83)

ಪಂಡಿತಜನ ಪುಂಡರೀಕ ಮಾರ್ತಾಂಡ ಪ್ರ । ಚಂಡವಿಕ್ರಮಿ ಪಂಚಕಾಂಡ ॥
ಪುಂಡರೀಕಾಕ್ಷಿಯರಿಗೆ ಪುಷ್ಪಕೋದಂಡ । ಚಂಡಾರಿಗಿರಿ ವಜ್ರದಂಡ ॥ (84)

ಎಂದು ವಂದಿಗಳು ಕೈಯೆತ್ತಿ ಕೊಂಡಾಡಲು । ದುಂದುಭಿಗಳು ಸೂಳೈಸೆ ॥
ಮಂದಿ ಕುದುರೆ ಗಜಯೂಥಪದಾಹತಿ । ಯಿಂದ ಕಂಪಿಸಲು ಭೂಭಾಗ ॥ (85)

ಬರೆಕಂಡು ಹಾಸ್ತಿಕ ಧಾನುಷ್ಕ ಪಾದಾ । ತರವರ್ಬಲಯುತರಿದಿರ್ಬಂದು ॥
ಭರದಿ ಚೇಲಾತವರ್ತರು ತಾಗಿಕಾದಿದ । ರರಸನ ಬಲದೊಳು ಹೋರಿ ॥ (86)

ಅನಿತರೊಳಗೆ ಮಂತ್ರಿಗಳು ಮಾರ್ಕಂಡಿಂ । ತೆಂದಾಡಿದರವರೊಡನೆ ॥
ವನಧಿಯೊಳರ್ದ ವ್ಯಂತರರ ಸಾಧಿಸಿಗಿರಿ । ವನದುರ್ಗಗಳನು ತೆಕ್ಕೊಂಡು ॥ (87)

ಭರದಿಂದ ವಜ್ರಕವಾಟವನೊಡೆಯಾ । ಗಿರಿಯಗುಹೆಯ ದಾಂಟಿಬಂದ ॥
ಭರತೇಶ್ವರ ಚಕ್ರವರ್ತಿಯೊಡನೆ ಕಾದಲು ಸಂ । ಗರದೊಳು ಗೆಲವಕ್ಕೆ ನಿಮಗೆ ॥ (88)

ಗಂಡಗರ್ವವ ಬಿಟ್ಟು ಕಪ್ಪವ ಕೊಟ್ಟೀಗ । ಕಂಡು ಬಾಳ್ವುದು ಹಿತವೆಂದು ॥
ಕಂಡುದ ಪೇಳ್ದಿವು ನಮ್ಮಿಂದ ತಪ್ಪಿಲ್ಲ । ದಿಂಡೆಯ ತನ ಬೇಡ ನಿಮಗೆ ॥ (89)

ಎನಲುದಕೇಳ ತಮ್ಮೊಳಗಿಂತು ಯೋಚಿಸಿ । ವನಸಿಂಹನ್ಯಾಯದಿನಾವು ॥
ವನಗಿರಿ ದುರ್ಗವ ಬಲಿದಿಲ್ಲಿ ನಿಂದೀ । ತನಬಲಸುಗಿವಂದದಿ ನಾವು ॥ (90)

ಡೆಂಕಣಿಯಿಂದ ಕರ್ಬೊನ್ನ ಗುಂಡುಗಳನ । ಡಂಕೆ ಪಾಷಾಣ ಬಾಣಗಳ ॥
ಬಿಂಕದ ಮಳೆಗರೆ ದೆಬ್ಬಟ್ಟಯಿವಗೆ ತ । ಳ್ಳುಂಕ ಗೊಳಿಪೆ ವೆಂದರವರು ॥ (91)

ನಮ್ಮಧಿ ದೇವತೆ ಮೇಘ ಮುಖರನಾವು । ಗಮ್ಮನಾರಾಧಿಸಿ ಬಳಕ ॥
ನಿಮ್ಮ ಬಲವನು ಹಿಮ್ಮೆಟ್ಟಿಸುವೆವು ಪೋಗಿ । ಸುಮ್ಮನೆ ಬಂದ ಹಿಟ್ಟೆಯೊಳು ॥ (92)

ಎಂದು ಪ್ರೂಜಿಸಿ ದರ್ಭಶಯನದೊಳರಲಾ । ನಂದದಿಂದಾ ದೇವತೆಗಳು ॥
ಬಂದು ನಾನಾವಿಧ ಘೋರೋಪ ಸರ್ಗವ । ನಂದು ಮಾಡಿದವೇನನೆಂಬೆ ॥ (93)

ಮುಗಿಲೊಡ್ಡು ಕತ್ತಲೆ ಕವಿದುದು ದಿಕ್ಚಕ್ರ । ಗಗನ ಭಾಗದಿ ಬರಸಿಡಿಲು ॥
ಒಗೆದು ಭಯಂಕರವಾದ ಮಿಂಚಿನ ಮಾ । ಲೆಗಳು ತೋರಿದವಾಕ್ಷಣದಿ ॥ (94)

ನೆಲನಾಕಾಶ ವೇಕಾರ್ಣವ ವಪ್ಪಂತೆ । ಬಲು ಮಳೆಗರೆಯಲಾತಂಕ ॥
ಖಲಕಾದಲದ ಕಂಡು ಸೇನಾಪತಿಯಾ । ಜಲಧಿಯೊಳ್ಚರ್ಮ ರತ್ನವನು ॥ (95)

ಅಡಿಯೊಳು ಹಾಸಿ ಸೇನೆಯನಲ್ಲಿ ಪೊಗಿಸಿ ಮೇ । ಲ್ಗಡೆಯೊಳು ಛತ್ರರತ್ನವನು ॥
ಪಿಡಿಯಿಸಿ ಚಕ್ರ ರತ್ನದ ಬೆಳಗಿಂದಾ । ಪಡೆಯುದುರ್ದಧಿಕ ಲೀಲೆಯೊಳು ॥ (96)

ಜಲಧಿಯ ಮಧ್ಯದ ಭೈತ್ರದೊಳಿರ್ಪಂತೆ । ಬಲವೆಲ್ಲವಿರಲದ ಕಂಡು ॥
ಮಲೆತರಿಮಸ್ತಕ ಶೂಲ ಪಾವನ ಕುರು । ಕುಲಾಗ್ರಣಿ ಯೆಂದೆನಿಪ ॥ (97)

ಸೋಮ ಪ್ರಭರಾಜನ ಸುಕುಮಾರ ಮ । ಹಾಮಹಿಮನು ಚರಮಾಂಗ ॥
ಭೂಮಿಯೊಳುಳ್ಳ ವೀರರ ಗಂಡ ಜಯನೆಂಬ ನಾಮದ ಕುವರನೆಯ್ತಂದು ॥ (98)

ಗಗನ ಗೋಚರ ಮಪ್ಪ ರಥನಿಕರವನಾಗ । ಸುಗುಣಸ್ಥ ಪತಿ ರತ್ನ ರಚಿಸೆ ॥
ಅಗಣಿತ ಬಲಗೂಡಿ ರಥವೇರಿ ಪೋಗಿ ಕಾ । ಳಗವ ಮಾಡಿದರವರೊಡನೆ ॥ (99)

ಕತ್ತಲೆಯೊಡ್ಡಿನಂತಿರ್ದ ಕಾರ್ಮುಗಿಲೊಡ್ಡ । ನೊತ್ತರಿಸಿದನಗ್ನಿ ಮುಖದ ॥
ಉತ್ತಮ ಬಾಣಗಳಿಂದೆಚ್ಚು ಪ್ಪೆಗಂಡು । ಮತ್ತವರೊಳು ಸೆಣಸಿದರು ॥ (100)

ಸುರಿದನು ಪುಂಖಾನು ಪುಂಖ ಬಾಣಂಗಳು । ಬೆರಸೆ ಉರಗರಾಜರೆಲ್ಲ ॥
ಪರಿದೋಡುವಂತೆ ಕಂಗೆಟ್ಟು ಕಾಲ್ಗೆಟ್ಟು ಕಾ । ತರಿಸಿ ಮೈಮರೆವಂದದೊಳು ॥ (101)

ಸಿಡಿಲನು ಸಿಡಿಲಟ್ಟುವಂತೆ ಮಿಂಚನು ಮಿಂ । ಚಡರ್ದಟ್ಟುವಂತೆ ಬಾಣಗಳು ॥
ಕಡುವೇಗದಿಂ ಪೋಗಿ ತಾಗಿದವಾತನ । ಬೆಡಗನದೇನ ಬಣ್ಣಿಪೆನು ॥ (102)

ಆಕಾಶದಿಂದ ಸೂಸುವ ತಾರೆಗಳಂತ । ನೇಕ ಶರಾಂಬು ಧಾರೆಗಳು ॥
ಭೂಕಾಂತೆಯ ಪರಿಣಯನಕೆ ಮುನ್ನ ಭಿ । ಷೇಕವ ಮಾಡಿದಂದದೊಳು ॥ (103)

ಜಯ ಶರತತಿಯನು ತಾಳಲಾರದೆ । ಭಯಗೊಂಡು ಕೆಲನಾರಲೊಡನೆ ॥
ಜಯನಿಗೆ ಜಯವಾಗೆ ನಾಗರಾಜರಿಗಪ । ಜಯವಾಯ್ತು ಸಂಗರದೊಳಗೆ ॥ (104)

ನಾನಿದ್ದು ಮೇಘಾಮರರಿಂದ ಚಕ್ರಿಯ । ಸೇನೆಗೆ ಭಂಗ ಬರ್ಪಾಗ ॥
ಪಿನೆನ್ನ ಬಹುದೆಂದು ಮೇಘ ಸ್ವರದಿನಾರ್ದು । ತಾನಟ್ಟಿದನು ಜಯಸಿಂಹ ॥ (105)

ಆಗಳಾ ಕಳಕಳವನು ಕೇಳದೇನೆಂದು । ಬೇಗ ಖಡ್ಗಕೆ ಕೈಯ ನೀಡು ॥
ವಾಗ ಚಕ್ರಿಗೆ ಪೇಳದರು ಮಂತ್ರಿಗಳು ಚೆ । ನ್ನಾಗಿ ಜಯನ ವಿಜಯವನು ॥ (106)

ಇದು ಮೇಘ ಸ್ವರದಿಂ ಜಯ ಕುವರನು ಮಾ । ಡಿದ ಸಿಂಹ ಘೋಷಣೆಯು ॥
ಅದು ಗಣಬದ್ಧದೇವರ್ಕಳ ಹುಂಕಾರ । ಚದುರರ ದೇವ ಲಾಲಿಪುದು ॥ (107)

ಎಸಲನಿತರೊಳು ಬೇಲಾತ ವರ್ತರ । ವನಿಯೊಳ್ನಲಲಾರದಲ್ಕ ॥
ಬಿನುಗು ದೈವವನಂಬಿ ಕೆಟ್ಟೆವಲಾಯೆಂದು । ಧನಕನಕಾದಿ ವಸ್ತುಗಳು ॥ (108)

ಮುಂದಿಟ್ಟು ಜಯನೊಡವಂದು ಚಕ್ರಿಯು ಪಾದ । ಪೊಂದಾವರೆಗಳಗೆರಗಿ ॥
ತಂದೆ ಸಲಹಬೇಕು ನಮ್ಮಪರಾಧವ । ನೊಂದನು ನೋಡದೆಂದೆನುತ ॥ (109)

ಸರಿಯಾಗಿ ಮೇಘನಾದಕೆ ಸಿಂಹನಾದವ । ನಿರದೆ ಮಾಡಿದ ಜಯನೃಪಗೆ ॥
ಭರತೇಶ್ವರ ಮೇಘೇಶ್ವರನೆಂದೆಂಬ । ಪೆಸರಿಟ್ಟು ಕರೆದು ಮನ್ನಿಸಿದ ॥ (110)

ವೀರಾಗ್ರಗಣ್ಯ ಪದವನಿತ್ತು ಬಳಿಕಾ । ಧಾರುಣೀಶರ ಕುಲಧನವ ॥
ಧೀರನು ಕೈಕೊಂಡು ಮನ್ನಿಸಿ ಕಳುಹಿದ । ನಾರವನಂತೆ ಗುಣಿಗಳು ॥ (111)

ಸಿಂಧು ನದಿಯ ತಡಿವಿಡಿದಾ ಹಿಮಗಿರಿ । ಸಿಂಧು ಪ್ರಪಾತದ ಬಳಿಗೆ ॥
ಸಿಂಧುರವೇರಿ ಚಕ್ರೇಶ ಬರಲು ಕಂಡು । ಸಿಂಧು ದೇವತೆಯಿದಿರ್ಗೊಂಡು ॥ (112)

ಆ ಸಿಂಧು ಜಲವಭಿಷೇಕವಮಾಡಿದ ಭ । ದ್ರಾಸನವನು ಕಾಣ್ಕೆಗೊಟ್ಟು ॥
ಈ ಸೀಮೆಯೊಳು ನಿನ್ನ ಲೇಸಿನಿಂದಿಹೆ ನೆಂ । ದಾಸುರಕಾಂತೆ ಯಾಡಿದಳು ॥ (113)

ಅವಳನು ಮನ್ನಿಸಿ ಕತಿಪಯ ಪಯಣಗಳಿಂ । ದವ ಹಿಮವದ್ಗಿರಿಯ ॥
ತವಕದಿ ಮಧ್ಯಮ ಕೂಟಸನ್ನಿಧಿಯೊಳ । ಗವನೀಶ ಬೀಡನು ಬಿಡಿಸಿ ॥ (114)

ಆ ವಿಜಯಾರ್ಧ ಕುಮಾರನ ಸಾಧಿಸಿ ದಾ ವಿಧಿಯೊಳು ಚಕ್ರಧರನು ॥
ಭಾವಿಸಿ ಹಿಮವತ್ಕುಮಾರನ ಸಾಧಿಸಿ । ದಾ ವಿಭುವನ ಪುಣ್ಯಕಣೆಯ ॥ (115)

ಆತನ ಕೈಯಿಂದ ಗೋಶೀರ್ಷ ಚಂದನ । ನೂತನೌಷಧಿ ಮಾಲೆಗಳನು ॥
ಪ್ರೀತಿಯಿಂ ಕೈಕೊಂಡನ ಮನ್ನಿಸಿದ ನಿ । ರಾತಂಕದಿಂದಿರ ಹೇಳ ॥ (116)

ಇದರ ಮಧ್ಯದ ಪದ್ಮಕಾಸಾರದೊಳುಟ್ಟಿ । ಸದಮಲ ಗಂಗಾಸಿಂಧು ॥
ನದಿಗಳು ನೆಲಕಿಳದೆಮ್ಮ ಷಟ್ಖಂಡದ । ಮೆದೆಯನು ಮಾಡಿದವಾಗ ॥ (117)

ಎಂದಾ ಹಿಮವದ್ಗಿರಿಯ ಸೊಬಗನಾ । ನಂದದಿಂ ತನ್ನೊಡನೆ ॥
ಬಂದಾ ನೃಪರಿಗೆ ದಿವಿಜನ ಮನ್ನಿಸಿ ಅ । ಲ್ಲಿಂದ ತೆರಳಿದ ಚಕ್ರೇಶ ॥ (118)

ದಕ್ಷಿಣ ಮುಖವಾಗಿ ಬರುತ ಕಂಡನು ವೃಷ । ಭಕ್ಷಿತಿಧರನ ಚಕ್ರೇಶ ॥
ಆ ಕ್ಷಿತಿ ಮಧ್ಯದಿ ಶತಯೋಜನೋತ್ತುಂಗ । ವೀಕ್ಷಿಸಲಾನಾಭಿಗಿರಿಗೆ ॥ (119)

ಕೆಳಗಣ ವಿಸ್ತಾರ ನೂರು ಯೋಜನ ಮೇಲು । ತಳದೊಳ್ತದರ್ಧಯೋಜನವು ॥
ಇಳೆಯೊಳಪ್ಪತ್ತೈದು ಯೋಜನ ವವಗಾಹ । ಪಳುಕಿನ ಗಿರಿಯಂತಿಹುದು ॥ (120)

ಅದರ ಮೇಖಲೆಯ ಭಿತ್ತಿಗಳೊಳು ತನ್ನಯ । ವಿದಿತ ವಿಜಯ ಪ್ರಶಸ್ತಿಯನು ।
ಮುದದಿಂದ ಮುಂದೆಯ್ದಿ ಕಂಡನದರೊಳು । ಬರೆದಿರ್ದ ಸರ್ವಲಿಪಿಯನು ॥ (121)

ಸಂದ ಸಕಲ ಚಕ್ರವರ್ತಿಗಳದರೊಳ । ಗಂದು ಬರೆಸಿದ ಬಿರುದನು ॥
ನಿಂದು ನಿಟ್ಟಿಸಿ ನೋಡಲೊಯ್ಯ ನೊಯ್ಯನೆಗರ್ವ । ಮಂದೈಸಿತಾ ಚಕ್ರಧರನ ॥ (122)

ತನ್ನಂಕ ಮಾಲೆಗೆ ತೆರಪಿಲ್ಲದಿರೆ ಕಂಡು । ತನ್ನ ಮನದೊಳು ಸಿಗ್ಗಾಗಿ ॥
ಮುನ್ನಿನ ಚಕ್ರಿಗಳೊಳಗೊರ್ವ ಚಕ್ರಿಯ । ಬಿನ್ನಾಣದಂಕ ಮಾಲೆಯನು ॥ (123)

ತೊಡೆಯಿಸಿ ತನ್ನಂಕ ಮಾಲೆಯ ಬರೆಯಿಸ । ಲೆಡೆಯನು ಮಾಡಿಸಿ ತನ್ನ ॥
ಬೆಡಗಿನ ತನ್ನಂಕ ಮಾಲೆಯ ಬರೆಸಿದ । ಕಡು ಜಾಣ್ಕೆಯಿಂದ ಚಕ್ರೇಶ ॥ (124)

ಸ್ವಸ್ತಿ ಶ್ರೀವೃಷಭ ತೀರ್ಥೇಶಾಗ್ರನಂದನ । ದುಸ್ತರ ರಿಪುಕುಲ ಮಥನ ॥
ವಿಸ್ತರವಾದ ಷಟ್ಖಂಡ ಮಂಡಲದರಸ । ಮಸ್ತ ಭೂಭುಜನುತ ಚರಣ ॥ (125)

ನವನಿಧಿ ವಲ್ಲಭ ಇಕ್ಷ್ವಾಕು ವರವಂಶ । ಕುವಲಯ ಚಂದ್ರ ನೃಪೇಂದ್ರ ॥
ಭುವನೈಕವೀರ ಮಂದರಧೀರ ಗಂಭೀರಾ । ರ್ಣವ ನಾಭಿರಾಜನ ಪೌತ್ರ ॥ (126)

ಗಿರಿವನ ಜಲದುರ್ಗಗಳನು ಸಾಧಿಸಿ ಹಿಮ । ಗಿರಿಶರನಿಧಿ ಪರಿಯಂತ ॥
ಧರೆಯನು ಸಾಧಿಸಿ ಹಿಮವತ್ಕುಮಾರಾದಿ । ಸುರರ ಕೈಯೊಳು ಕಪ್ಪಗೊಂಡು ॥ (127)

ಭರತೇಶ್ವರನೆಂಬ ಪೆಸರ ಚಕ್ರೇಶ್ವರ । ಬರೆಸಿದ ಶಾಸನ ವಿನ್ನೀ ॥
ಧರೆ ಚಂದ್ರಾರ್ಕರುಳ್ಳನಕ ನಿಲ್ಲಲಿ ಸು । ಸ್ಥಿರವಾಗಿ ನಿಂದಲ್ಲಿ ತನ್ನ ॥ (128)

ಪೆಸರ ಪ್ರಶಸ್ತಿಯ ಕಾಕಿಣಿ ರತ್ನದಿಂ । ಪೊಸತಾಗಿ ಬರೆಸಿ ಚಕ್ರೇಶ ।
ಎಸೆವಾ ವೃಷಭಾದ್ರಿ ಗೀಶನ ನೆನಿಸುವ । ದೆಸೆಗಭಿ ಮುಖವಾಗಿ ಪೋಗೆ ॥ (129)

ಗಂಗಾ ಕೂಟವೊಳನುದಿನ ವಿರುತಿರ್ಪ । ಗಂಗಾದೇವಿ ತಾ ಬಂದು ॥
ಗಂಗಾ ಜಲದಿಂದಭಿಷೇಕವನು ಮಾಡಿ । ಮಂಗಲಾಶೀರ್ವಾದವೆರಸಿ ॥ (130)

ನವರತ್ನ ಖಚಿತ ಸಿಂಹಾಸನ ವೀಯಲು । ಸವಿನಯದಿಂದಾಯಕನ ॥
ಭುವನೇಶ ಮನ್ನಿಸಿ ಕಳುಹಿ ಗಂಗಾತಟ । ದವನಿಯೊಳಗೆ ತನ್ನಬಲವ ॥ (131)

ದಕ್ಷಿಣಕಭಿ ಮುಖವಾಗಿ ನಡೆಸಲಾಗ । ಲಾಕ್ಷಿತಿ ಯೊಳಗುಳ್ಳ ರಾಜಾ ॥
ರಕ್ಷಣ ದೊಳುಕರಿ ಕುಂಭದ ಮುತ್ತತಂ । ದಾಕ್ಷಿತಿಪತಿಗಿತ್ತರೊಲಿದು ॥ (132)

ಅವರಿಗಭಯವಿತ್ತು ಚತುರಂಗ ಸೇನೆಯು । ರವದಿಕ್ತಟವ ವ್ಯಾಪಿಸಲು ॥
ಭುವನ ಭುಂಭುಕ ಕೀರ್ತಿ ಕಾಂತನೆಯ್ದುಂದ । ನವನ ಪುಣ್ಯೋದಯಕಣಿಯ ॥ (133)

ಇಂತು ಪಯಣಗತಿಯಿಂ ಬಂದು ವಿಜಯಾರ್ಧೋರ್ವೀ । ಪಾಂತದೊಳು ಬೀಡಬಿಡಿಸಿ ।
ಪಿಂತೆ ಪೇಳ್ದಂತಾ ಗುಹೆಯ ಕವಾಟವ । ನಂತರಿಸದೆ ತೆರೆಯಿಸಿದ ॥ (134)

ಆ ಗುಹೆಯೊಳು ತಾಪ ಕಾರುವ ಪರಿಯಂತ । ಹೋಗಿ ಚಮೂಪತಿ ಪೂರ್ವ ॥
ಭಾಗದ ಮ್ಲೇಂಛ ಖಂಡವನು ಸಾಧಿಸಲಿತ್ತ । ಲಾಗಿರಿಯುಭಯ ಶ್ರೇಣಿಯೊಳು ॥ (135)

ಉತ್ತರ ದಕ್ಷಿಣ ನಗರದ ಖಚರ ಭೂ । ಪೋತ್ತಂಸರತಿ ಗರ್ವಿತರು ॥
ಸುತ್ತಂಟು ದಿಕ್ಕಿನೊಳಿದಿರಿಲ್ಲ ತಮಗೆಂ । ದೆತ್ತಿಕೊಂಡಿಹರು ಶಿರವನು ॥ (136)

ಪುರುಜಿನ ಪತಿಗಲ್ಲ ದಾರಿಗು ತಮ್ಮಯ । ಕರಗಳ ಮುಗಿಯೆವೆಂದೆನುತ ॥
ಹಿರಿದು ಮಾರ್ಮಲೆತಿರ್ದ ನಮಿವಿನಮಿಗಳನೆಂ । ತೆರಗಿಸಲೆಂದು ಚಿಂತಿಸುತ ॥ (137)

ತನಗೆ ಮೈದುನರೆಂಬ ಭಾವದಿಂದಾ ಚಕ್ರಿ । ವಿನಯದಿಂದಾಪ್ತರ ಮುಖದಿ ॥
ಮನದ ಗರ್ವವನು ಬಿಡಿಸಲೆಂದು ಕಳುಹಿದ । ತನಗಾಪ್ತರಾದ ಮಂತ್ರಿಗಳ ॥ (138)

ಅವರಲ್ಲಿಗೆಯ್ದಿ ನಾನಾ ತೆರದಿಂದ ನೆಂ । ಭವಿಸಿದ ಗರ್ವವ ಬಿಡಿಸಿ ।
ವಿವಿಧ ವಿದ್ಯಾಧರ ರೊಡಗೂಡಿ ಕರತಂ । ದವರನವರು ಕಾಣಿಸಿದರು ॥ (139)

ಪದಕೆರಗದ ಮುನ್ನ ತೆಗೆದಪ್ಪಿ ಚಕ್ರೇಶ । ಮುದದಿಂದವರಿಗೆ ತಕ್ಕ ॥
ಮೃದುವಚನಗಳಿಂದುಪ ಚರಿಸಿದ ನವ । ರದಬರೆಂಬುದ ತಾನರಿದು ॥ (140)

ರತಿಗೆ ನೂರ್ಮಡಿ ರೂಪವತಿ ಪುಣ್ಯಸತಿ ಸರ । ಸ್ವತಿಗೆ ಸಾಸಿರ್ಮಡಿಯೆನಿಪ ॥
ಅತಿಶಯ ಸಕಲ ಕಲಾವತಿ ಲೋಕದ । ಸತಿಯರೊಳ್ಸೌಭಾಗ್ಯವತಿಯು ॥ (141)

ರಮಣೀ ರತ್ನ ಸುಭದ್ರಾದೇವಿಯ । ನಮಿರಾಜನ ತಂಗಿಯನು ॥
ಕ್ರಮದಿಂದ ಮದುವೆ ಯಾದನು ಚಕ್ರಿಯುದರಸಂ । ಭ್ರಮವನದೇನ ಬಣ್ಣಿಪೆನು ॥ (142)

ದೇವವಿದ್ಯಾಧರ ವನಿತೆಯರೆಲ್ಲರು । ತಾವೆಯ್ದಿ ಮಂಗಳಗಳನು ॥
ಆ ವಿಧಿಯಿಂದ ಮಾಡಿದ ರೆನಲವನೆಂತು । ಭಾವಿಸಿ ಪೇಳುವೆ ನಾನು ॥ (143)

ಪ್ರಸ್ತುತವಲ್ಲ ವರ್ಣಿಸುವರೆ ಗ್ರಂಥ । ವಿಸ್ತರ ಭಯದಿಂದ ನಾನು ॥
ಪ್ರಸ್ತುತದಷ್ಟನೆ ಪೇಳ್ವೆನು ಬುಧರವು । ನಸ್ತಾಪವನು ಮಾಡಬೇಡ ॥ (144)

ಖಚರಗೋಚರ ಪರಿಣಯನ ಕಲ್ಯಾಣದಿಂ । ದುಚಿತ ಕನ್ಯಾರತ್ನವನು ॥
ಸುಚರಿತ ಪುರುಷ ರತ್ನದೊಳು ನೆರಪಿದರು । ಖಚರಾಧಿಪತಿಗಳುತ್ಸಹದಿ ॥ (145)

ಬಳವಳ ಗೊಟ್ಟನ ನರ್ಘ್ಯ ರತ್ನಂಗಳ । ಕಳಸ ಕುಚ ಕೋಮಲೆಯರ ॥
ಪೊಳೆವ ಮುತ್ತಿನ ಹಾರ ಪದಕಮುಂತಾದತ । ನ್ನೊಳಗುಳ್ಳನೇಕವಸ್ತುಗಳ ॥ (146)

ಅನಿತರೊಳಗೆ ಮ್ಲೇಂಛರಾಜರ ಸಾಧಿಸಿ । ಮನುಜೇಶನಿದ್ದಲ್ಲಿಗಾಗ ॥
ಘನತೇಜೋನಿಧಿ ಕರತಂದು ಕಾಣಿಸಿ । ದನುದಂಡ ನಾಯಕ ನೊಲಿದು ॥ (147)

ಕುಲಧನಗಳನು ಕಾಣಿಕೆಯಿಡಲವರನು । ಚಲದಂಕಮಲ್ಲ ಸಂತೈಸಿ ॥
ಕಳುಹಿಸಿ ಗಿರಿಗುಹೆಯೊಳು ತಾಪತಣಿವಿರ । ಲೊಳ ಪೊಗಿಸಿದನು ಸೇನೆಯನು ॥ (148)

ಅದರ ಭಿತ್ತಿಗಳೊಳು ಚಂದ್ರಾದಿತ್ಯರ । ಮೊಪಲಂತೆ ಬರಸಿ ಕಾಕಿಣಿಯಿಂ ॥
ಇದಿರೊಳು ಚಕ್ರ ರತ್ನವು ಮುಂದೆ ನಡೆಯಲಾ । ನದಿಯ ಯಿಕ್ಕೆಲದೊಳೆಯ್ದಿಸಿದ ॥ (149)

ಆ ತೆರದಾಗುಹೆಯನು ಕಂಟಕ ಪ್ರ । ಪಾತವೆಂದೆಂಬರು ಬುಧರು ॥
ನೀತಿನಿಪುಣ ಚಕ್ರಿಯಾಗುಹೆ ಯೊಳಗಂ । ಗಾತಟವಿಡಿದೆಯ್ದಿದನು ॥ (150)

ಮುನ್ನಿನಂದ ದೊಳುನ್ಮಗ್ನ ನಿಮಗ್ನವೆಂ । ಬುನ್ನತ ನದಿಗಳ ದಾಂಟಿ ॥
ಬಿನ್ನಣದಿಂದಾಗುಹೆಯ ಮಹಾದ್ವಾರ । ಸನ್ನಿಧಿಗೆಯ್ತರಲಾಗ ॥ (151)

ಓಲಗಿಸಿದನಾ ದ್ವಾರ ಕೂಟದ ನಾಟ್ಯ । ಮಾಲನೆನಿಪ ದೇವ ಬಂದು ॥
ಸಾಲಾಗಿ ಪೂರ್ಣ ಕುಂಭಾದಿ ಮಂಗಲ ವಸ್ತು । ಜಾಲದಿಂದಿದಿರ್ಗೊಂಡು ನೃಪನ ॥ (152)

ತೆರೆಗಳಂದದಿ ಚಾಮರಗಳು ಫೇನದ । ಪರಿಯಂತೆ ಶ್ವೇತಾತಪತ್ರಗಳು ॥
ಮೆರೆಯಲು ಗಂಗಾನದಿಯ ಪ್ರವಾಹದ । ಪರಿಯಂತೆ ಸೇನೆ ತೆರಳಿತು ॥ (153)

ದ್ವಾರವ ಪೊರಮಟ್ಟು ನಾಟ್ಯ ಮಾಲನ ಮನ । ವಾರೆ ಮನ್ನಿಸಿ ಮೂಡದೆಸೆಯ ॥
ಸಾದಮ್ಲೇಂಛ ರಾಜರನು ಕಾಣಿಸಿಕೊಂಡು । ಧಾರಿಣೀಪತಿ ಮನ್ನಿಸಿದ ॥ (154)

ವಿಜಯಾರ್ಧಪರ್ವತವೆಂಬ ಗಜವನೇರಿ ದಿ । ಗ್ವಿಜಯ ತಾನಾಗಿ ಚಕ್ರೇಶ ॥
ನಿಜಬಲ ಗೂಡಿ ಗಂಗಾತಟದೊಳು ಬಂದು । ರಜತಾದ್ರಿಯನು ಕಂಡನಾಗ ॥ (155)

ಪುರು ಪರಮೇಶನ ಕೀರ್ತಿಯ ಪುಂಜ ವೀ । ಗಿರಿಯಂತೆ ಬೆಳೆದುದೊ ಜನನ ॥
ಉರುತರ ಶುಕ್ಲ ಧ್ಯಾನವೆ ಹೊರಹೊಮ್ಮಿಯೊ । ಪರಿಯಾಯ್ತೆಂದು ಬಗೆದನು ॥ (156)

ಚಂದಿರ ಕಿರಣಜಾಲವನು ತನ್ನ ಕಂದು । ಕುಂದನು ನೀಗಬೇಕೆಂದು ॥
ತಂದು ರಾಸಿಯು ಮಾಡಿ ಜಿನಪನ ಪೂಜಿಸಿ । ದಂದವ್ರೊಯೆಂದು ನೋಡಿದನು ॥ (157)

ಮೆಲ್ಲ ಮೆಲ್ಲನೆ ಯಾಗಿರಿಯ ಸೊಬಗ ನೋಡು । ತಲ್ಲಿಗೆಯ್ತಂದು ಚಕ್ರೇಶ ।
ಎಲ್ಲ ಬಲ್ಲವನಾ ರಜತಗಿರಿಯು ತಪ್ಪ । ಲಲ್ಲಿನಿಲ್ಲಿಸಿ ಸಂತೈಸಿ ॥ (158)

ಶರಭಂಗಳು ಕೇಸರಿಗಳು ಗಜಗಳಾ । ಗಿರಿಯು ತಪ್ಪಲವನದಲ್ಲಿ ॥
ಪರಿದಾಡುತಿರೆ ಕಂಡು ಸ್ವಾಮಿಯುದೊಂದುಶಾಂ । ತರಸದ ಮಹಿಮೆಯೆಂದರಿದ ॥ (159)

ಪರಿಮಿತ ಪರಿಜನ ವೆರಸಿಯಾ ಕೈಲಾಸ । ಗಿರಿಯು ನೇರಿದನು ಸಂತಸದಿ ॥
ಸುರಪದ್ಗಿರಿಯು ತಾರೆಗಳೊಡ ಗೂಡಿ ಚಂ । ದಿರನು ಬಂದೇರುವಂದದೊಳ್ ॥ (160)

ಬಂದು ಧೂಳಿ ಸಾಲ ಮೊದಲಾದ ಭೂಮಿಗ । ಳಂದವ ನೋಡುತ ಚಕ್ರಿ ॥
ಇಂದೆಮ್ಮ ಜನ್ಮ ಸಫಲ ವಾದುದೆಂದಾ । ನಂದವ ತಾಳ್ದು ಮನದೊಳು ॥ (161)

ಸಕಲ ಸುರಾಸುರ ರಾಜರ ಮಸ್ತಕ । ಮಕುಟ ಖಚಿತ ಮಣಿರಶ್ಮಿ ॥
ನಿಕರ ರಂಜಿತಪಾದ ಪದ್ಮ ವೃಷಭತೀ । ರ್ಥಕರಂಘ್ರಿಗೆರಗಿ ಕೈಮುಗಿದು ॥ (162)

ಜಯ ಜಯ ತ್ರಿಭುವನ ನಯನೋತ್ಪಲ ಚಂದ್ರ । ಜಯ ಜಯ ಮದನ ಮೃಗೇಂದ್ರ ॥
ಜಯ ಜಯ ಪದನತ ಫಣಿಸುರ ಮನುಜೇಂದ್ರ । ಜಯ ಜಯ ವೃಷಭ ಜಿನೇಂದ್ರ ॥ (163)

ಮೂರು ಲೋಕದ ಸಿರಿಯಿದ್ದು ನಿರ್ಗವತೆ । ತೋರುತಲಿದೆ ನಿನ್ನೊಳಗೆ ॥
ಆರು ಖಂಡದ ಸಿರಿಗೇಕೆ ಬೆರತು ತಮ್ಮ । ಬೀರುವನ್ನೃಪರು ಬಿಂಕವನು ॥ (164)

ನಿನ್ನಯ ಪದಪದ್ಮ ಮೋನ ಹೃತ್ಸರಸಿಯೊ । ಳ್ಚೆನ್ನಾಗಿ ನೆಲಸಿರೆ ಸ್ವಾಮಿ ॥
ಇನ್ನಂತರಂಗ ಸುಬಹಿರಂಗ ಲಕ್ಷ್ಮಿಯು । ನನ್ನ ಕೈವಶವಪ್ಪುದರಿದೆ ॥ (165)

ಅರುವತ್ತು ಸಾವಿರ ವರುಷ ತನಕನಿನ್ನ । ಚರಣವ ಕಾಣದೆ ನಾನು ॥
ಹೊರ ಹೊರಗಾಡಿ ಹೊತ್ತನು ಕಳೆದೆನು ಸ್ವಾಮಿ । ದುರಿತಾರಣ್ಯ ಕುಠಾರ ॥ (166)

ನಿನ್ನ ಪದವ ಕಾಣಬೇಕೆಂದು ಮನದೊಳ । ಗುನ್ನಿಸಿದಾಗಳೆ ಸ್ವಾಮಿ ॥
ಎನ್ನಪರಾಧ ಕೋಟಿಗಳೋಡಿದವೆಂದು । ಬಿನ್ನವಿಸಿದನು ಚಕ್ರೇಶ ॥ (167)

ಸುಮರತ್ನಗಳಿಂದ ಪೂಜಿಸಿ ಜಿನಚರ । ಣಾರ ವಿಂದಗಳನು ಚಕ್ರಿ ॥
ಆರೈವ್ರುತಪ್ಟ ಮಹಾ ಪ್ರಾತಿಹಾರ್ಯವ । ನಾರಾಜ ಸಂಸನಲ್ಲಿಂದ ॥ (168)

ಇದು ಶ್ರುತಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯ । ಪದದೊಳೇಕಾದಶ ಸಂಧಿ ॥ (169)

(ಹನ್ನೊಂದನೆಯ ಸಂಧಿ ಸಮಾಪ್ತಂ)

## ಹನ್ನೆರಡನೆಯ ಸಂಧಿ-

ಜಲಮಲ್ಲ ದೃಷ್ಟಿ ಯುದ್ಧದೊಳು ಭರತನಗೆ । ಲ್ದಲಘು ವಿಕ್ರಮದಿಂದ ಬಾಹು ॥
ಬಲಿಯೆಂಬನ್ವರ್ಥದ ನಾಮದ ಸ್ವಾಮಿಯ । ಚೆಲುವಡಿಗಳಿಗೆರಗುವೆನು ॥ (1)

ಅಮಿತ ಗುಣಾನ್ವಿತನಾದಿ ತೀರ್ಥೇಶನ । ಕ್ರಮ ಕಮಲಗಳಿಗೆ ನಮಿಸಿ ॥
ಸಮವಸರಣದಿಂದ ಪೊರಮಟ್ಟು ಬಂದತಾ । ನಮರೇಂದ್ರ ವಿಭವದೊಳಾಗ ॥ (2)

ಬಂದು ಕಟಕವನು ಪೊಕ್ಕು ನೃಪನಾ । ನಂದದಿಂ ಭೇರಿಯ ಪೊಯ್ಸಿ ॥
ಸಂದ ಸಾಕೇತ ಪುರಕಭಿ ಮುಖವಾಗ । ಲೆಂದು ಸೇನೆಗೆ ಪೇಳಸಿದನು ॥ (3)

ಹಲವು ಪಯಣದಿಂದನ್ವಯ ರಾಜಧಾನಿಯ । ಬಳಗೆಯ್ತರೆ ಚಕ್ರರತ್ನ ॥
ಒಳ ಪೊಗದಾಪುರ ಗೋಪುರ ದ್ವಾರದೊ । ಳ್ಘಳಲನೆ ಕೀಲಿಸಿ ನಿಲಲು ॥ (4)

ಅದರಕ್ಷಿಪ ಯಕ್ಷದೇವರ್ಕಳದ ಕಂಡು । ತಡೆಯದೆ ವಿಸ್ಮಯ ಬಟ್ಟು ॥
ಇದಿರಾಗಿ ಭರತೇಶ್ವರನೊಳು ಮಚ್ಚರಿ । ಪದಟನಿನ್ನಾವ ನಿರ್ದಪನೋ ॥ (5)

ಅವನಿಗೆ ಕಾಲಮೃತ್ಯುವ ನೊದಗಿಸ । ಲೀವಿಧದಿಂದೀ ಚಕ್ರ ರತ್ನ ॥
ಓವದೆ ನಿಂದುದೊ ಯೆಂದು ಚಿಂತಿಸಿದರು । ದೇವರ್ಕಳು ಕಡುಮುಳಿದು ॥ (6)

ಆತನಿಗೀ ಚಕ್ರ ರತ್ನದ ಬಲ್ಪಿ । ನ್ನೇತಕೆ ವಿಬಲವಿರಲು ॥
ಮಾತೇನವನ ಪುರವನು ಮುತ್ತಿಪಿಡಿತಂ । ದೀತ ಗೊಪ್ಪಿಸ ಬಹುದೀಗ ॥ (7)

ಎಂದು ನುಡಿದು ತಮ್ಮೊಳಗಾಲೋಚಿಸಿ । ಬಂದು ಪೇಳಲು ಭರತೇಶ ॥
ನೊಂದು ಮನದೊಳು ವಿಸ್ಮಯ ಬಟ್ಟು ಕರೆಸಿದ । ನಂದು ಪುರೋಹಿತ ರತ್ನವನು ॥ (8)

ಹದಿನಾಲ್ಕು ರತ್ನಂಗಳೊಳು ಚಕ್ರರತ್ನವೆ । ಮೊದಲ ರತ್ನವಿದೆನ್ನ ಪುರದ ॥
ಇದಿರೊಳು ಪೋಗದೆ ನಿಂದುದ ಕೇನುಕಾ । ರಣ ತಿಳದು ಪೇಳೆಂದ ॥ (9)

ಪೂರ್ವ ದಕ್ಷಿಣ ಪಶ್ಚಿಮಾಬ್ಧಿಯ ಹಿಮವ । ತ್ಪರ್ವತ ಪರಿಯಂತವಾದ ॥
ಉರ್ವಿಯೊಳೆನಗೆರಗದವಿಲ್ಲವೆಂದಾ । ಸಾರ್ವ ಭೌಮೀಶನುಡಿದನು ॥ (10)

ಎನಗೆರಗದನ ನಂತಕ ನಾನನದೊಳು । ಮನೆಯ ಮಾಡಿದನೆಂಬುದನು ॥
ಅನುಮಾನ ವಿಲ್ಲವೀ ಚಕ್ರರತ್ನವೆ ಸಾ । ಚನೆಯ ಮಾಡುತಲಿದೆಯೆಂದ ॥ (11)

ಎಂದು ಧೀರೋದಾರ ಗಂಭೀರ ವಚನದಿಂ । ದಂದು ನುಡಿಯಲು ಚಕ್ರೇಶ ॥
ನಿಂದಭಿ ಮುಖವಾಗಿ ನೀನರಿಯದ ನೀತಿ । ಯೊಂದಿಲ್ಲ ವೀಜಗದೊಳಗೆ ॥ (12)

ನೀನೆ ತಿಳಯ ಬೇಕಿದರಂದವ ನಭಿ । ಮಾನಿಗಳವ ರೆಂಬುದನು ॥
ಭಾನು ಬಿಂಬದ ಮುಂದೆ ಸೊಡರ ತೋರಿಸುವಂತೆ । ನಾನುಪೇಳುವುದಿನ್ನೇನು ॥ (13)

ತಾನು ತಿಳದರು ಬಲ್ಲವರೊಳ ಗ್ವರದು ವಿ । ಚಾರಿಸ ಬೇಕೆಂಬ ನೀತಿ ॥
ತಾನುಂಟದರಿಂದ ನೀತಿಳದುದನನು । ಮಾನಿಸದೆನ್ನೊಳು ಪೇಳು ॥ (14)

ಫಲದಿಂದ ಕಲ್ಪವೃಕ್ಷವನು ಪೂಜಿಸುವಂತೆ । ಜಲದಿಂದಂ ಭೋನಿಧಿಯ ॥
ಬೆಳಗಿನಿಂ ಸೂರ್ಯನ ಪೂಜಿಸುವಂತೆನ್ನ । ತಿಳದಷ್ಟು ಬಿನ್ನವಿಸುವೆನು ॥ (15)

ಪುರಜನ ಪತಿಯ ನಂದನರು ನಾವೆಲ್ಲರು । ಧರೆಯ ನೆಮಗೆ ತಂದೆಯಿತ್ತು ॥
ಭರತೇಶ ಗೆರಗೆವು ತನ್ನ ಭಾಗ್ಯದಿ ಬಂದ । ಸಿರಿಯಿಂದ ತಾನೆಮೆರೆಯಲಿ ॥ (16)

ಎಂದತಿ ಗರ್ವದಿಂದನಿಬರು ನಿನ್ನತ । ಮ್ಮಂದಿರೊಂದೇ ಬುದ್ಧಿಯಾಗಿ ॥
ನಿಂದಿಹರವ ರೊಳಗತಿ ಗರ್ವಿಭುಜಬಲ । ದಿಂದ ಬಾಹುಬಲಿ ಕುಮಾರ ॥ (17)

ನಿನಗೆ ನಾನೇನ ಪೇಳ್ವೆನು ನಿನ್ನ ತಮ್ಮನ । ಮನದೊಳ್ಪನೆಲ್ಲನೀ ಬಲ್ಲೆ ॥
ಖನೆಯದಿಂ ಮಣಿಯನು ದೋರ್ವಲ ಗರ್ವದಿಂ । ದನುವಾಗಿನಿಸನು ಸಂಗರಕೆ ॥ (18)

ಕದನ ಲಂಪಟನು ಕಾಳಗದೊಳು ತನಗಾ । ರಿದಿರಿಲ್ಲವೆಂಬ ಬಿಂಕದಲಿ ।
ಬೆದರನು ನಾನಾಯುಕ್ತಿ ಶಕ್ತಿಗಳಿಂದ । ಮದವ ಮನ್ನಿಸಬೇಕವನ ॥ (19)

ರಾಜನ್ಮತಿಯನು ಮಾಳ್ಪುದೀ ಧರೆಯನು ರಾಜಪತಿಯ ಮಾಡಬಹುದೆ ॥
ತೇಜಸ್ವಿಗಳವರೆರಗದಿದ್ದರೆ ಚಕ್ರ । ರಾಜದ್ವಾರವ ದಾಂಟದೆಂದ ॥ (20)

ಧರೆಯೊಳು ರಾಜ್ಯ ಸುಖದಿ ಬಾಳ್ವರಾದರೆ । ಚರಣಾಕೆರಗುವರು ನಿನ್ನ ॥
ನಿರುತ ತಪೋರಾಜ್ಯ ಸುಖದಿ ಬಾಳ್ವಡೆ ಪುರು । ಪರಮೇಶನಡಿಗೆರಗುವೆನು ॥ (21)

ಕಳುಹಿಸೆ ಶಾಸನ ಹರರನಿಂತೆಂದವ । ನೊಳವನೆಲ್ಲವ ಕಾಣಬಹುದು ॥
ತಳುವೇತಕೆಂದು ಪುರೋಹಿತ ಪೇಳ್ ಕಂ । ಗಳೊಳು ಸೂಸಿದುವು ಕಿಡಿಗಳು ॥ (22)

ರಾಜಲೀಲೆಯ ಬಿಟ್ಟು ಪ್ರಳಯಕಾಲದ ಯಮ । ರಾಜಲೀಲೆಯನು ಕೈಕೊಂಡ ॥
ಮಾಜದ ಭ್ರುಕುಟಿ ವಿಕಸಿತ ನಾಸಾಪುಟ । ರಾಜಿಪ ಪುಳಕ ಕಂಪನದಿ ॥ (23)

ಎನ್ನ ತಮ್ಮಂದಿರೆನಗೆರಗದ ಮೇ । ಲಿನ್ನಾರೆರಗುವರೆನಗೆ ॥
ಬನ್ನವಾವುದು ನಿನಗಿದರಿಂದ ಬಿಟ್ಟಿಂ । ದುನ್ನಿಸಿ ನುಡಿದನಿಂತೆಂದು ॥ (24)

ವೀರಭಟರು ದಂಡ ಚಕ್ರರತ್ನಂಗಳ । ನ್ನಾರಿಗೆ ಬೆಸನ ಬೇಡುವವೊ ॥
ಧಾರಿಣಿಯೊಳಗೆನಗಪಕೀರ್ತಿಗಳು । ಆರಿಂದಪ್ಪವೊ ಕಾಣೆ ॥ (25)

ದೋರ್ಬಲಿಯೆನಗೆರಗದ ಮೇಲರಸುಗ । ಳಾರ್ಬರಿಂದೆರಗಿದರೇನು ॥
ಮಾರ್ಬಲ ವಿದ್ದೇನು ಫಲನನಗಿನ್ನೀ । ದೋರ್ಬಲ ವಿದ್ದೇನು ಫಲವು ॥ (26)

ಪೌದನ ಪುರವೊಂದು ನನ್ನಾಜ್ಞೆ ಘೋರ । ಗಾದ ಬಳಿಕ ಮತ್ತೆ ಮಿಕ್ಕ ॥
ಮೇದಿನಿಯೊಳು ಪುರವಿದ್ದೇನು ನನಗೆಂ । ದಾದಿ ಚಕ್ರೇಶ ನುಡಿದನು ॥ (27)

ಉಗುರಿಂದ ಪೋಪುದಕ್ಕೇತಕೆ ಕೊಡಲಿಯು । ಳಗ ದೂತರ ಮುಖದಿಂದ ॥
ಬಗೆಯನರಿದು ಮುಂದೆ ಯೋಚಿಸ ಬಹುದೀ । ದುಗುಡವೇತಕೆ ಚಕ್ರೇಶ ॥ (28)

ಎನಲು ಪುರೋಹಿತನ ಮಾತಿಗೆ ಚಕ್ರಿ । ಮನದೆಗೊಂಡನುಜರ ಬಳಿಗೆ ॥
ವಿನಯ ವಿಚಕ್ಷಣ ದೂತರ ನಟ್ಟಿದ । ನನುಮಾನಿಸದೆ ಬಂದರವರು ॥ (29)

ವಿನಯದಿಂದಣ್ಣಾಜೆ ನಿಮ್ಮ ಬಳಿಗೆ ನ । ಮ್ಮನು ಕಳುಹಿದ ನಿಮ್ಮ ಕಂಡು ॥
ತನಗೆ ಬಹಳ ದಿನವಾಯ್ತು ಕಾಣ್ಬರೆ ನಿ । ಮ್ಮನಿಬರ ಬರಹೇಳದನು ॥ (30)

ತನಗೋರ್ವ ಗುಪಭೋಗ್ಯವಲ್ಲವೀ ಸಾಮ್ರಾಜ್ಯ । ವನುಜರೆಲ್ಲರ ಕೊಡಿಕೊಂಡು ॥
ಅನುಭವಿಸಲು ಬೇಕೆಂದು ನಿಮ್ಮೆಲ್ಲರಿಗೆ । ಮನದಕ್ಕರಿಂದ ಕಳುಹಿದ ॥ (31)

ಹಿರಿಯಣ್ಣನು ಹೆತ್ತ ತಂದೆಗೆ ಜಗದೊಳು । ಸರಿಯೆಂಬರು ಬಲ್ಲವರು ॥
ಎರವೇತಕೆ ಬಂದೆರಗಿ ನಿಮ್ಮಣ್ಣನ । ಚರಣ ಕಮಲಕೆಂದರವರು ॥ (32)

ಭರತೇಶ್ವರ ಬರೆಸಿದ ಶಾಸನವಿದ । ಶಿರದೊಳಗಾಂತು ನೀವೆಲ್ಲ ॥
ಭರದಿಂದ ಬಂದು ಕಾಣ್ಬುದು ಲೇಸೆಂದಾ । ಚರರಾಡಿದರವರೊಡನೆ ॥ (33)

ಎನಲಾ ದೂತರ ನುಡಿಯ ರಾಜೇಶರು । ಮನದೆಗೊಂಡಾ ದೂತರೊಳು ॥
ವಿನಯದಿಂದಿಂತೆಂದು ಪೇಳ್ದರೊಂದು ಯೋ । ಚನೆಯನು ಯೋಚಿಸಿ ಬಳಿಕ ॥ (34)

ಪುರು ಪರಮೇಶನ ಪದವ ಪೂಜಿಪೆವೆಂಬ । ಪರಕೆಯುಂಟದ ನಾವು ತೀರ್ಚೆ ॥
ಭರತಣ್ಣಾಜೆಯು ಕಾಣ್ಬೆವೆಂದಾ ದೂ । ತರನು ಮನ್ನಿಸಿ ಕಳುಹಿದರು ॥ (35)

ಹಿರಿಯಣ್ಣ ಗುರುತಂದೆಯೆಂದೆರಗಲು ಬಹು । ದರಸಾಳ್ಗಳೆಂಬ ಭೇದದೊಳು ॥
ಬರೆಸಿ ಕಳುಹಿದ ವೋಲಿವನಂಕೆಯು ದೊಡ್ಡ । ದೊರೆತನಕಾವೆರಗುವೆವೆ ॥ (36)

ನಮ್ಮಯ್ಯ ಕೊಟ್ಟ ರಾಜ್ಯದೊಳು ನಾವಿರುತಿರ್ದ್ದು । ದವ್ಮಯ್ಯವೆಂದೀತನಿಗೆ ॥
ಒಮ್ಮೆಯೆಳ್ಳು ಪೋಗಿಯೆರಗಿ ಬಾಗುದರಿಂ । ದೆಮ್ಮಯ್ಯಗೆರಗುವ ನಾವು ॥ (37)

ಅಕ್ಕಿಯು ಕೊಟ್ಟೀ ಮಡಿಗೂಳನುಂಬುದು । ಚೊಕ್ಕಟವಲ್ಲ ಬಲ್ಲವರ್ಗೆ ॥
ಸಿಕ್ಕಬಾರದು ನಾವೀ ತಳ್ಳಿ ಬಳ್ಳಿಗೆಂ । ದುಕ್ಕುವ ವೈರಾಗ್ಯದಿಂದ ॥ (38)

ಪಗಲ ಚಂದಿರನಂತೆ ಹಸಗೆಟ್ಟು ಚಕ್ರಿಗೋ । ಲಗವ ಮಾಡಿಪ್ಪ್ದರಿಂದ ॥
ಪೊಗುವುದೊಳ್ಳಿತು ಧರ್ಮ ಚಕ್ರಿಯು ಮರೆಯನೆಂ । ದಗಣಿತ ಮಹಿಮರಾಡಿದರು ॥ (39)

ಅಂದು ಪರಿಚ್ಛೇದಿಸಿ ತಮ್ಮಮನದೊಳ್ । ಗಂದು ರಾಜ್ಯಾದಿ ವೈಭವನಾ ॥
ಮಂದರ ಗಿರಿಗಳಂದದಿ ಪ್ಯೈವೆಳಗು ಸೂಸೆ । ಬಂದರು ಸಮವಸರಣಕೆ ॥ (40)

ಪುರುಪರಮೇಶನ ಮುಖ ಚಂದ್ರನ ಕಂಡು । ಕರಕಮಲಗಳು ಮುಳುಗಿದುವು ॥
ಇರದೆ ನೇತ್ರೋತ್ಪಲ ವಲರ್ದುದು ಸಂತೋಷ । ಶರಧಿ ಪೆರ್ಚಿದುದೇನನೆಂಬೆ ॥ (41)

ದೇವನೀನಿತ್ತ ರಾಜ್ಯದೊಳು ಸಂತಸದಿಂದ । ನಾವಿರುತಿರಲದ ಕಂಡು ॥
ಭೂವಳಯವ ಸಾಧಿಸಿದೆೊಂದು ಕೀರ್ತಿಯು ॥ ಸಾಧಿಸಲೆಂದು ತಾ ಬಗೆದು ॥ (42)

ಕರೆಯು ಕಳುಹಿದ ನಣ್ಣಾಜೆ ನಮ್ಮನು ಕೆಂ । ಕರರ ಕೈಯಿಂದ ಕಿಂಕರರ ॥
ಕರಸುವಂತವನ ತೆರೆಗೆಯುವಕ್ಕಲೆ ನಾವು । ನಿರುಪಮ ನಿನ್ನ ಕುವರರು ॥ (43)

ಮೂಲೋಕ ದೊಡೆಯನ ಸುತರು ನಾವಿನ್ನೊಬ್ಬ । ಭೂಲೋಕದರಸಿಗಳಾಗಿ ॥
ಓಲಗವನು ಮಾಡಿ ಕೈಮುಗಿವೆವೆ ಕರು । ಣಾಳು ಪಾಲಿಸು ದೀಕ್ಷೆಯನು ॥ (44)

ಆ ರಾಜ್ಯವಿತ್ತು ಸಲಹಿದಂತೆ ನಮಗೆ ತ । ಪೋ ರಾಜ್ಯವಿತ್ತು ನೀನಿನ್ನು ॥
ಕಾರುಣ್ಯದಿಂ ಸಲಹೆಂದಾ ದೇವನ । ಚಾರು ಚರಣಕೆರಗಿದರು ॥ (45)

ನಿನ್ನ ಸಮವಸರಣವೆ ಮುಂದೆ ಗತಿಯೆಂದು । ಬಿನ್ನಹವನು ಮಾಡಿ ಜಿನನ ॥
ಸನ್ನಿಧಿಯೊಳು ತಪೋ ರಾಜ್ಯಕ್ಕರಸರಾದ । ರಿನ್ನೇವೇಳ್ವೆ ನಾಸಿರಿಯು ॥ (46)

ದೀಕ್ಷೆಯು ಕೈಕೊಂಡರನುಜರೆಂಬುದ ಕೇಳ । ಯಾಕ್ಷಣದೊಳು ಭರತೇಶ ॥
ಮೋಕ್ಷ ಗಾಮಿಗಳವರೆನಗೇತ ಕೆರಗುವ । ರೀಕ್ಷಿತಿಗಾಸೆಯು ಮಾಡಿ ॥ (47)

ಎಂದು ಕಣ್ಬನಿಗಳ ತುಂಬಿಯುವರ ಮನ । ದೊಂದು ವಿರಕ್ತಿಗೆ ಮೆಚ್ಚಿ ॥
ಮುಂದುವರಿದ ಕಾರ್ಯಕಿನ್ನೇನ ಮಾಳ್ಪೆನಾ । ನೆಂದು ತನ್ನೊಳು ಸಂತೈಸಿದನು ॥ (48)

ಅವರಿಂದೆಗ್ಗಳ ಭಲ ಬಲಯುತನೀ । ಭುವನದೊಳಗೆ ಬಾಹುಬಲಿ ॥
ಕುವರನ ನಾನೆಂತು ಯೆರಗಿಸಲೆಂದು । ಭುವನೇಶಮನದಿ ಚಿಂತಿಸಿದ ॥ (49)

ಸೂರ್ಯ ಕಿರಣದ ಮುಂದುರಿಯನುಗುಳ್ವಾ । ಸೂರ್ಯಕಾಂತದ ಪ್ರೋಲವನ ॥
ಶೌರ್ಯ ಉರಿಯನುಗುಳುತಲಿದೆ ಯೆನಗಿನ್ನು । ಕಾರ್ಯವೇನೆಂದು ಚಿಂತಿಸಿದ ॥ (50)

ಸಾಮವೆ ಸಕಲೋಪಾಯಕೆ ಮೊದಲೆಂದು । ಸ್ವಾಮಿ ಪೇಳದ ನೀತಿಯುಂಟು ॥
ಸಾಮದಿಂದಳವಡದಿರ್ದರೆನ್ನಯ ನಿ । ಸ್ಸೀಮ ಭುಜವಂಡ ಉಂಟು ॥ (51)

ಇಂತು ಚಿಂತಿಸಿ ಮಂತ್ರಿವರ್ಗದೊಡನೆ ತ । ನ್ನಂತರಂಗವ ಪೇಳ್ ನೃಪತಿ ॥
ಮುಂತೆ ಬರೆಸಿ ಲೇಖನವ ರನ್ನದೊಡಿಗೆಯ । ತಾಂತಳುವದೆ ಕಟ್ಟಿಸಿದನು ॥ (52)

ಕುಲರೂಪುಯುತ ವಕ್ರೋಕ್ತಿ ನಿಪುಣ ಬುದ್ಧಿ । ಬಲಯುತನಾದಿಯ ವಚನ ॥
ಕಲಿನಾನಾದೇಶ ಭಾಷಾ ಕುಶಲ ನು । ಜ್ವಲಕೀರ್ತಿಯಶಾದೆಯ ಮೂರ್ತಿ ॥ (53)

ಪ್ರತಿಭಾನ್ವಿತ ನನ್ವಯಶಾಗತ ಸತ್ಪ್ರಖ್ಯ । ಯುತ ಸಂಧಿ ವಿಗ್ರಹ ನಿಪುಣ ॥
ಪತಿಭಕ್ತಿಯುತ ಮಹತ್ತರನ ಕೈಯೊಳು ಕೊ । ಟ್ಟತಿ ಪ್ರೀತಿಯಿಂದ ಕಳುಹಿದ ॥ (54)

ಆತನು ಕತಿಪಯ ಬಲಗೂಡಿ ಬಂದಾ । ನೂತನ ಪೌದನ ಪುರದ ॥
ಜ್ಯೋತಿರ್ಮಯವಾದ ಕೋಂಟೆಯಸೊಗಸನು । ಪ್ರೀತಿಯಿಂ ನೋಡಿದನಾಗ ॥ (55)

ಅಗಳಾಳುವೇರಿ ಕೊತ್ತಳ ತೆನೆ ಹುಲಿವೊಗ । ಮುಗಿಲಟ್ಟಣೆಗಳಿಂದ ॥
ತ್ರಿಗೆದಂಬುಗಂಡಿಗಳಿಂದೊಪ್ಪುವ ಕೋಟೆ । ಯುಗಳ ಸನ್ನಿಧಿಗೈತಂದ ॥ (56)

ಪುರುಷೋತ್ತಮನ ಕುಮಾರನ ಪುರಬಂದು ಈ । ರಾಳು ಲಂಘಿಸಿದಂತೆ ॥
ಶರನಿಧಿ ತಾಬಂದು ಸುತ್ತಿದಂದದಿ ಜಲ । ಪರಿಪೂರ್ಣ ಖ್ಯಾತಿಕೆಯಿಹುದು ॥ (57)

ಮಾನುಷರೊಳಗುತ್ತಮನೀ ನೃಪನೆಂದು । ಮಾನುಷೋತ್ತರಗಿರಿ ಬಂದು ॥
ಆ ನಗರಿಯ ಸುತ್ತಿದಂತೆ ಚಿನ್ನದ ಕೋಟೆ । ಭಾನು ಬಿಂಬವ ನಗುತಿಹುದು ॥ (58)

ಉನ್ನತವಾದ ಕೋಟೆಯ ಸುತ್ತಲು । ರನ್ನದ ತೆನೆಗಳೊಪ್ಪಿದುವು ॥
ಬಿನ್ನಾಣದಿಂ ವೀರಲಕ್ಷ್ಮಿಯು ನಿಟ್ಟಪರನ್ನ । ಗನ್ನಡಿಗಳಂತೆ ಶೋಭಿಪುದು ॥ (59)

ವರ ವಜ್ರದ ಪುಡಿ ಮಣಿಮಯವಾದ ಗೋ । ಪುರದ್ವಾರದೊಳೊಳಪೊಕ್ಕು ॥
ಪುರದ ಸಿರಿಯನೋಡಿ ಮನದೊಳಯೋಧ್ಯೆಗೆ । ಸರಿಮಿಗಿಲೆಂದು ಚಿಂತಿಸಿದ ॥ (60)

ಸಾಲಾಗಿ ರಚಿಸಿದ ಚಿನ್ನದುಪ್ಪರಿಗೆಯ । ಮೇಲೆ ರನ್ನದ ಕಳಸಗಳು ॥
ಲೀಲೆಯೊಳುದಯಾದ್ರಿ ಶಿಖರದೊಳಗೆ ಬಹು । ಬಾಲಸೂರ್ಯರು ಕೂಡಿದಂತೆ ॥ (61)

ಮುತ್ತಿನಂಗಡಿಗಳ ರನ್ನದಂಗಡಿಗಳ । ನಿತ್ತೆರದೊಳಗೆಡಬಲದಿ ॥
ಮೊತ್ತವ ನೋಡುತ ರಾಜಬೀದಿಯೊಳ ವ । ಚಿತ್ತದೊಳಚ್ಚರಿವಡುತ ॥ (62)

ಎಲ್ಲಿನೋಡಲು ಕೇರಿಕೇರಿಯ ಮನೆಗಳು । ಝಲ್ಲಿಪಟ್ಟೆಯನಲಂಕರಿಸಿ ॥
ಮಲ್ಲಿಗೆ ಜಾಜಿಯ ಪೂಮಾಲೆಗಳಿಂದ । ಫುಲ್ಲಶರನ ಪುರದೊಳಗೆ ॥ (63)

ಮಕರ ತೋರಣಗಳು ಮೀನಧ್ವಜಂಗಳ । ನಿಕರವೆಸೆಯಲಾ ಪುರವು ॥
ಮಕರಾಂಶ ಮೀನಾಂಕನೆಂಬ ನಾಮಂಗಳು । ಪ್ರಕಟಪುದಾಪುರದ ಭೂವರಗೆ ॥ (64)

ಇಂತೊಪ್ಪುವಾರಾಜಧಾನಿಯೊಳಗೆ ಬಂದು । ಕಂತುವಿನರಮನೆಗಾಗಿ ॥
ಸಂತಸದಿಂದ ನೋಡುತಲೈತಂದ ಭೂ । ಕಾಂತ ಮಹತ್ತರನಾಗ ॥ (65)

ಹೇಮಾಂಬುಜದ ಕರ್ಣಿಕೆಯೊ ಯೆಂಬಂದ ದೊ । ಳಾನಗರಿಯ ನಟ್ಟನಡುವೆ ॥
ಭೂಮೀಶನರಮನೆ ಸೋಳ್ಪರ ಕಣ್ದುಂಬಿ । ಗಾಮೋದವನು ಪುಟ್ಟಿಸುತ ॥ (66)

ಸುತ್ತಿದ ಚಿನ್ನದ ಕೋಟೆ ಗೋಪುರದ್ವಾರ । ಮುತ್ತು ರತ್ನಗಳ ಕೀಲಿಸಿದ ॥
ಚಿತ್ರರವಾದ ಕವಾಟ ಪುಟಗಳಿಂದ । ಚಿತ್ರಜನರಮನೆಯಿಹುದು ॥ (67)

ಮದಧಾರೆಯಿಂದ ಮಜ್ಜನವನು ಜಯಲಕ್ಷ್ಮಿ । ಗೊದಗಿಸುತೊಪ್ಪಿಹವಲ್ಲಿ ॥
ಮದಗಜಗಳು ದಿಗ್ಗಜಗಳಂದದೊಳಾ । ಮದನನ ಮನೆಯ ಮುಂಗಡೆಯ ॥ (68)

ರಾಜಾಂಗಣದೆಡಬಲದೊಳಗೊಪ್ಪುವ । ವಾಜಿಸಾಲೆಗಳೊಳು ತಮ್ಮ ॥
ತೇಜವ ಬೀರುತ ಜಾತ್ಯಶ್ವಂಗಳು । ರಾಜಿಪವತಿ ಲೀಲೆಯಿಂದ ॥ (69)

ವೀರಭಟರ ಮೊತ್ತವಿಹುದು ಸಂಗ್ರಾಮವ । ಹಾರೈಸು ತನುದಿನವಲ್ಲಿ ॥
ವೀರಶೃಂಗಾರದಿಂ ಪ್ರಳಯ ಭೈರವ ನಾ। ಕಾರದಿಂದೆತ್ತಿ ಕೈದುಗಳ ॥ (70)

ನವರತ್ನ ಮಯವಾದಾಸ್ಥಾನ ಮಂಟಪ । ಕವನೀಶ ಬಂದು ಸಾಮಂತ ॥
ನಿವಹವ ಕರಣಿಕ ಮಂತ್ರಿ ಸೇನಾಧ್ಯಕ್ಷ । ದವರನು ಕರೆಸಿದನಾಗ ॥ (71)

ಭದ್ರಾಸನವನಲಂಕರಿಸಿದನುದ । ಯಾದ್ರಿಯ ಸೂರ್ಯನಂದದೊಳು ॥
ಕ್ಷುದ್ರಾರಾತಿ ವಿದ್ರಾವಣ ನಪಗತ । ನಿದ್ರ ಶೃಂಗಾರ ಸಮುದ್ರ ॥ (72)

ಸಂಗೀತ ಸಾಹಿತ್ಯ ಭರತನಾಟಕ ಕಾವ್ಯ । ಶೃಂಗಾರ ಶಾಸ್ತ್ರಗೋಷ್ಠಿಯೊಳು ॥
ಅಂಗಜನಿರುತಿರ್ದ ಯಡಬಲದೊಳು ಮೋಹ । ನಾಂಗಿಯರಿಕ್ಕೆ ಚಾಮರವ ॥ (73)

ವಿಟವಿದೂಷಕ ಪೀಠಮರ್ದನಾಗರಿಕರಿಂ । ನಟರಿಂ ಗಾಯಕರಿಂದ ।
ಭಟರಿಂ ವೇಶಿಯರಿಂದ ಸೊಬಗನಾಂತು । ಪಟುವಾಗಿರ್ದುದಾಸ್ಥಾನ ॥ (74)

ಪೊಸ ಜವ್ವನದ ಪೊಂಬೊಗರಿ ಮೊಲೆಯನಿ । ಟ್ಟೆಸಳು ಗಂಗಳ ನೀಲಗುರುಳ ।
ಅಸಿನಡುವಿನ ಮೋಹನಾಂಗಿಯರಿಂದ ಕ । ಣ್ಗೆಸೆದುದು ಮದನನಾಸ್ಥಾನ ॥ (75)

ಗಿಳಿನುಡಿಗಳ ಕಳಹಂಸ ಕೋಕಿಲಾಲಾಪ । ಗಳಸೋಗೆ ಮುಡಿಯ ಕಾಂತೆಯರು ॥
ಬಳಸಿರ್ದುದರಿಂದವ್ರ ಕಾಮದೇವನ । ಬಳಗವವೆಂಬರು ಬಲ್ಲವರು ॥ (76)

ಕುಸುಮದಂದದಿ ಮೃದು ಕಬ್ಬಿನಂದದಿ ಸವಿ । ಎಸೆವಜಾಣ್ನುಡಿಯಿರಲವಗೆ ॥
ಸುಮಬಾಣನು ಕಬ್ಬು ಬಿಲ್ಲನೆಂಬರು ಜಾಣ । ರೊಸೆದಾ ಮನಸಿಜ ನೃಪನ ॥ (77)

ತನು ಕಾಂತಿಯೊಡನೆ ಕುಂಡಲಹಾರ ಮಕುಟದ । ಮಿನುಗುವ ಕಾಂತಿಗಳೆಸೆಯೆ ॥
ಮನಸಿಜನಾಸ್ಥಾನ ಸೂರ್ಯನಿದಿರೊಳಂದ್ರ । ಧನು ಮೂಡಿದಂತೊಪ್ಪಿತಾಗ ॥ (78)

ಅಂಗದ ರುಚಿಜಲವಾಸ್ಥಾನ ಸರಸಿಯ । ಸಿಂಗರಿಸಿರೆ ರಾಜಹಂಸ ॥
ಕಂಗೊಳಸಿದ ನೃಪ ಪುಂಡರೀಕರೊಳು ಬೆ । ಡಂಗಿಂದ ಹಂಸನಂದದೊಳು ॥ (79)

ಆಲೆವಟ್ಟಲು ಕುಂಚ ಕಾಳಂಚಿಗಿಂಡಿಯ । ಬಾಲೆಯರೆಡಬಲದಲ್ಲಿ ॥
ಲೀಲೆಯಿಂ ಪಿಡಿದಿರಲಾ ಸ್ಥಾನದೊಳು ಪೂ । ಗೋಲನೊಪ್ಪಿದ ಸೊಬಗಿಂದ ॥ (80)

ಭರತೇಶ್ವರ ತನ್ನ ಬಳಗಟ್ಟಿದ ಮಹ । ತ್ತರಬಂದನೆಂಬ ವಾರ್ತೆಯನು ॥
ಪರಿಚಾರಕರಿಂದ ಕೇಳಿ ಕರೆಸಿದನಾ । ದರದಿಂದ ಬಾಹು ಬಲೀಶ ॥ (81)

ಬಂದು ಸಾಷ್ಟಾಂಗವೆರಗಿ ಕೈಮುಗಿದಾ । ನಂದದಿಂ ಕುವರನ ರೂಪ ॥
ಒಂದರೆಗಳಗೆ ಕಣ್ಮನದಣಿವಂದದಿ । ನಿಂದು ನಿಟ್ಟಿಸಿ ನೋಡಿದನು ॥ (82)

ಈ ರೂಪೀಜಾಣ್ಕೆ ಯೊಗಾಡಿ ಮೋಡಿ ಮ । ತ್ತಾರಿಗು ಧರೆಯೊಳಿಲ್ಲೆಂದು ॥
ಮಾರನಹುದು ಕಡುಧೀರನಹುದುಕು । ಮಾರ ಶಿರೋಮಣಿಯಹುದು ॥ (83)

ಪುರುಪರಮೇಶನ ಕುವರರೊಳಗೆ ನಮ್ಮ । ಭರತೇಶ್ವರಗಿದಿರಿಲ್ಲ ॥
ಪರಿಕಿಸಲವನಿಗು ಈ ತೇಜ ಮೀಗಾಡಿ । ದೊರೆಯದೆಂದೊಳಗೆ ಚಿಂತಿಸಿದ ॥ (84)

ಕ್ಷಾತ್ರ ತೇಜವೆ ಮೂರ್ತಿಗೊಂಡಂತೆಯವನ ವಿ । ಚಿತ್ರದವಯವೊಪ್ಪಿಹುದು ॥
ಸೂತ್ರಿಸುತಿಹುದು ಶೃಂಗಾರ ಭಾವಗಳನು । ನೇತ್ರಕಚ್ಚರಿಯ ಪುಟ್ಟಿಸುತ ॥ (85)

ಕಂಡು ಭರತ ಚಕ್ರಿ ಕಳುಹಿವ ರತ್ನಕ । ರಂಡಕವನು ಮುಂದಿಟ್ಟು ॥
ಗಂಡರ ಗಂಡ ನಿಮ್ಮಗ್ರಜ ಸಕಲದಿ । ಙ್ಮಂಡಲ ಪತಿ ಕಳುಹಿದನು ॥ (86)

ಎಂದು ಪೇಳ್ದವನಿಗುಚಿತವಾದ ತಾಣದೊ । ಳಂದು ಕುಳ್ಳಿರಹೇಳಲಾಗ ॥
ಬಂದು ಮುದ್ರೆಯನೊಡೆಯುಲು ಸಂಧಿ ವಿಗ್ರಹಿ । ತಂದು ರನ್ನದ ಭೂಷಣಗಳ ॥ (87)

ತೋರಿ ಲೇಖನವನು ರಾಯಸದವನಿಂದ । ಓದಿನೋಡಿಸಿ ಭೂವರನ ॥
ಸಾರೆ ನಿಂದೋದಿದ ಮಧುರೋದ್ಧಾರ ಗಂ । ಭೀರನಾದದೊಳೆಂತೆನಲು ॥ (88)

ಸ್ವಸ್ತಿ ಸಮಸ್ತ ಭೂಭುಜ ಮೌಲಿ ರತ್ನಗ । ಭಸ್ತಿ ರಂಜಿತ ಚಾರುಚರಣ ॥
ದುಸ್ತರ ವೈರಿತಿಮಿರಮಾರ್ತಾಂಡ ಪ್ರ । ಶಸ್ತ ದಿಗ್ವಿಜಯ ಪ್ರಚಂಡ ॥ (89)

ಪುರುಪರಮೇಶನ ಚರಣಾಬ್ಜ ಭೃಂಗ ಭಾ । ಸುರತರ ಕರುಣಾಂತರಂಗ ॥
ಭರತೇಶ್ವರ ಚಕ್ರಿಯುನ್ನ ಪ್ರಿಯಾನುಜ । ವರಬಾಹು ಬಲಿ ಕುಮಾರನಿಗೆ ॥ (90)

ಚಿತ್ತಾನುರಾಗದಿಂ ಹರಸಿಯಾಲಿಂಗಿಸಿ । ಮತ್ತಪ್ಪುದೆನಲು ಮಾಣ್ದೆಂದು ॥
ಅತ್ತಣ ಕಾರ್ಯವೆಲ್ಲವು ತಿಳದುದು ಭೂ । ಪೋತ್ತಮ ಸುಖದಿನಿರ್ದಪನೆ ॥ (91)

ಪುರವನು ಪೊಕ್ಕು ತಮ್ಮಂದಿರ ಮೇಗಣ । ಕರುಣದಿಂದೀಗ ಕಳುಹಿದ ॥
ಪರಿಯೊಳ್ಳಿತಾಯಿತು ದೊರೆಗಳೆಲ್ಲರು ಬಂ । ದೆರಗಿದರೆಂಬ ವಾರ್ತೆಯನು ॥ (92)

ಅಂದೆ ಕೇಳ್ದವಿನ್ನೇನಾದರು ಮ । ತ್ತೊಂದು ತೊಡರುಂಟೆ ಪೇಳು ॥
ಎಂದೆನೆ ದಿಗ್ವಿಜಯವನಾಂ ಸಂಕ್ಷೇಪ । ದಿಂದ ಸೂಚಿಪೆನೆಂದ ದೂತ ॥ (93)

ಮೊದಲು ತ್ರೈಲೋಕ್ಯ ಸಾಮ್ರಾಜ್ಯ ಕಾರಣ ಮಪ್ಪ । ಪದಪದ್ಮಗಳ ನಾದಿ ಜಿನನ ॥
ಮುದದಿಂದ ಪೂಜಿಸಿ ಚಕ್ರರತ್ನವ ಬಂದು । ತದನಂತರದೊಳು ಪೂಜಿಸಿದ ॥ (94)

ಮದಕರಿಘಟೆಗಳ ತುರಗನಿಕರ ಪದ । ಹತಿಯಿಂದೇಳ್ ಕೆಂದೂಳು ॥
ಕೆದರೆ ಸೂರ್ಯನತೇಜ ಮಡಗಿತು ಕತ್ತಲೆ । ಪುದಿದಂತೆ ದಿಕ್ಚಕ್ರವಾಯ್ತು ॥ (95)

ಪುರವನು ಪೊರಮಟ್ಟು ಪೂರ್ವದಿಗ್ವಿಜಯಕ್ಕೆ । ಭರತೇಶಸೇನೆಯೊಳ್ಗೂಡಿ ॥
ಬರೆಕಂಡು ದೊರೆದೊರೆಗಳು ಕಪ್ಪವ ಕೊಟ್ಟ । ಸಿರಿಯನದೇನ ಬಣ್ಣಿಪೆನು (96)

ಗಿರಿದುರ್ಗ ಜಲದುರ್ಗ ವನದುರ್ಗಂಗಳ । ಹರಿದಾಳಿಯಿಟ್ಟು ತೆಕ್ಕೊಂಡು ॥
ಚರಣಕೆರಗಿದವರನು ಮನ್ನಿಸಿದ ಸಿಂ । ಗರವನದೇನ ಪೇಳುವೆನು ॥ (97)

ಶರಧಿಯೊಳೊರ್ವನೆ ರಥವೇರಿ ಪೋಗಿ ವ್ಯಂ । ತರರ ಕೈಯಿಂದ ಕಪ್ಪವನು ॥
ಭರದಿಂದ ತೆಕ್ಕೊಂಡ ಭಾಗ್ಯವನಾನೆಂ । ತೊರೆವೆನು ನಿನ್ನಗ್ರಜನಾ ॥ (98)

ಆ ವಿಜಯಾರ್ಧ ದೇವನದೊಂದು ಶರದಿಂದ । ಭಾವಿಸಿ ಕಪ್ಪವಕೊಂಡು ॥
ಆ ವಿಜಯಾರ್ಧ ಕವಾಟವನೊಡೆಯಿಸಿ । ತೀವಿತೀ ಮಿಶ್ರಗುಹೆಯೊಳು ॥ (99)

ಕೃತಮಾಲ ಪೇಳ್ದಂತೆ ಕಾಕಿಣಿ ರತ್ನದಿಂ । ಪ್ರತಿಸೂರ್ಯ ಚಂದ್ರರ ಬರೆಸಿ ॥
ನುತ ಚಕ್ರ ರತ್ನನಡೆಯೆ ಸೇನೆ ನಡೆದೊಂ ದತಿಶಯವನು ಪೇಳಲಳವೆ ॥ (100)

ಗಿರಿಯನು ಪೊರಗಿಕ್ಕಿ ಪೋಗೆ ಮಧ್ಯಮ ಖಂಡ । ದರಸುಗಳದಿರಾಗಿ ಬಂದು ॥
ಭರದಿಂದ ತಾಗಿ ಚಿಲಾತ ವರ್ತರುಗುರು । ಮೇಘ ಮುಖದದೇವತೆಗಳ ॥ (101)

ಓಡಿಸಿ ಜಯನೋರ್ವನೆ ಬಂದುರು । ಪಾಡು ಪಂಥಗಳನು ಬಿಟ್ಟು
ನಾಡರಸುಗಳೆಲ್ಲ ಕಪ್ಪವ ಕೊಟ್ಟರಿ । ನ್ನಾಡಲೆನ್ನಳವೆಯಾ ಸೊಬಗ ॥ (102)

ಆ ಸಿಂಧುದೇವಿಯು ಕಾಣಿಸಿಕೊಂಡಾ । ಭಾಸುರ ಹಿಮವದ್ಗಿರಿಯ ॥
ನಾಸಿಗ ಹಿಮವತ್ಕುಮಾರ ಕಾಣಿಸಿಕೊಂಡ । ಲೇಸನದೇನ ಪೇಳುವೆನು ॥ (103)

ಒಂದ, ವೃಷಭಗಿರಿಯೊಳಗಂಕಮಾಲೆಯ । ನಿಂದು ತಾ ಬರೆಸಿದ ಬಳಿಕ ॥
ಹಿಂದೆಯ್ದಿ ಗಂಗಾ ದೇವಿಯನೆರಗಿಸಿ । ದಂಡವನೇನೆಂದು ಪೇಳ್ವೆ ॥ (104)

ಅಲ್ಲಿಂದ ಬಂದಾ ವಿಜಯಾರ್ಧ ಶ್ರೇಣಿಯ ಬಲ್ಲಿದ ವಿದ್ಯಾಧರರ ॥
ಎಲ್ಲರ ಕೈಯ ಕಪ್ಪವಕೊಂಡ ಮಹಿಮೆಯ । ಸೊಲ್ಲಿಸಲೆನಗಳವಲ್ಲ ॥ (105)

ಮುನ್ನಿನಂದದೊಳಾಗಿರಿಯ ಕವಾಟವ । ತನ್ನಸೇನಾಪತಿಯಿಂದ ।
ನನ್ನಿಯಿಂ ತೆರೆಯಿಸಿಯಲ್ಲಿ ಸುಭದ್ರಾ । ಕನ್ಯಾರತ್ನವ ಕೈಕೊಂಡು ॥ (106)

ಆಗುಹೆಯೊಳು ಮುನ್ನಿನಂದದಿ ಬಂದು ಮ । ತ್ತಾಗಿರಿದ್ವಾರದೊಳರ್ದ ॥
ಬೇಗಕಾಣಿಸಿಕೊಂಡು ನಾಟ್ಯಮಾಲನು ಬಂ । ದಾಗಮಕವಪೇಳಲಳವೆ ॥ (107)

ಇಂತೆಲ್ಲರನೊಂದೇ ಚಕ್ರರತ್ನದಿಂ । ದಂತರಿಸದೆ ಸಾಧಿಸಿದ ॥
ಕಂತು ರಾಜೇಂದ್ರ ನಿನಣ್ಣಜಗಿನ್ನೊಂದು । ಚಿಂತೆಯುಂಟದ ನೀನೆ ಬಿಡಿಸು ॥ (108)

ನಿನ್ನ ಕಂಡಲ್ಲದೆ ಪುರವನು ಪೊಗೆನೆಂದು । ನನ್ನನಟ್ಟಿದನು ಚಕ್ರೇಶ ॥
ಭಿನ್ನವೆ ಸಾಮ್ರಾಜ್ಯ ಪೆರಡುಂಟೆ ನೀಬಂದು । ಮನ್ನಿಸುಪೆರವೇತಕೆಂದ ॥ (109)

ವಿನಯದೊಳೆರಡುಂಟು ಸಹಜ ಕೃತ್ರಿಮ ಪೆಂ । ದವನಿಯೊಳ್ನನ್ನೊಳಪೆರಡು ॥
ಮನದೆ ಗೊಳುತಳಿಪೆ ನಿನ್ನೊಡೆಯನ ಪಿಂಕ ವನು ಪೇರದಿರು ನಮ್ಮಮುಂದೆ ॥ (110)

ಅರುಣ ಲೋಚನ ಕೆಂಪಾದ ಕಪೋಲವಿ । ಸ್ಫುರಿತಾಧರ ಭ್ರುಕುಟಿಗಳು ॥
ಪಿರಿದು ಕೋಪಾವೇಶವನು ಸೂಚಿಸುತಿರೆ । ಚರನೊಳು ನುಡಿದನಿಂತೆಂದು ॥ (111)

ನಿನ್ನೊಡೆಯನ ಸಾಹಸವ ಪೇಳುವ ನಿನ್ನ । ಬಿನ್ನಾಣ ಪೇ ಪೇಳುತಿದೆ ಕೋ ॥
ಬನ್ನಗಳನು ನಾವು ಕೇಳತಿಲ್ಲವೆ ನಾ । ಕಿನ್ನು ಪೇಳದಿರೆಮ್ಮ ಮುಂದೆ ॥ (112)

ದೂತನೆ ಲಕ್ಷಣವಹುದು ತನ್ನೊಡೆಯನ । ಮಾತನೆ ಮಾರ್ಕೊಂಡು ಪೇಳ್ವ ॥
ರೀತಿಯಿಂ ತಲ್ಲದೊಡೆಮ್ಮ ಬಳಗೆ ನಿನ್ನ । ನೇತಕಟ್ಟುವನು ನಿನ್ನೊಡೆಯ ॥ (113)

ಮುಂದಿಟ್ಟು ಚಕ್ರವ ಪಾಳಬಿರ್ದವರ ಕೈ । ಯಿಂದ ತಿರಿದುಕೊಂಡು ಧನವ ॥
ತಂಡದ ಬಣ್ಣಬಗೆಯ ಪೇಳುವ ನಿ । ನ್ನಂದವನೇ ನೆನ್ನಬಹುದು ॥ (114)

ಕರುಣದಿಂದಿತ್ತರಲ್ಲದೆಯಂಜಿ ಕೊಟ್ಟರೆ । ಸುರರಿಂಗೆ ನರರಿಂದ ಭಯವೆ ॥
ಎರಕದಿಂದಾನುಸುರುವೆ ನೀನು ಕೇಳುನಿ । ಮ್ಮರಸ ಸಾಹಸಗಳನು ॥ (115)

ಹಸಿದು ಹುಲ್ಲೊಳು ಬಿದ್ದಿರ್ದ ತಾಮೂರುದಿ । ವಸವುನ್ನೀರ ತಡಿಯೊಳು ॥
ಸಸಿನಾದಿ ಜಲಮಂತ್ರ ಬಲದಿಂದ ಜಲಧಿಯ । ನುಸುಳ್ದು ಬಂದುದ ಕಂಡುಧನವ ॥(116)

ಕರುಣದಿಂದಿತ್ತರಲ್ಲದೆಯಂಜಿ ಕೊಟ್ಟರೆ । ಸುರರಿಗೆ ನರರಿಂ ಭಯವೆ ॥
ಎರಕದಿಂದದನುಸುರುವೆ ನೀನು ಕೇಳುನಿ । ಮ್ಮರಸನ ಸಾಹಸಗಳನು ॥ (117)

ಕುಂಬಾರರ ಚಕ್ರ ತಿರುಗುವಂದದಿ ಚಕ್ರ । ವಂಬರದೊಳಗೆಯ್ದಲದರ ॥
ಬೆಂಬಳಯೊಳು ಪೋಗಿ ತಿರುಗಿದುದೊಂದು । ಡೊಂಬ ತನವನೇನೆಂಬೆ ॥ (118)

ಮನುವಂಶ ದೊಳಗಿಂತಿ ತಿರಿದವರನು ನಾನು । ಕನಸಿನೊಳಗು ಕಾಣಲಿಲ್ಲ ॥
ಕೊನರಿಸಿ ಪೇಳುವೆ ಕೊರತೆಯಲ್ಲವೆ ನಮ್ಮ । ಮನುವಂಶ ದರಸರಿಗೆಲ್ಲ ॥ (119)

ಉತ್ತರ ಭರತ ದೊಳರಸನಿಗಾದ ವಿ । ಪತ್ತನು ನೀ ಕೇಳಲಿಲ್ಲ ।
ಮುತ್ತಿ ಚಿಲಾತ ವರ್ತರು ಬಲಕೆಲ್ಲ । ಕತ್ತಲೆ ಕವಿದಂತೆ ಮಾಡಿ ॥ (120)

ಸಿಡಿಲು ಮಿಂಚನು ತೋರಿ ಮಳೆಗರೆಯಲುನೆಲ । ಕಡಲಂತುಕ್ಕಲು ಕಂಡು ॥
ಅಡಿಯೊಳು ಚರ್ಮವ ಹಾಸಿ ಮೇಲ್ಗಡೆಯೊಳು । ಕೊಡೆಯನು ಪಿಡಿಯಿಸಿ ಬಲವು ॥ (121)

ಏಳುದಿವಸ ಪರಿಯಂತ ತೇಂಕಾಡಿತು । ಕೊಳಕಾಣದೆ ಗೂಡುಗೊಂಡು ॥
ಏಳುತಾಳುತಲಿರ್ದುದು ನಿನ್ನೊಡೆಯನ । ಕಾಳಗ ಕಡು ಸೊಬಗತ್ತೆ ॥ (122)

ಜಯ ಕುಮಾರಕ ನಿಲ್ಲದಿರ್ದೊಡೆ ತನಗಪ । ಜಯವನವರು ಮಾಡದಿಹರೆ ॥
ದಯದಾಕ್ಷಿಣ್ಯ ವಿಲ್ಲದ ಮನುಜರಿಗಾರು । ಭಯದಿಂದ ಬಂದೆರಗುವರು ॥ (123)

ಮುನ್ನಿನ ದೊರೆಗಳ ಪೆಸರನು ತೊಡೆಯಿಸಿ । ತನ್ನಂಕ ಮಾಲೆಯ ಬರಸೆ ॥
ಇನ್ನಾವುದು ಭಂಗವಿದರಿಂದ ಬಿಟ್ಟನೀ । ಚೆನ್ನಾಗಿ ಭಾವಿಸಿ ನೋಡು ॥ (124)

ಧನವೆಂಬುದರಸುಗಳಗೆ ಪುಣ್ಯ ಕೀರ್ತಿ । ಧನ ಪುಣ್ಯವಲ್ಲದುಳದ ಧನಗಳು ॥
ಮನೆಯೊಳುಳವ ವಸ್ತುಗಳಸಿದರಸುಗಳುನಿ । ಧನವನ್ನೈದುವರತ್ತೆ ॥ (125)

ಹಿರಿಯಣ್ಣಗೆರಗ ಬಹುದು ನೆತ್ತಿಯೊಳು ತಂದು । ಕರಗಸ ವಿಟ್ಟೆರಗಿಸುವ ॥
ಭರತಾಜ್ಞೆಯ ಭಯಕೆರಗುವೆನೆ ನಾ । ಪುರುಜಿನಪತಿಯ ಸುತನಲ್ಲೆ ॥ (126)

ವಿನಯ ವಿತರಣ ವಿವೇಕವಿಲ್ಲದೆ ತನ್ನ । ಮನೆಯನೆ ತೋರುತಲಿರ್ಪ ॥
ಜನಪತಿಗಾರು ಬಂದೆರಗುವರೆಂದು ನೀ । ನನು ಮಾನಿಸೈ ಮನದೊಳಗೆ ॥ (127)

ಎನ್ನಪೆಸರ್ಗೊಂಡು ಪೇಳೆ ಸರಿಸದಿರ್ದ । ಭಿನಭಾವದ ನೃಪನೆಡೆಗೆ ॥
ಎನ್ನನು ಕರೆದೊಯ್ಯ ಲೆಂದೀಗ ಬಂದಾ । ನಿನ್ನವಿವೇಕಕೆ ಸರಿಯೆ ॥ (128)

ಭರತೇಶ ಷಟ್ಖಂಡ ದರಸೆಂದು ಪೇಳ್ದಾ । ಸಿರಿಯನು ದೂರದೊಳ್ಕೇಳ್ದಾ ॥
ಇರುವ ಪ್ರೇಮವೆ ಸಾಕು ಬೆಸನಯ್ಯ ಜೀಯೆಂ । ಬರಸಾಳುತನ ನಮಗಿಲ್ಲ ॥ (129)

ಧರೆಯನು ತನಗು ನನಗು ಪಚ್ಚುಕೊಟ್ಟನು । ಪುರುಜಿನಪತಿ ಎನ್ನನೆಲಕೆ ॥
ಅರಸನು ತನ್ನ ನೆಲಕೆ ತಾನು ಕರ್ತನಾ । ಗಿರಲಿದರೊಳು ಪಾಲುಂಟೆ ॥ (130)

ಆ ಜಿನಪತಿಯುಂದು ತನೆಗು ನನಗು ಕೊಟ್ಟ । ರಾಜರೆಂದೆಂಬ ಬೆಸರನು ॥
ಪೂಜೆ ರಾಜಾಧಿ ರಾಜೇಂದ್ರ ನೆನಿಸಿ ಕೊಂಡ । ತೇಜ ತಾನೆಲ್ಲಿಂದ ಬಂತು ॥ (131)

ಬಲೆಯು ನೋಡಲು ಕೇಳ್ಮೃಗ ಸಿಕ್ಕುವಂದದಿ । ಬಲುದೊಡ್ಡ ಸಿಂಹಸಿಕ್ಕುವುದೇ ॥
ನೆಲೆಯುನರಿಯದೆ ಕಳುಹಿದಣ್ಣಾಜೆಯು । ಬಲುಮೆಯು ನೇನೆಂದು ಪೇಳ್ವಿ ॥ (132)

ಪುರು ತನೆಯರು ನಾವಿಬ್ಬರೆಂಬುದರಿಂದ । ಸರಿಮಿಗಿಲೆನ್ನ ದೋರ್ದಂಡ ॥
ಧುರದೊಳೀತನ ತೇಜವನು ತೂಗಲ್ಕಿದು । ನಿರುತ ತುಲಾದಂಡವಲ್ತೆ ॥ (133)

ಆರುಖಂಡವಗೆಲ್ದ ತನ್ನ ಪ್ರತಾಪವ । ತೋರೆ ಸಂಗರದೊಳು ತನ್ನ ॥
ಗಾರು ಮಾಡುವೆನೆನ್ನ ಕಲ್ಪಾಂತ ಪರ್ಯಂತ । ದೂರಿಗೀಡನು ಮಾಡಬೇಡ ॥ (134)

ಯುಗದಾದಿಯೊಳು ಅಣ್ಣ ತಮ್ಮಂದಿರೀರ್ವರುಕಾ । ಳಗವ ಮಾಡಿದರೆಂದೆನಲು ॥
ನಗೆಗೆಡೆಯಲ್ಲವೆ ತೊಡದೊರ್ಜನೆಳ್ನೊಳಗೆನ್ನ । ಬಗೆಯನೀನೇ ಕಾಣ ಬಹುದು ॥ (135)

ಎಂದು ಬಾಹುಬಲಿ ಕುಮಾರ ಕೋಪಾಟೋಪ । ದಿಂದ ನುಡಿದು ಕಳುಹಿಸಲು ॥
ಅಂದಾದೂತನು ಪಯಣಗತಿಗಳಿಂದ । ಬಂದನು ಭರತೇಶನೆಡೆಗೆ ॥ (136)

ಇದು ಶ್ರುತ ಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರ ಮವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯ । ಪದದೊಳು ದ್ವಾದಶ ಸಂಧಿ ॥ (137)

(ಹನ್ನೆರಡನೆಯ ಸಂಧಿ ಸಮಾಪ್ತಂ)

## ಹದಿಮೂರನೆಯ ಸಂಧಿ-

ಬಹಿರಂತರಂಗ ಶತ್ರುಗಳನು ಗೆಲ್ದಿಹ । ಪರದೊಳು ಕೀರ್ತಿಯುವಡೆದ ॥
ಬಹುಬಲಯುತ ಗುಮ್ಮಟಸ್ವಾಮಿ ನೀವೆಮ್ಮ । ಗ್ರಹಿಸಿದಯುವೆರದು ॥ (1)

ಅನಿತರೊಳಸ್ತಾದ್ರಿಯೊಳು ವಾರುಣೀ ಸಕ್ತ । ದಿನಕರ ನಾಗಲಾಕ್ಷಣವೆ ॥
ತನುರುಚಿಕೆಂಪೇರಿ ತೆಂಬಂತೆ ರಾಗದಿಂ । ಪನು ಬೀರುತಿರ್ದ ನೋಳ್ಪರಿಗೆ ॥ (2

ಕರಚೆಲುವಿಂದ ಸಿಂಗರವಾಗಿ ರಕ್ತಾಂ । ಬರವನು ನಿರಿವಿಡಿದುಟ್ಟ ।
ವರುಣಾನಿ ಪಿಡಿದು ನೋಡುವ ರನ್ನಗನ್ನಡಿ । ಇರವಾಂತುದಾ ರವಿಬಿಂಬ ॥ (3

ಖರದಿಂದ ಲೋಕಕೆ ತಾಪವ ಪುಟ್ಟಿಸು । ವರಗಳೆಲ್ಲರೆನ್ನಂತೆ ॥
ಇರದಧೋಗತಿ ಗೆಯ್ದುವರೆಂದು ತೋರ್ಪಂತೆ । ಶರಧಿಯೊಳನ ಮುಳುಗಿದನು ॥ (4)

ಪರಪುರುಷನ ಮೊಗವ ನೋಡಿದರೆ ತನ್ನ । ಪುರುಷ ಭಕ್ತಿಗೆ ಹಾನಿಯೆಂದು ॥
ಸರಸಿಜ ನೇತ್ರವ ಮುಚ್ಚಿಯೂ ಪದ್ಮಿನಿ । ಪುರುಷನು ಮೊಗದೋರುವನಕ ॥ (5)

ಚಕ್ಕ ವಕ್ಕಿಗಳಿಗೆ ವಿರಹವಾದುದ ಕಂಡು । ನಕ್ಕಳು ಕುಮುದಿನಿಯಾಗ ॥
ಗಕ್ಕನೆ ಕುಮುದೇಶ ಮೊಗದೋರೆ ಭುವಿಯೊಳ । ಗಕ್ಕರುಳ್ಳರಿಗದು ಸಹಜ ॥ (6)

ಕತ್ತಲೆ ತೆರೆಜಾರಲಿರುಳೆಂಬ ನರ್ತಕಿ । ಚಿತ್ತಜ ರಾಯನ ಮುಂದೆ ॥
ಬಿತ್ತರಿಸಿದ ಪುಷ್ಪಾಂಜಲಿಯೆನೆ ಕಾಂತಿ । ಪೆತ್ತು ತೋರಿದುವು ತಾರೆಗಳು ॥ (7)

ಇರುಳೆಂಬ ಕನ್ನೆಯು ದ್ವಿಜ ರಾಜನಿಗೆ ಬಿದಿ । ಪರಿಣಯದೊಳು ಬಿತ್ತಿಸಿದ ॥
ಪೊರೆದಂಕುರದ ಮೊಳೆಗಳೊಯೆಂಬಂತೆ ಬಿ । ತ್ತರಿಸಿ ತೋರಿದುವು ತಾರೆಗಳು । (8)

ಪೂರ್ವದಿಗ್ವನಿತೆಯ ಸಿರಿಮೊಗದಂತಾ । ಪೂರ್ವಾದ್ರಿಯನಲಂಕರಿಸಿ ॥
ಶಾರ್ವರೀಪತಿ ಸರ್ವಕಲೆಗೂಡಿ ಮೂಡಿದ । ನುರ್ವಿಗಾನಂದವಪ್ಪಂತೆ ॥ (9)

ತಳರ್ವಸೆ ಕರ್ಪೂರದ ಪಳುಕು ಪನ್ನೀರ್ಗಳ । ಚ್ಚಳಿಯಿಂ ವಿರಹಾಗ್ನಿಯನು ॥
ತಳರಿಪ ಮಿಥುನಕ್ಕೆ ಕಾವತೋರುವ ಪಾರಂ । ಬಳಿಯೆನೆಯಿಂದುದಯಿಸಿದ ॥ (10)

ಇರುಳೆಂಬ ನಲ್ಲಳ ಸರಸಿಜ ಕುಚಗಳ । ಕರದಿಂದ ಸೋಂಕೆ ಚಂದ್ರಮನು ॥
ಇರದಿಂದುಕಾಂತ ನಿತಂಬ ಪ್ರದೇಶದೊ । ಳ್ಪರಿದುದು ತುಳ್ಕದ್ರವಾಂಬು ॥ (11)

ಹರನರ್ಧಾಂಗದೊಳರ್ದ ಗೌರಿಯ ಬಟ್ಟ । ಸಿರಿಮೊಗದೆಳನಗೆಯಂತೆ ॥
ಪರೆದುದು ಮೆಲ್ಲಗೆ ಚಂದ್ರಿಕೆ ಕಣ್ಗೆ । ಸಿರಿವೆತ್ತು ಕಡಲುಕ್ಕುವಂತೆ ॥ (12)

ಇಂತೆಸೆವಚ್ಚ ಬೆಳ್ದಿಂಗಳೊಳಗೆ ಭೂ । ಕಾಂತ ಕೆಳೆಯರೊಡಗೂಡಿ ॥
ಸಂತೋಷದಿಂದ ಚಂದ್ರಿಕಾ ವಿಹಾರವ ಮಾಡ । ಲಂತರಿಸದೆ ಪೊರಮಟ್ಟ ॥ (13)

ನಾಗರಿಕರು ವಿಟ ಪೀಠಮರ್ದಕರು ಮ । ತ್ತಾ ಗುಣಯುತ ವಿದೂಷಕರು ॥
ಜಾಗರಿಕರೊಡಗೂಡಿ ವೇಶ್ಯಾವಾಟ । ಕಾಗ ಬಂದನು ಸೊಬಗಿಂದ ॥ (14)

ಪರಿಪರಿ ಪರಿಮಳವುಳ್ಳ ಹೂಮಾಲೆಯ । ಪರಿಮಳಕೆರಗೆ ತುಂಬಿಗಳು ॥
ಕರದಿಂದ ಜಡಿವ ಕಾಂತೆಯರೊಪ್ಪಿದರು ನೀಲ । ದುರುಬಿನ ಚೆಂಡಾಟದ ಬಣ್ಗಳಂತೆ ॥ (15)

ಜಾಜಿಮಲ್ಲಿಗೆ ಮಾಲೆ ಪಾದರಿವಕುಲ ಕೆಂ । ಜಾಜಿ ಸಂಪಿಗೆ ಕೇತಕಿಗಳ ॥
ರಾಜಿಪ ಕಂಪಿನ ಕಡಲೊಳಗೆಯ್ದಿದ । ರಾಜರದೇವ ಸಂತಸದಿ ॥ (16)

ಮನಸಿಜ ಮೋಹನ ಮಂತ್ರವ ಜಪಿಸುವ । ವನಿತೆಯರಂತೆ ಕೈಯೊಳಗೆ ॥
ನನೆಗಳ ಮಾಲೆಯನೆತ್ತಿಪಿಡಿದು ಮಾ । ನಿನಿಯರೊಪ್ಪಿದರು ಚೆಲ್ವಿಂದ ॥ (17)

ಆ ಸಖರೊಳಗೆ ವಿದೂಷಕ ಕೇಳಲು । ಪೂಸರಗಳ ಬೆಲೆಯನು ॥
ಆ ಸತಿಯರು ಪೇಳ್ದರಿವರ ಬೆಲೆಯನಾ । ಪೂಸರನೇ ಬಲ್ಲನೆಂದು ॥ (18)

ಎಸಲವ ಕೇಳ್ದು ಮುಗುಳ್ನಗೆಯನು ನಗು । ತಿನಿ ವಿಲ್ಲ ಮುಂದಕೆ ನಡೆಯೆ ॥
ಅನುಪಮ ಸೌಭಾಗ್ಯ ಶೃಂಗಾರ ರಸದಿ ಮೋ । ಹನವಾದ ಸೂಳೆಗೇರಿಯೊಳು ॥ (19)

ಸೊರೆಯ ಕುಚಾಗ್ರದೊಳಟ್ಟ ತಂತಿಗಳನು । ಬೆರಳಿಂದ ಮಿಡಿದು ಶ್ರುತಿಯನು ॥
ಕರಚೆಲುವಿಂದ ಕೂಡಿಸಿ ವೀಣೆಯನು ಸಪ್ತ । ಸ್ವರಗೂಡಿ ನುಡಿಸಿದಳಬಲೆ ॥ (20)

ಸಾರಂಗ ಸೌರಾಷ್ಟ್ರ ಭೈರವಿ ಕೇತಾರ । ಗೌಳ ವಸಂತ ಹಿಂದೋಳ ॥
ಮಾಳವ ಪಂಚಮ ಶ್ರೀರಾಗಂಗಳ । ನಾಳಾಪದಿಂ ಕೇಳಿಸಿದಳು ॥ (21)

ಮುಂದೆ ನಡೆಯೆ ಮುದದಿಂದಚ್ಚ ಬೆಳ್ದಿಂಗ । ಳಂದವ ಕಂಡು ಕಾಂತೆಯರು ॥
ಚಂದನದರಳೊಳು ಗಂಧ ದ್ರವ್ಯವನಿಟ್ಟು । ಕುಂದಣದೊನಕೆಯ ಪಿಡಿದು ॥ (22)

ವೃತ್ತ ಕುಚಗಳೊಲೆಯಲು ನಳತೋಳ್ಗಳ । ಕಂಕಣ ಧ್ವನಿ ಶ್ರುತಿಗೊಡಲು ॥
ಚಿತ್ತಜನಂಕ ಮಾಲಿಯ ಪಾಡುತಿಡಿದರು । ಚಿತ್ತವ ಸೂರೆಗೊಂಬಂತೆ ॥ (23)

ಪೂಸರಗೈಸಿರಿ ಹೆಚ್ಚಲಿಯನುದಿನ । ಸೂಸಲಿ ಬೆಳ್ದಿಂಗಳೀಗ ॥
ಓಸರಿಸಲಿ ವಿಟರಭಿಮಾನವೆಂದು ವಿ । ಲಾಸಿನಿಯರು ಪಾಡಿದರು ॥ (24)

ಮದನಗೆ ಸಾಮ್ರಾಜ್ಯದ ಪದವಾಗಲಿ ತನ । ಗಿದಿ ರಾದವರಿಗಪ ಜಯವು ॥
ಒದವಿ ಬರಲಿಯೆಂದು ಕ್ರಮದೊಳೋರೋರ್ವರು । ಸುದತಿಯರೊಲಿದು ಪಾಡಿದರು ॥ (25)

ಅಲ್ಲಿಂದ ಮುಂದಕ್ಕೈದಲು ಸಿಂಗರವಾಗಿ । ಸಲ್ಲೀಲೆಯಿಂದ ನೀರರನು ॥
ಕೊಲ್ಲನೋಟದಿ ನೋಳ್ಪ ಮೊತ್ತವೆಣ್ಗಳ । ಫುಲ್ಲಾಸ್ತ್ರ ನಡೆನೋಡಿದನು ॥ (26)

ಉಟ್ಟು ದುಕೂಲವ ಮುತ್ತಿನಾಭರಣವ । ನಿಟ್ಟು ಮಲ್ಲಿಗೆಯನು ಮುಡಿದು ॥
ನಿಟ್ಟಿಸುತೆಡಬಲನಖಿ ಸಾರಿಕೆ । ತೊಟ್ಟನೈದಿದಳು ಕಣ್ಮರಸಿ ॥ (27)

ಮುಡಿ ಮೊಲೆ ಕುರುಳ್ಗಳು ನವಿಲೆಣೆವಕ್ಕಿಯು । ರಡಿಗಳಂದದಿ ಪಾರಲೋರ್ವ ॥
ಮಡದಿಯೊಲೆವುತ ಉಯ್ಯಲನಾಡಿದಳಾ । ವಿಟಜನಗಳ ನೊದೆವಂತೆ ॥ (28)

ನಗೆಮೊಗ ನಿರೆದಿಂಗಳಂತಿರೆ ತಾನುಟ್ಟ । ದುಗುಲ ಚಂದ್ರಿಕೆಯಂತಿರಲು ॥
ಮೃಗಧರನೊಡನೆ ಮಚ್ಚರಿಸುವಂತೊಲೆದೋರ್ವ । ಮುಗುದೆಯಾಡಿದಳುಯ್ಯಲನು ॥ (29)

ನವಿಲುಯ್ಯಲು ತಳಿರುಯ್ಯಲ ನೇರಿಸಿ । ಯುವತಿಯರನು ವಿಟಜನರು ॥
ನವ ಮೋಹನವಿತ್ತು ತೂಗಿದರವರ ಯೌ । ವನವನು ಸೂರೆಗೊಂಬಂತೆ ॥ (30)

ನೆಲೆಮೊಲೆ ಸುಳಿನಾಭಿಗಳ ಚೆಲ್ವಿಕೆಯ ನೋಡಿ । ನಲಿವುತ ವಿಟರಲ್ಲಲ್ಲಿ ॥
ಒಲಿದು ತೂಗಿದರುಯ್ಯಲ ನೊತ್ತಿಯವರ ಮೇ । ದಲೆ ಜಾರುವಂತೆ ॥ (31)

ಅವರ ವಿನೋದವ ನೋಡುತ ಮುಂದಕೆ । ಯುವರಾಜ ಹಂಸನಡೆಯಲು ॥
ನವರತಿಯಂತೆ ಮೋಹಿಸುತಿರ್ಪ ವೇಶ್ಯಾ । ನಿವಹವ ಕಂಡನರ್ತಿಯೊಳು ॥ (32)

ಇಂದು ಮೂಡಿದ ನಿನ್ನ ಕೊಂದು ಹಾಕದೆಮಾಣ । ಕಂದರ್ಪನೆಂದು ಕೆಳದಿಯು ॥
ಬಂದು ಕಾಲ್ಗೆರಗಿದಳಿನ್ನ ಕಾಂತನ ಕರ । ತಂದಳು ಎಂದೋರ್ವಕಾಂತೆ ॥ (33)

ತಂಗಾಳ ವಿರಹದ ಕಿಚ್ಚನೇಳಸುತಿದೆ । ತಿಂಗಳ ಬೆಳಗಿನನಂತೆ ॥
ಅಂಗವ ಸುಡುತಿದೆ ಯಿಂದಿನವಸ್ಥೆಯ । ಹಿಂಗಿಸವನ ಕರತಂನು ॥ (34)

ಎನಲಾ ಸಖಿಯಿಂತೆಂದಳು ನಿನ್ನಿನಿ । ಯನ ಪಕ್ಷ ಪಗೆ ನಿನಗೆಲ್ಲ ॥
ವಿನಯನೋರ್ವನು ನಿನ್ನವಶವಾಗಲಿವರೆಲ್ಲ । ನಿನಗನುಕೂಲವಾಗಿಹರು ॥ (35)

ವಿಷದೊಡ ಹುಟ್ಟಿದ ಚಂದ್ರನು ತೆಂಕಣ । ದೆಸೆಯಿಂದ ಬಂದ ತಂಗಾಳ ॥
ಹಸಗೆಡಿಸವೆ ನಿನ್ನ ಮೊಗ ಸುಯ್ಯಲ ಸೊಬಗಿನಿಂ । ದೆಸಕಕೆ ಮಚ್ಚರಿಸುವರು ॥ (36)

ಆ ನುಡಿಗೇಳ ಮುಂದಕೆ ನಡೆತರಲೋರ್ವ । ಮಾನಿನಿ ನಲ್ಲನ ಬರವ ॥
ತಾನೋಡಿ ವಿರಹಾಗ್ನಿಯಿಂದ ಕಣ್ಬನಿಗಳ । ಸೋನೆಯ ಸುರಿದಳಂತೆಂದು ॥ (37)

ಹೂವಿನ ಮುಗುಳರಳ್ದುವು ಕರ್ಗಡಿಯಾಯ್ತು । ದೀವಿಗೆ ಬೆಳ್ದಿಂಗಳಂದ ॥
ಈ ವಿಧವಾಯ್ತೇಕೆ ಬಾರನೊನಲ್ಲನೆಂ । ದಾವಧು ತಳರೊಳು ಪೊರಳ ॥ (38)

ತಂಗಿಯು ಕಳುಹಲವಳ ನೆರೆದಪನವ । ನಂಗವ ಬಲ್ಲೆನು ನಾನು ॥
ತಂಗಾಳ ಕೋಗಿಲೆ ತಳಿರೆ ತಾವರೆಯೆ ಬೆ । ಳ್ದಿಂಗಳೆ ನಲ್ಲನ ಬರಿಸಿ ॥ (39)

ಕರಗಳ ಮುಗಿವೆನು ಕಾಲ್ಗೆರಗುವೆ ನಿಮ್ಮ । ಶರಣ್ಪೊಗುವೆನು ಬಲಗೊಂಬೆ ॥
ವಿರಹ ತಾಪಂ ಬೀಸಿಯೆಂದೋರ್ವ ತರುಣಿ ಕಾ । ತರಿಸಿ ನಾಣ್ದೊರೆದು ನುಡಿದಳು ॥ (40)

ಮುಂದೆನಡೆಯೆ ಮತ್ತೊರ್ವಳು ॥
ಅದೆ ಬಂದ ಯಿಂದಿನ ಬಾರಿಯುವನದೆಂದು । ಮೊದಲಿದ್ದ ವಿಟನ ಕಳುಹಿಸಿ ॥
ಇದಿರೆದ್ದು ಬಂದು ನಗುತ್ತಲಪ್ಪಿದಳೊರ್ವ । ಚದುರೆ ಮತ್ತೊಬ್ಬ ಚದುರನ ॥ (41)

ಮತ್ತೊರ್ವಳು ॥

ಮೆಲ್ಲನೆ ಮುಸುಕಿಟ್ಟು ತಲೆಯ ಮರಸಿ ಬಪ್ಪ । ನಲ್ಲನ ಕಂಡೊರ್ವ ಯುವತಿ ॥
ಸೊಲ್ಲಿಸುತಿದೆ ನಿನ್ನ ಪೊಸಕಂಪು ರಸಿಕ ನೀ । ನಲ್ಲಿ ನಿಲ್ಲದಿರೆನ್ನ ಮುಟ್ಟದಿರು ॥ (42)

ಎಂದು ಪೇಳಲು ರಭಸದಿ ಬಂದು ಬಿಗಿಯಪ್ಪ । ಲಂದಾ ಸುಖರಸದಿಂದ ॥
ಮಂದಗಮನೆ ಪರವಶೆಯಾಗಲವಳ ನಾ । ನಂದಿಸಿದನು ಧೂರ್ತವಿಟನು ॥ (43)

ಅಲ್ಲಿಂದ ಮುಂದೆ ನಡೆಯಲೋರ್ವಳು ॥

ವಾರಿಜ ಕುಡ್ಮಳ ಕುಚೆಯುಗೆ ಚಾರುಚ । ಕೋರಾಕ್ಷಿ ಶೃಂಗಾರ ಶರಧಿ ॥
ನಾರಿ ಕಂಡಳು ಶಶಿಗಲ್ಲ ಪುತ್ಥಳಿಯಂತೆ ಮಾರಕುಮಾರ ಚಂದ್ರಮನ ॥ (44)

ಅನಿತರೊಳಗೆ ಕೆಳೆಯರ ಮರೆಗೊಂಡಾ । ಮನಸಿಜ ಮುಂದಕೆ ನಡೆಯೆ ॥
ಮನಸಿಜಾಗಮದೊಳ್ಪ ಕೇಳದಳಂತೆಂದು । ವನಿತೆಯೋರ್ವಳು ವಿಟನೊಡನೆ ॥ (45)

ಹೆಂಗಳ ಜಾತಿ ಭೇದವ ತಿಳಿದವರಂತ । ರಂಗದೊಲುಮೆಯನು ಕಂಡು ॥
ಅಂಗಜ ಕಲೆಗಳ ನೆಲೆಯಬಲ್ಲಾತನೆ । ಹೆಂಗಳಗಭಿನವ ಮದನ ॥ (46)

ಚುಂಬನಕೆಡೆಗಳದಾವುವು ನಖಕ್ಷತ । ಕೆಂಬಾವುದು ಜಾಣೆಯರಿಗೆ ॥
ನಂಬುಗೆಯಾವ ಪುರುಷನೊಳಗಪ್ಪುದಿಂ । ತೆಂಬುದ ನೀ ತಿಳಿದು ಪೇಳು ॥ (47)

ಆವ ಜಾತಿಯ ಹೆಣ್ಣಿಗಾವ ಜಾವದಿ ಕೂಟ । ವಾವ ಬಂಧದಿ ತೃಪ್ತಿಯೆಂದು ॥
ಈ ವಿಧಗಳ ಬಲ್ಲ ಮೋಹಿಯುವನೆ ಕಾಮ । ದೇವನು ಜಾಣೆ ಹೆಂಗಳಗೆ ॥ (48)

ಅತಿ ಸೌಖ್ಯವಾವ ಪೆಣ್ಗಳ ನೆರೆದರೆ ಯುವ । ರತಿಗಾವ ಪೆಣ್ಣುಗಳ್ಯೋಗ್ಯ ॥
ಅತಿಮೋಹ ಯಾವಾಗ ಸ್ತ್ರೀ ಪುರುಷರಿಗೆಂಬ । ರತಿರಹಸ್ಯವನು ನೀ ಪೇಳು ॥ (49)

ಇವರ ಭೇದವನೆಲ್ಲ ವೃಷಭೇಶ್ವರ ಮುನ್ನ । ಯುವರಾಜ ಮದನನಿಗೊಲಿದು ॥
ವಿವರಿಸಿ ಪೇಳದನೆಂಬುದ ಕೇಳ ಬ । ಲ್ಲೆವು ನಾವು ವೃಷ ಕರಣಗಳ ॥ (50)

ಪೇಳಲಾ ನುಡಿಗೇಳೆ ಮನಸಿಜ ನಸುನಕ್ಕು । ತಾಳ ಸಂತಸವನು ಮನದಿ ॥
ಊಳಗದವರೊಡನೆಯ್ತಂದ ಮುಂದೆ ತಂ । ಗಾಳಯಂದದಿ ತಂಪುಗೊಡುತ । (51)

ಪೊಂಬಟ್ಟಲೊಳು ಮಧುವನು ಪಿಡಿದಿರ್ದನಿ । ತಂಬಿನಿಯನು ಕಂಡೊರ್ವ ॥
ಚುಂಬಿಸಿಯಧರ ಮಧುವ ಸವಿದದನುಣ್ಬ । ಹಂಬಲ ಬಿಟ್ಟನೇನೆಂಬೆ ॥ (52)

ಬಟ್ಟಲ ಮಧುವ ನೋರ್ವನು ತನ್ನ ಬಾಯೊಳ । ಗಿಟ್ಟು ಕೊಡುವ ಸಮಯದೊಳು ॥
ತೊಟ್ಟನೆಯಧರಾಮೃತವನು ಸವಿದನು । ಬಟ್ಟಮೊಗದಿ ಮೊಗವಿಟ್ಟು ॥ (53)

ಬಿಡು ಬಿಡು ಬಟ್ಟಲೊಳಿರ್ದ ಮಧುವನೊಲ್ಲೆ । ಕೊಡು ಕೊಡು ನಿನ್ನಬಾಯ್ದುಂಬಿ ॥
ಕಡು ಸವಿಯಾದ ಮಧುವನೆಂದೊರ್ವಳು ನಲ್ಲ । ನೊಡನೆ ಪೇಳ್ದಳು ನಲ್ಮೆಯಿಂದ ॥ (54)

ತಿ ವಿನೋದಗಳನು ನೋಡುತ ಮುಂದಕೆ । ಭೂವರನೆಯ್ತರಲಲ್ಲಿ ॥
ಸ್ತ್ರೀವೇಷವ ತೊಟ್ಟು ಧೂರ್ತ ಕುಮಾರರು ತಾವಿರಲ್ಕೈದಿ ಬೊಜಗರು ॥ (55)

ತಮ್ಮ ಕೈಯಿಂದ ಕೃತ್ರಿಮ ಕುಚಗಳನೊತ್ತಿ । ಗಮ್ಮನೆ ಸೆರಿಗೆ ಕೈಯಿಕ್ಕಿ ॥
ಜುಮ್ಮನುಬ್ಬಿದ ಕಾಮಲತೆಯನು ಕಂಡವ । ಸುಮ್ಮನೆ ನಾಣ್ಗೆಟ್ಟೋಡಿದರು ॥ (56)

ಆಗ ವಿದೂಷಕನತ್ತಿತ್ತ ತಿರುಗಿ ತಾ । ಬೇಗದಿಂ ಕಂಗೆಟ್ಟಂತೆ ॥
ಪೋಗಿ ಪೇಳದ ನೊಂದಚ್ಚರಿ ನೃಪ ನಾ । ನೀಗ ಕಂಡದಕೆ ಬೆದರಿದೆ ॥ (57)

ತಲೆಕೆಳಗಾಗಿ ಜೋಲುವ ಬಾವಲಿಗಳೋ । ಬಿಲವನೆಯ್ದುವ ಹೆಬ್ಬಾವುಗಳೋ ॥
ಲಲನೆಯೊರ್ವಳ ಬಿದ್ದ ಮೊಲೆಯು ಕಂಡಿಂತೆಂದು । ಬಲು ಬೆದರಿದೆ ನಾನು ಸ್ವಾಮಿ ॥ (58)

ಹೃದಯದಿಂ ಪೊರಮಟ್ಟು ಪೋಪ ಸಮಯದೊಳು । ಮದನನು ರತಿಯು ಸಿಂಗರಿಸಿ ॥
ಚದುರವಿಟರನ ವಾಸೆಯು ಕರಗಳಿಂ । ದದ ಕಂತು ಬೆದರಿದೆ ಮತ್ತೆ ॥ (?) (59)

ವಿಟನೆಂದನೆಲೆ ಸ್ವಾಮಿ ನಾನೊಬ್ಬ ವೇಶಿಯು । ನಟನೆಯ ಸವಿನುಡಿಗಳನು ॥
ದಿಟವೆನಲವಳ ಮನೆಗೆ ಪೋಗಿ ಕುಳಿತು ಕ । ಪಟಮನದಿ ಕೇಳದೆನು ॥ (60)

ಎಲೆ ಜಾಣೆನಿನಗೊತ್ತಯೇನೆಂದು ಕೇಳಲು । ಸಲೆ ಕೋಟಿಧನ ವೆನಗೆನಲು ॥
ಮೊಲೆ ಬಿದ್ದಿರೆ ಕಂಡುವೆರಡು ಗೋಟಡಕೆಯು । ನೊಲಿದೀವೆನೆಂದು ಕೇಳದೆನು ॥ (61)

ಬಿದ್ದ ಮೊಲೆಯು ಹೆಂಗಳನಪ್ಪುವುದರಿಂದ । ತಿದ್ದಿದ ಮೊಲೆಯು ಪುತ್ತಳಿಯು ॥
ಹೊದ್ದಿಯಾಲಿಂಗನವನು ಮಾಳ್ಪುದೊಳ್ಳಿತೆಂ । ದೆದ್ದು ಬಂದೆನು ನಾನು ಸ್ವಾಮಿ ॥ (62)

ಎನಲಾ ನುಡಿಗೇಳ ನಸುನಕ್ಕು ಮುಂದಕ್ಕೆ । ಮನಸಿಜನೆಯ್ತರಲಲ್ಲಿ ॥
ಬನದವಿ ರತಿಗೊಪ್ಪದೆ ಹೊತ್ತುಗಳೆವ ಮಾ । ನಿನಿಯರ ಸೊಬಗನು ಕಂಡ ॥ (63)

ಚಪ್ಪರ ಮಂಚದೊಳಗೆ ರಾಜ ಹಂಸೆಯು । ತುಪ್ಪುಳುವಾಸಿನ ಮೇಲೆ ॥
ಅಪ್ಪಿಕೊಂಡೆಯ್ದಿಟ್ಟ ರಸಿಕರ ಮನವ । ನೊಪ್ಪವಿಟ್ಟರು ಸವಿನುಡಿಯಿಂ ॥ (64)

ಸರಸ ಸಲ್ಲಾಪ ಚುಂಬನ ತೆಕ್ಕೆಗಳಿಂದ । ತರುಣಿಯರೆಸೆವಾ ಮನವ ॥
ಕರಗಿಸಿ ದ್ರವಗಂಡು ಕೂಡುವ ಚದುರ ವಿ । ಟರ ನಿಕರವ ನೋಡಿದನು ॥ (65)

ಶಕುನಿ ಮಂಚಧ್ವನಿ ಮಿಥುನದ ರತಿಯನು । ಪ್ರಕಟಿಸುತಿದೆ ಬಂಧಗಳ ॥
ನಿಕರದಿಂ ಪೊಸ ಪೊಸರುಚಿಯು ದೋರುವ ಕಾ । ಮುಕರ ನಿಕರ ವೊಪ್ಪಿತಲ್ಲಿ ॥ (66)

ಓಲೆಯು ಕಾಂತಿ ಕದಪಿನೊಳು ಮಿಂಚಿನ । ಮಾಲೆಯಂದದಿ ಪೊಳೆವುತಿರೆ ॥
ನೀಲಕುಂತಳ ಮುಗಿಲೆನೆ ಗದ್ಗದರವ । ಕಾಲದ ಮೊಳಗಿನಂತಿಹುದು ॥ (67)

ಬೆಮರ್ವನಿ ಮಳೆಗರೆದಂಗ ಭೂಮಿಗಳೊಳು । ಸಮರತಿ ಸುಖದ ಬೆಳೆಯನು ॥
ರಮಣಿಯರುಪರತಿಯೊಳು ಪುಟ್ಟಿಸಿದರು । ರಮಣರ ಹೃದಯದೊಳಾಗ ॥ (68)

ಪರಿಪರಿಗಳೆರವ ಸೊಲ್ಲನುಗ್ಘಡಿಸುವ । ಕರದಿಂದ ಕುಚತಾಳಗಳನು ॥
ಇರದೊತ್ತುತುಪರತಿ ನೃತ್ಯವಾಡಿಸಿದರು । ತರುಣಿಯರನು ವಿಟನಟರು ॥ (69)

ರಂಗುದುಟಿಯು ನುಣಿಸುತ ರತಿಯೊಳ ಗು । ತ್ತುಂಗು ಕುಚವನೆದೆಗೊತ್ತಿ ॥
ಅಂಗಸಂಗದ ಸುಖದೋರಿಸಿ ವಿಟರಂತ । ರಂಗವ ಸೆರೆಗೆಯ್ದರವರು ॥ (70)

ಉತ್ತಮ ಪಾದಸಾಯಕರಿರೆ ತಮ್ಮಂಗ । ಚಿತ್ತವನಿತ್ತು ಪೆಣ್ಗಳಗೆ ॥
ವಿತ್ತವ ವಿಟರೊಲಿದೀವುದರಿದೆ ಭೂ । ಪೋತ್ತಮಯೆಂದರಾಸಖರು ॥ (71)

ಅಕ್ಕಕೇಳೆನ್ನ ನಲ್ಲಗೆ ಕೈಗಾಣಿಕೆ । ಕಕ್ಕಸ ಕುಚಗಳ ನಿತ್ತು ॥
ಸಕ್ಕರೆ ಚೆಂದುಟಿಯುಣಿಸಿ ರತಿಗೆ ಮನ । ವಿಕ್ಕಿಸಳೆದೆನು ಧನವನು ॥ (72)

ಒತ್ತೆಯ ನಿತ್ತರೆ ತನುವಿತ್ತೆಯುವ ನೊಲ್ದು । ಮುತ್ತನಿತ್ತರೆ ರನ್ನವಿತ್ತೆ ॥
ಚಿತ್ತವ ನಿತ್ತರೆ ಸಮರತಿ ಸುಖವಿತ್ತೆ । ಮತ್ತವನೊಳು ಹಂಗೇನು ॥ (73)

ಈ ತೆರದಿಂದ ಪೇಳುವ ಪೆಣ್ಣಳಸವಿ । ಮಾತನು ಕೇಳುತೆಯ್ದಿದನು ॥
ನೂತನ ರತಿಗೆಯ್ದ ಸತಿಯರ ಪೊಸತೊಂದು । ರೀತಿಯ ಕಂಡನಂತಲ್ಲಿ ॥ (74)

ಬಿಡುಮುಡಿ ಬಿಂಕವಳಿದ ಕುಚ ಕಡೆಗಣ್ಣ । ನಡರಿದ ಕೆಂಪು ಕಂಪಿಸುವ ॥
ಒಡಲು ಮಂದೋಚ್ಛ್ವಾಸ ನಸುಬೆಮರಿದಮೊಗ । ಕಡುಸೊಬಗನು ಬೀರಿತಾಗ ॥ (75)

ರಸವಳದುಬ್ಬು ಬೆಳ್ತರ್ಜ ಚೆಂದುಟಿಯೊಳು । ಪೊರ್ಗರನ್ನ ಪೀನ ಕುಚದೊಳು ॥
ಅಸಿದಾದ ನಖರೇಖೆ ನೋಳ್ಪರ ಕಣ್ಗೆಪೋ । ಹಸಲು ತಂಗಾಳಗೆ ತನುವ ॥ (76)

ಇತ್ತುದುಕೂಲದ ಸೆರಗಿಂದ ಮೊಲೆ ಮೊಗ । ದೊತ್ತಿನ ಬೆಮರ್ವನಿಗಳನು ॥
ಒತ್ತರಿಸುತನಿಂದ ವನಿತೆಯರನು ನೃಪ । ನೊತ್ತಿನ ಸಖರು ನೋಡಿದರು ॥ (77)

ಸುರತದೊಳರ್ದ ಮಿಥುನಗಳ ನೊಬಗನು । ಪರಿಪರಿಬೊಳು ಕಂಡು ಚಂದ್ರ ॥
ಇರುಳೆಂಬ ತರುಣಿಯೊಳಂತೆ ತಾನೆರೆದಸ್ತ । ಗಿರಿಗೆಯ್ದಿದನು ವಿಶ್ರಮಿಸಲು ॥ (78)

ಪಕ್ಕವ ಬಡಿದೆದ್ದು ಕೊರಳೆತ್ತಿ ಸುತ್ತಣ । ದಿಕ್ಕನು ನೋಡಿ ಸಂತಸದಿ ॥
ಕುಕ್ಕುರುಕೂ ಯೆಂದು ಧ್ವನಿ ದೋರಿದುವಾಗ । ಕುಕ್ಕುಟಗಳು ಕಾಲವರಿದು ॥ (79)

ಮಲ್ಲಿಗೆ ಪೂವರಳದುವಾ ಕಂಪಿಗೆ । ನಿಲ್ಲದಳಿಗಳೆರಗಿದುವು ॥
ಮೆಲ್ಲ ಮೆಲ್ಲನೆ ತಂಗಾಳ ಬೀಸಿತುಸವಿ । ವಿಲ್ಲತೆರಳದನಲ್ಲಿಂದ ॥ (80)

ಸಖರೊಡಗೂಡಿ ಸಂತಸದಿಂದರಮನೆ । ಗಖಿಲ ವಾರ್ತೆಗಳ ಲಾಲಿಸುತ ॥
ಸುಖದಿಂದ ತಾನೆಯ್ದಿನಿದ್ರಾಂಗನೆ ಗಧಿ । ಮುಖವಾಗಿ ಪವಡಿಸಲಿತ್ತ ॥ (81)

ಉದಯಗಿರಿಯ ಮೇಲೆ ನಡೆಸಲು ರಥವನು । ಪುದಿದಕೆಂದೂಳ ಯಂದದೊಳು
ಮೊದಲರುಣೋದಯ ಮಾಯ್ತೆಣೆ ವಕ್ಕಿಗ । ಳೆದೆಗೆ ಸಂತಸವ ಪುಟ್ಟಿಸುತ ॥ (82)

ಅಗಲಿದ ನಲ್ಲಳ ಕೂಡುವೆ ನೆಂದೆಂಬ । ಬಗೆಯಿಂವನುರಾಗವೆರಸಿ ॥
ಮೊಗದೋರ ಲೊಡನಿನ ಪದ್ಮಿನಿಯಾಸ್ಯದೊ । ಳ್ನಗುಳ್ನಗೆ ದೋರಿತೇನೆಂಬೆ ॥ (83)

ಭ್ರಮರ ಕುಂತಳ ಮೊಗ್ಗ ನೊಟಿಯಿಂದೊಪ್ಪುವ । ಕಮಲಿನಿಯನು ತನ್ನ ಕರದಿಂ ॥
ಪಮರ್ದಪ್ಪಲೆಂದು ಸಳೆಯಲಿನ ಪೊಣ್ಮಿದ । ಬೆಮರೆನೆ ಪನಿಗಳೊಪ್ಪಿದುವು ॥ (84)

ಆ ಸಮಯದೊಳು ಮಂಗಲವಾದ್ಯ ಸಂಗೀತ । ದಾಸರಗಳು ಕೇಳದುವು ॥
ಬೀಸುವ ತಂಗಾಳ ಸೌರಭ್ಯ ದೊಡನೆ ವಿ । ಲಾಸ ದೋರಿತು ನೃಪವರಗೆ ॥ (85)

ಅದರಿಂದೆಚ್ಚತ್ತು ಮಿಂದು ದೇವಾರ್ಚನೆ । ಮೊದಲಾದ ವಿಧಿಗಳ ಮಾಡಿ ॥
ಪದಕೆರಗಿದನು ಸುನಂದಾ ದೇವಿಯ । ಚದುರ ಬಾಹುಬಲಿ ಕುಮಾರ ॥ (86)

ಪರಕೆಯು ಶಿರದೊಳ ಗಾಂತಿಂತೆಂದನು । ಭರತಾಜ್ಞೆ ತಾನೆನ್ನ ॥
ಕರೆಯು ಕಳುಹಿದನು ನನ್ನ ಕಂಡಲ್ಲದೆ । ಪುರವನು ಪೊಗುವುದಿಲ್ಲೆಂದು ॥ (87)

ಆತನಭೀಷ್ಟವ ಸಲಿಸಿನಾ ಬರ್ಪೆನು । ಮಾತೆ ನಿನ್ನಯ ಕೃಪೆಯಿಂದ ॥
ಯಾತಕು ಯೋಚಿಸದಿರಿ ನಿಮ್ಮ ಮೊಮ್ಮಗ । ನೀತನೆ ನಾನೆಂದು ಬಗೆದು ॥ (88)

ಸೊಸೆಯಂದಿರೊಡಗೂಡಿ ಸುಖದಿ ನೀವಿರಿ ನಾನು । ಬೆಸಸಿದಂತಾಜ್ಞೆಯನು ॥
ಒಸಗೆಯಿಂ ಪುರವನು ಪೊಗಿಸಿ ಬರ್ಪೆನು ತಾ । ಮಸವಿಲ್ಲೆಂದು ಬೀಳ್ಕೊಂಡ ॥ (89)

ಇತ್ತಲು ಭರತೇಶ ನೆಡೆಗೆಯ್ತಂದ ಮ । ಹತ್ತರ ನರಸನೊಳಿಂತು ॥
ಉತ್ತರಗಳನು ಬಿನ್ನವಿಸಿದ ಮೊಗದಿಚ್ಛೆ । ಗುತ್ತನೋಡದೆ ಕಾರ್ಯವರಿತು ॥ (90)

ಇದು ಶ್ರುತಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮವಿರಚಿಸಿದ ॥
ಮದನಾರಿಗುಮ್ಮಟ ಸ್ವಾಮಿಯ ಚರಿತೆಯೊ । ಳ್ಪದಿ ಮೂರನೆಯ ಸುಸಂಧಿ ॥ (91)

(ಹದಿಮೂರನೆಯ ಸಂಧಿ ಸಮಾಪ್ತಂ)

## ಹದಿನಾಲ್ಕನೆಯ ಸಂಧಿ-

ಮೂರು ಯುದ್ಧದೊಳು ಭರತ ಚಕ್ರವರ್ತಿಗೆ । ತೋರಿಸಿ ಭಂಗವ ಬಳಿಕ ॥
ಮೂರು ಲೋಕದ ದೊರೆಯಾದ ಗುಮ್ಮಟನಾಥ । ತೋರೆನ್ನಮತಿಗೆ ಸತ್ಪಥವ ॥ (1)

ನಿನಗೆ ಷಟ್ಖಂಡ ಮಂಡಲದ ಭೂಭುಜರೆಲ್ಲ । ರನುಚರರಾಗಿ ಕಪ್ಪವನು ॥
ಮನುಕುಲತಿಲಕ ಕೊಟ್ಟರು ಸಾಲದೆ ನಿ । ನ್ನನುಜ ರೊಳೇತಕಾಗ್ರಹವು ॥ (2)

ಆತನು ದೋರ್ಬಲ ಶಾಲಿ ಮದೋದ್ಧತ । ಮಾತಿಗೆ ಮಣಿವವನಲ್ಲ ॥
ನೀತಿ ನಿಪುಣ ನಿನಗೀತನೆರಗೆ ಬರ್ಪ । ಖ್ಯಾತಿಯಿನ್ನಾವುದು ಬೆಸಸು ॥ (3)

ಭುವನ ಭುಂಭುಕವಾದ ನಿನ್ನ ಕೀರ್ತಿಗೆ ಪಂ । ಪಿವನಿಂದಳಿಯದಂತೆ ನೀನು ॥
ಸುವಿವೇಕದಿಂದಯೋಧ್ಯೆಗೆ ಪೋಪುದುಲೇ । ಸವನೆರಗನು ನಂಬುಸ್ವಾಮಿ ॥ (4)

ವೀರಲಕ್ಷ್ಮಿಯ ಪರಿಣಯಕೆ ಶರದ ಹೂಂ । ಕಾರವೆ ಶೋಭನವೆಂದು ॥
ಹಾರೈಸುವ ವಿಜಿಗೀಷು ಬಾಹು ಬಲಿ ಕು । ಮಾರನಾಹವಲಂಪಟನು ॥ (5)

ಪ್ರತಿಪಕ್ಷ ಭೂಪಾಲ ಗಜಬೇಟೆಯೊಳತಿ । ಚತುರನು ಸಂಗ್ರಾಮ ಧೀರ ॥
ಕ್ಷಿತಿಯೊಳು ತನಗಿದಿರಿಲ್ಲೆಂಬ ಗರ್ವದಿಂ । ದಿತರ ಭೂಭುಜರ ಲೆಕ್ಕಿಸನು ॥ (6)

ಸಾಮದೊಳಳವಡಿಸುವರಳವಲ್ಲ ಸಂ । ಗ್ರಾಮ ದೊಳವಗಿದಿರಿಲ್ಲ ॥
ಭೂಮಿಯೊಳ್ನೀನರಿಯದ ನೀತಿಯಿಲ್ಲಿನ್ನು । ತಾಮಸವೇತಕೆ ಸ್ವಾಮಿ ॥ (7)

ಕಂಡರ್ಥವನು ಬಿನ್ನವಿಸಿದೆ ನಿನ್ನದೋ । ರ್ದಂಡ ಪರಾಕ್ರಮ ಪುಣ್ಯ ॥
ಅಂಡಲೆವುತಲಿದೆ ನಿನಗಿದಿರಾರು ಷ । ಟ್ಖಂಡ ಮಂಡಲದೊಳು ಸ್ವಾಮಿ ॥ (8)

ಎನಲಾಕ್ಷಣ ದೊಳಾಸ್ಥಾನದಿಂದೆದ್ದನು । ಮನುಜೇಶ ನತಿಕೋಪದಿಂದ ॥
ಮೊನೆಯೊಳು ನೋಡುವೆನವನ ಸಾಹಸವ ನಿ । ನ್ನನುಮಾನವೇತಕೆಂದೆನುತ ॥ (9)

ದೂತನ ವಚನ ಪ್ರಳಯಕಾಲ ಪವನದಿಂ । ನೂತನ ವೀರರಸಾಬ್ಧಿ ॥
ಮಾತೇನು ಪೆರ್ಚಿತು ವೀರಭಟರಿಗತಿ । ಕೌತುಕವಪ್ಪಂತೆ ಜಗಕೆ ॥ (10)

ಸಮರ ಸನ್ನಹ ಭೇರಿ ನಾದವನು ಕೇಳ । ದ್ಯುಮಣಿಯು ಬಿಂಬ ಕಂಪಿಸಿತು ॥
ಅಮರರೆಲ್ಲರು ನಡುಗಿದರೆನಲದಕೆ ಭೂ । ರಮಣರಣ್ಮ್ಮವ ದೊಂದರಿದೆ ॥ (11)

ಸೇನೆಯ ಪದಹತಿ ದೂಳಿಯಿಂ ದಿಗ್ವನಿ । ತಾನನ ಶ್ಯಾಮಲ ವಾಯ್ತು ॥
ಭಾನುವಿನುಸುರಿ ಗುಬ್ಬುಸ ವಾದುದೆನಲದ । ನೇನೆಂದು ಬಣ್ಣಿಪೆ ನಾನು ॥ (12)

ದೂಳಿಯೆ ದಿಗ್ಗಧವು ಗಜ ಕುಂಭ ಸಿಂಧೂರ । ಜಾಲ ದಿಗ್ದಾಹ ದಂತಿರಲು ॥
ಕಾಳಗದುತ್ಪಾತವನು ಭೂಕಂಪವ । ಪೇಳ ಲೆಯ್ತಂದುದಾ ಸೇನೆ ॥ (13)

ಅನ್ನೆಗವಿತ್ತ ಬಾಹುಬಲಿ ಕುಮಾರನು । ತನ್ನ ವಿಜಯ ಕಟಕದೊಳು ॥
ಸನ್ನಾಹ ಭೇರಿಯ ಪೊಯ್ಸಿದ ನದಕೇಳ । ಭಿನ್ನವಾಯ್ತರಿಗಳ ಹೃದಯ ॥ (14)

ವೀರಭಟರು ಸಿದ್ಧ ಚಕ್ರ ಮೃತ್ಯುಂಜಯ । ದಾರಾಧನೆ ದರ್ಭಶಯನ ॥
ಚಾರು ಮಂತ್ರೌಷಧಿಗಳನು ಸಾಧಿಸುವರು । ದಾರದೇವತೆಗಳ ಭಜಿಸಿ ॥ (15)

ಜಗತಿ ಸೇನಾಸ್ತಂಭನ ವಶ್ಯ ಮಂತ್ರವ । ಭಜಿಸಿದರಲ್ಲಲ್ಲಿ ನೃಪರು ॥
ವಿಜಯ ಪತಾಕಾ ಯಂತ್ರದ ರೆಕ್ಕೆಯ । ಗಜಗಳ ಮೇಲೆತ್ತಿಸಿದರು ॥ (16)

ಆನೆಕುದುರೆ ತೇರು ಕಾಲಾಳು ಮೊದಲಾ । ದಾ ನವರಣಕೆ ಸಿಂಗರಿಸಿ ॥
ಏನೆಂಬೆ ಪ್ರಳಯ ಭೈರವನಿ ಪಲವುರೂಪ । ತಾನಾಂತನೆನೆ ಬಂದರಾಗ ॥ (17)

ಸಂಗ್ರಾಮ ರಂಗಾಗ್ರೇಶ್ವರ ಯುವರಾಜ । ಸಿಂಗಾರವಾದನು ವಿಜಯ ॥
ಮಂಗಲಾಂಗನೆಯ ವಿವಾಹಕೆ ವೀರಬಾ । ಸಿಂಗ ಕಂಗಣಗಳ ಕಟ್ಟಿ ॥ (18)

ವೀರಲಕ್ಷ್ಮಿಯ ಕರಕಂಕಣ ದಂತಿರ್ಪ । ಪಾರುಂಬಳಿ ಮುಂತಾದ ॥
ಸಾರಮಹಾಯುಧಗಳು ರಥಗಳು ತುಂಬಿ । ಹೇರಿಬಂದುವು ಸುಭಟರಿಗೆ ॥ (19)

ಮದಗಜಗಳ ಮದಧಾರೆಗಳೆಂದೆಂಬ । ನದಿಯೊಳು ಮೀನ್ಗಳೆಂದೆಂಬ ॥
ಕದನ ಕೋವಿದರಾಯುಧಗಳು ಪೊಳೆದುವು । ಮದನನ ವಿಜಯ ಸೇನೆಯೊಳು ॥ (20)

ದಿಕ್ಕರಿಗಳು ತಮಗಿದಿರಾಗಲವನೆಂಟು । ದಿಕ್ಕಿಗೆ ದಿಗ್ಬಲಿಗೊಡುವ ॥
ನೊಕ್ಕಾನೆಗಳ ಘಟೆಗಳು ಬಂದುವುಸಮ । ರಕ್ಕೆ ಸಿಂಗರವಾಗಿ ಬೇಗ ॥ (21)

ತರಣಿಯ ತುರಗವ ಕಂಡು ಹಲ್ಲಣಿಸುತ । ಖುರಗಳನೆತ್ತಿಗಗನಕೆ ॥
ಹರಿದಾಳಿಯಿಡುವ ಮನದ ತುರಗಗಳು ಸಿಂ । ಗರಿಸಿ ಬಂದವು ಮಾರನೆಡೆಗೆ ॥ (22)

ಉಟ್ಟ ಚಲ್ಲಣ ದಟ್ಟಿ ಕಾಸೆ ಪೂಸಿದ ಗಂಧ । ಕಟ್ಟಿದ ಬಾಕು ಕಿತ್ತಲಗು ॥
ತೊಟ್ಟ ಕವಚ ಸೀಸಕದಿ ಸಿಂಗರವಾಗಿ । ಕಟ್ಟಾಳ್ಗಳೈತಂದರಾಗ ॥ (23)

ವಿಜಯ ಲಕ್ಷ್ಮಿಯ ಪರಿಣಯ ನೋತ್ಸವವಿಂದು । ಭುಜಬಲಿದೇವಗೆಂದೆನುತ ॥
ನಿಜಬಲಗೂಡಿ ಬಂದರು ಸರ್ವಭೂಭುಜ । ಗಜರತೇಯಿಂದ ಸಿಂಗರಿಸಿ ॥ (24)

ವೀರಭಟರ ಸಿಂಹನಾದ ಗಜಂಗಳ । ಗಂಟಾನಾದ ತುರಗಗಳ ॥
ಘೋರ ಹೇಷಾರವ ಬೃಂಹಿತ ರಥದ ಚೀ । ತ್ಕಾರ ವ್ಯಾಪಿಸಿತು ದಿಕ್ತಟವ ॥ (25)

ಲಕ್ಷ ಭಟರು ಕೋಟಿ ಭಟರೆಯ್ತಂದರು । ದಕ್ಷಿಣ ಭುಜದೊಳು ತಮ್ಮ ॥
ಕೌಕ್ಷೇಯಕದ ಕಾಂತಿ ವಿಜಯ ಲಕ್ಷ್ಮಿಯ ಕ । ಟಾಕ್ಷದ ಕಾಂತಿಯಂತೆಸೆಯೆ ॥ (26)

ಮತ್ತಗಜವನೇರಿ ಚತುರಂಗ ಸೇನೆಯು । ಮೊತ್ತದೊಡನೆ ವಾದ್ಯಘೋಷ ॥
ಸುತ್ತಲೆಣ್ದೆಸೆಯನು ವ್ಯಾಪಿಸಲೆಯ್ತಂದ । ಚಿತ್ತಜ ರಾಜ ಮೃಗೇಂದ್ರ ॥ (27)

ಮೊದಲೊಮ್ಮೆ ಕಹಳೆಯ ಧ್ವನಿ ಕೇಳಲಾಯ್ತು ಮ । ತ್ತದರಿಂದೆ ಧೂಳೀಜಾಲ ॥
ಕೆದರಿ ತೋರಿತು ಗಗನದೊಳು ಕೇಳ್ದತು ಮತ್ತೆ । ಮದಗಜ ಘಂಟಾರವವು ॥ (28)

ಹಯದ ಹೇಷಿತ ಗಜಬೃಂಹಿತ ಭಟರನಿ । ಜಯಘೋಷಣೆಗಳು ಬಳಿಕ ॥
ಭಯದೋರುವಂತೆ ಕೇಳದುವಾಗ ಭರತ ಚ । ಕ್ರಿಯ ಸೇನೆಯರಸು ಮಕ್ಕಳಿಗೆ ॥ (29)

ಬಂದಿದಿರೊಳಗೊಡ್ಡಿನಿಂದು ದುಭಯ ಬಲ । ಮುಂದುವರಿದು ತಾಗಲೆಂದು ॥
ಕೆಂದೂಳ ಕೆದರಿ ಕಳಸಗೊಂಡು ಕತ್ತಲೆ । ಯಂದವಾಗಿರಲು ತುಂಬಿಸಿತು ॥ (30)

ಡಾಳಪ ಚಾಮರ ನಿಕರಗಳಂದ ಕೆಂ । ದೂಳವಿರಳವಾಗೆ ಶಸ್ತ್ರ ॥
ಜಾಲದಾಭರಣ ಮಕುಟ ರತ್ನಗಳ ದೀಪ್ತಿ । ಬೇಳತುಭಯ ಬಲದಿರವ ॥ (31)

ಭರತೇಶ ಬಾಹುಬಲಿಗಳೀರ್ವರುಮದ । ಕರಿಗಳನೇರಿ ಚಾಪಗಳ ॥
ಕರದೊಳಗಾಂತು ಜೇವಡಿಸಲದರ ನಾದ । ಕರವಂತೊಪ್ಪಿತು ಜಯಸಿರಿಯ ॥ (32)

ವಿಜಯ ಲಕ್ಷ್ಮಿಯ ಭ್ರೂಲತೆಯಂತೆ ಶೋಭಿಪ । ನಿಜನಿಜ ಚಾಪವಪಿಡಿದು ॥
ಗಜಗಳ ನಾಂಕಿ ಶರಗಳ ಸಂಧಾನಿಸಿ । ತೆಜಿಸಲುದ್ಯುತರಾದರಾಗ ॥ (33)

ಇವರೀರ್ವರು ಚರಮಾಂಗರು ಕಾದಿದೊ । ಡಿವಂಗೆ ಬಾಧೆಗಳಿಲ್ಲ ॥
ಇವರಯುದ್ಧವು ಕ್ರೂರ ಗ್ರಹ ಯುದ್ಧದಂತೆ ಸಂ । ಭವಿಪುದು ಪ್ರಜೆಗೆ ಕೇಡೆಂದು ॥(34)

ಎರಡು ಪಕ್ಷದ ಮಂತ್ರಿ ಮುಖ್ಯರು ತಮ್ಮೊಳ । ಗೊರೆದು ಭರತ ಚಕ್ರಿಯಡೆಗೆ ॥
ಭರದಿಂದ ಬಂದು ಬಿನ್ನವಿಸಿದರಿಂತೆಂದು । ದೊರೆಗಳ ದೇವರಾಲಿಪುದು ॥ (35)

ನಿಮ್ಮೀರ್ವರಿಗೆ ಧರ್ಮಗಾಳಗವಲ್ಲದೆ । ಸುಮ್ಮನೆ ಬಲವ ಕೊಲ್ಲುವುದು ॥
ಸಮ್ಮತವಲ್ಲ ಪಾಪಾಪಕೀರ್ತಿಗಳಗೆ । ಸುಮ್ಮನೆ ಗುರಿಯಾಗಬೇಡ ॥ (36)

ಕರ್ಮಕ್ಷಯವ ಮಾಡಬೇಕಲ್ಲದೆ ನಿಮ್ಮ । ಧರ್ಮಕ್ಷಯವ ಮಾಡಬಹುದೆ ॥
ಧರ್ಮಯುದ್ಧವೆ ಸಾಕು ನಿಮಗೀರ್ವರಿಗೆಂದು । ಕೂರ್ಮೆಯೊಳವರು ಬೇಳದರು ॥ (37)

ನಯದೃಷ್ಟಿ ಜಲಮಲ್ಲ ಯುದ್ಧದೊಳಗೆ ನಿಮ್ಮ । ಜಯಪರಾಜಯವ ಕಾಣಿಪುದು ॥
ಭಯವ ಪುಟ್ಟಿಪ ಚತುರಂಗ ಬಲದಯುದ್ಧ । ಕ್ಷಯಕರವೆಂದು ಬಿನ್ನವಿಸೆ ॥ (38)

ಬಾಹುಬಲಿಯು ನಮ್ಮ ಸಮರ ಸಂಗಟದೊ । ಳಾರವಿಯಿಂದು ವಿನ ಗರ್ಭ ॥ (?)
ದೋಹಳದಂತಾದುದೆಂದು ಚಕ್ರೇಶತಾ । ನೂಹಿಸಿದನು ಮನದೊಳಗೆ ॥ (39)

ಹಿರಿಯರು ಬೇಳದ ಮಾತನು ಮೀರಲು । ಧರೆಯೊಳಿಲ್ಲ ಹಳವುದೆಂದಾಗ ॥
ಕರಿಶಿರದೊಳು ಚಾಪ ಶರಗಳ ನಿಟ್ಟು ಮಂ । ದರಧೀರ ಭರತೇಶನಿರಲು ॥ (40)

ಅಲ್ಲಿಂದ ಬಂದು ಬಾಹುಬಲಿ ಕುಮಾರಗೆ । ಮೆಲ್ಲನೆ ಬಿನ್ನವಿಸಿದರು ॥
ಸಲ್ಲದು ನಿಮಗಿದು ಮಲ್ಲಯುದ್ಧಕೆ ನಮ್ಮ । ಸೊಲ್ಲ ಲಾಲಿಸಬೇಕು ಸ್ವಾಮಿ ॥ (41)

ನಮ್ಮ ಸೇನೆಯೊಳದಿರಾಂಪವರಿಲ್ಲೆಂಬ । ನಿಮ್ಮರಸನ ಬಿಂಕವನು ॥
ಒಮ್ಮೆ ಮುಗ್ಗಿಸಿ ನೋಡಿ ಧರ್ಮಯುದ್ಧಕೆ ನಾನು । ನಿಮ್ಮ ಮಾತನು ಲಾಲಿಪೆನು ॥ (42)

ಕುಪಿತ ಕೃತಾಂತ ನಂದದಿಕೋಪದಿಂ ಪೇಳ್ದ । ನೃಪತಿಯೊಳಂತೆಂದರವರು ॥
ನೃಪರಿಗೆಯೆಸೆದಾಗ್ರಹ ಸಲ್ಲದೆಮ್ಮ ಬಿ । ನ್ನಪವ ಮನ್ನಿಸಬೇಕು ಸ್ವಾಮಿ ॥ (43)

ಉದ್ರೇಕ ನೃಪರಿಗೆ ಪುಟ್ಟಲು ಕ್ಷೀರಸ । ಮುದ್ರವು ಬಿಸಿನೀರಾಗೆ ॥
ಭದ್ರಗಜವೆ ತೊಂಡು ಮೇದಡೆ ಧರೆಯೊಳು । ಮುದ್ರಿಸುವರಾರು ಸ್ವಾಮಿ ॥ (44)

ವೃದ್ಧರಮಾತನು ಮೀರಿನಡೆದರ ಪ್ರ । ಬುದ್ಧರೆಂಬರು ನೀತಿ ವಿದರು ॥
ಬುದ್ಧಿಯುಳ್ಳವರು ನೀವಹುದದರಿಂಧರ್ಮ । ಯುದ್ಧಕ್ಕೆ ಮೆಯ್ಗೊಡಬೇಕು ॥ (45)

ಎಂದು ನಾನಾತೆರದಿಂದೊಡಂಬಡಿಸಿಯಾ । ನಂದ ಭೇರಿಯನು ಪೊಯ್ಸಿದರು ॥
ಇಂದೀರ್ವರರಸುಗಳಗೆ ಧರ್ಮಗಾಳಗ । ವೆಂದು ತಮ್ಮುಭಯ ಬಲದೊಳು ॥ (46)

ಭರತೇಶ್ವರ ಬಾಹುಬಲಿಗಳುಭಯ ಪಕ್ಷ । ದರಸರನಿಕ್ಕೆಲದಲ್ಲಿ ॥
ನಿರಿಸಿದರತ್ತಿತ್ತ ಮಿಡುಕದಂದದಿ ಮಧ್ಯ । ಸ್ಥರನಿಯಮಿಸಲಾಗ ॥ (47)

ಭರತೇಶ್ವರಬಾಹು ಬಲಿಗಳ ಯುದ್ಧದ । ಚ್ಚರಿಯನು ನೋಡಬೇಕೆಂದು ॥
ನೆರೆದರು ಗಗನ ಮಂಡಲದೊಳು ದೇವಖೇ । ಚರಮಿಥುನಗಳು ಸಿಂಗರಿಸಿ ॥ (48)

ಭಾರಿಯು ಮಾಡಿಸಿ ಮಂದಿ ಕುದುರೆ ರಥ । ವಾರಣಗಳನಿಕ್ಕೆಲದೊಳು ॥
ಧೀರರಿರ್ವರೆ ನಿಷದಾದ್ರಿ ನೀಲಾದ್ರಿಗ । ಳೋರಗೆಯೊಳು ನಿಂದು ನೋಡೆ ॥ (49)

ಅನಿಮಿಷ ದೃಷ್ಟಿಯಿಂದೋರೊರ್ವರ ಮೊಗ । ವನುನೋಡೆಯನಿಮಿಷರಂತೆ ॥
ಕನಲಿ ಕಂಗಳೊಳ್ ಪೀರ್ವಂತೆ ನೋಡಿದ ತ । ನ್ನನುಜಗೆಜಯ ತಾನಿತ್ತು ॥ (50)

ಎವೆಯಿಕ್ಕಲೊಡನೆ ಸೋಲ್ತನು ಭರತೇಶನಾ । ಹವದೊಳಗೆಂದು ಘೋಷಣೆಯು ॥
ಯುವರಾಜನ ಪಕ್ಷದವರು ಮಾಡಿದರು ಮಿ । ಕ್ಕವರು ಮನದೊಳ್ ತಿಳದರು ॥ (51)

ತಮ್ಮೊಳಗಾದಪಜಯ ಲಕ್ಷ್ಮಿಗೆ ಕ । ಣ್ಣನ್ನೆಯ ಮಾಡುವಂದದೊಳು ॥
ಉನ್ನತಿಕೆಯನು ತಮ್ಮನಿಗಿತ್ತು ಎವೆಯಿಕ್ಕಿ । ಮನ್ನಿಸಿದನು ಭರತೇಶ ॥ (52)

ಮತ್ತವರಿರ್ವರು ತಾವರೆಗೊಳವನು । ಮತ್ತಗಜಗಳ್ಳೈದಿ ಪೊಕ್ಕು ॥
ಬತ್ತರದಿಂದ ತುಳುಕುವಂತೆ ಜಲವ ಭೂ । ಪೋತ್ತಮರೊಸೆದು ತುಳ್ಕದರು ॥ (53)

ಅಣ್ಣನ ಮೊಗದೊಳೆಸೆವ ಕೋಪಾಗ್ನಿಯ । ತಣ್ಣನೆ ತಣಿವುವಂದದೊಳು ॥
ತಣ್ಣೀರು ತುಳುಕಲು ಪರಿತು ಕೋಪಾಗ್ನಿ । ಗೆಣ್ಣೆಯು ತುಳುಕುವಂದದೊಳು ॥ (54)

ಭರತೇಶ ತುಳುಕಿದ ಜಲಕಣ ದೋರ್ಬಲಿ । ಯುರದೊಳು ಹಾರದ ರುಚಿಯ ॥
ಧರಿಸಿರ್ದುದಣ್ಣನ ಪಂಚವಿಂಶತಿ ಚಾಪ । ವರದೇಹೋದಯ ಮಿಗಿಲಾಗೆ ॥ (55)

ಆಜಾನುಬಾಹುಬಲಿ ಕುಮಾರನ । ತೇಜೋರಸ ತುಳ್ಕದಂತೆ ॥
ರಾಜೇಂದ್ರನಂಗದೊಳೆಸೆದುವು ಮಕರಂದ । ರಾಜಿತ ಜಲಬಿಂದುಗಳು ॥ (56)

ಭರತೇಶನಂಗಭೂಮಿಯೊಳು ತನ್ನಯ ಕೀರ್ತಿ । ವರಬೀಜಾಂಕುರಗಳ ಬಿತ್ತಿ ॥
ಕರದಿಂದ ತುಳುಕುವ ಜಲಸೇಚನೆಯನೆ । ಪರಿಕೆಪರಶ್ರೆಗೊಪ್ಪಿದುದು ॥ (57)

ತೆಗೆದಿಟ್ಟ ಜಲವನು ಮೊಗದಿರುಹಿಸಿದನು । ಮುಗುಳಂಬ ತನ್ನಬಾಣಗಳ ॥
ತೆಗೆದೆಸೆದಪಜಯ ಲಕ್ಷ್ಮಿಯು ಸೋಳ್ಪ । ಬಗೆಗೊಳಸಿದ ಚಕ್ರಧರಗೆ ॥ (58)

ಜಲಯುದ್ಧದೊಳು ಸೋಲ್ತು ಭರತೇಶನೆಂದಾ । ಬಲದೊಳು ಜಯಘೋಷಣೆಯು ॥
ಕಲಕಲವನು ಕೇಳ ಗಾಯಸೊಕ್ಕಿದ ಬೆ । ಬ್ಬುಲಿಯಂತೆ ಕೆರಳ ಕೋಪದೊಳು ॥ (59)

ಚಲ್ಲಣದಟ್ಟಮುಕುಟ ಪೂಸಿದಂಗದ । ಫುಲ್ಲಮಾಲೆಗಳಂದಲಾಗ ॥
ಮಲ್ಲಯುದ್ಧಕೆ ಸಿಂಗರವಾಗಿ ನಿಂದರು । ಚೆಲ್ಲುತ ರನ್ನದೊಳಿರುನು ॥ (60)

ಕರಗಳಂ ಭುಜಗಳ ನಾಸ್ಫಾಲಿಸುತ ಸುತ್ತ । ತಿರುಗುತಲಂಕದ ಕಣನ ॥
ವಿರಸದಿಂ ಮಜಭಾಪುರೆಯೆಂದು ತೊಡೆಗಳ । ಕರದಿಂದಲಾಸ್ಫಾಲಿಸುವರು ॥ (61)

ಕರದಿಂದೊರ್ವರ ಕರಗಳ ತಟ್ಟುವ । ರದಕೆ ಮುಷ್ಟಿಗಳ ತೋರುವರು ॥
ಶಿರಕೆ ತೋರುವರು ಲಂಘಿಸಿ ತಮ್ಮ ಪ್ಪೈಸಿರಿ । ಮಣಿತಗಳನು ತೋರಿಸುವರು ॥ (62)

ಕರಣದಾಯಂಗಳ ತೋರಿಕೆಲವು ಪೊತ್ತು । ಪರಿಪರಿ ವಿನ್ನಾಣಗಳನು ॥
ಸರಸದಿಂ ತೋರುವಂದದಿ ತೋರಿ ಪೊಣರ್ದರು । ಸರಿಗಾಳಗವೆಂಬಂತೆ ॥ (63)

ಅಲ್ಲಿಂದ ಬಳಕ ಬಾಹುಬಲಿಕುಮಾರನು । ಸಲ್ಲೀಲೆಯಿಂದೊಳಪೊಕ್ಕು ॥
ಮಲ್ಲಗಾಳಗದ ವಿನ್ನಾಣದಿಂದೊಳ ಪೊಕ್ಕು । ಮೆಲ್ಲಡಿವಿಡಿದು ಬೀಸಿದನು ॥ (64)

ಎಸೆವ ಕಿರೀಟದ ಮಣಿಗಣಗಳಕಾಂತಿ । ದೆಸೆದೆಸೆಗಳನು ವ್ಯಾಪಿಸಲು ॥
ಅಸಮ ಸಾಹಸಮಲ್ಲ ಬೀಸಿದ ತನ್ನ ಸಾ । ಹಸವನು ತೋರಿಸಲೆಂದು ॥ (65)

ಹೇಮಾದ್ರಿಯನು ಮರಕತ ಶೈಲ ಪೊತ್ತು, ದೆಂ । ಬಾಮಹಿಮೆಯನು ಕಾಣಿಸುತ ॥
ಭೂಮಿಗಿಳುಹಲೊಲ್ಲದೆ ಸಾರ್ವಭೌಮನ । ತಾನೆತ್ತಿ ಪೊತ್ತಿರ್ದನಾಗ ॥ (66)

ಭರತೇಶ್ವರಗುರು ಹಿರಿಯಣ್ಣ ಚಕ್ರಿ । ಧರನ ಧರೆಯೊಳು ತಂದಿಕ್ಕಿ ॥
ಹಿಡಿದು ಭಂಗವ ಮಾಡಬಾರದೆಂದೊಯ್ಯನೆ । ಧರೆಗಿಳುಹಿದದೋರ್ಬಲೀಶ ॥ (67)

ದುಂದುಭಿಗಳರವದೊಡನೆ ಜಯಘೋಷ । ವಂದುಣ್ಮಿತು ಭುಜಬಲಿಯು ॥
ಸಂದಸೇನೆಯೊಳು ಚಕ್ರೇಶನ ಸೇನೆಗೆ । ಕುಂದಾದುದೇನೆಂದು ಪೇಳ್ವೆ ॥ (68)

ಪುರುಪರಮೇಶನ ಸುಕುಮಾರ ಭರತೇ । ಶ್ವರ ಚರಮಾಂಗನಿಗಿಂತು ॥
ದೊರೆಕೊಂಡುದು ಭಂಗಹುಂಡಾವಸರ್ಪಣಿ । ಧರೆಗೆಯ್ದಿನಿಂದುದರಿಂದ ॥ (69)

ಎರಡು ಕೆಲದಿನಿಂದ ದೊರೆಗಳೆಲ್ಲರ ಮುಂದೆ । ಪರಿಭವವಾದುದರಿಂದ ॥
ಉರಿದೆದ್ದು ಚಕ್ರರತ್ನವ ಬೆಸಸಿದನಾಗ । ಭರತೇಶ ಕಡುಮುಳಿಸಿಂದ ॥ (70)

ಇವರಯುದ್ಧೋಪಸರ್ಗವನು ಪಿಂಗಿಸಲೆಂದು । ದಿವಿಜರು ಜಿನಬಿಂಬಗಳಗೆ ॥
ವಿವಿಧಾರ್ಚನೆಗಳಿಂದರ್ಚಿಸಿ ಪ್ರಾರ್ಥಿಸಿ । ಸುವಿನಯದಿಂ ಪ್ರಾರ್ಥಿಸಿದರು ॥ (71)

ಬೆಸಸಿದೊಡಾ ಚಕ್ರಬಾಹುಬಲಿಯಾ ಭೇ । ದಿಸದೆ ಮಸುಳ ಕಂದಿ ಕುಂದಿ ॥
ಹಸಗೆಟ್ಟು ಬಲದೊಳು ನಿಂದುದಾತನ ಪುಣ್ಯ । ದೆಸಕವನೇನೆಂದು ಪೇಳ್ವೆ ॥ (72)

ದೇವ ದುಂದುಭಿ ಮೊಳಗಿತು ಪೂಮಳೆಯನು । ದೇವ ಮೇಘಗಳು ಕರೆದವು ॥
ದೇವಾಂಗನೆಯರು ಮಂಗಲವನುಪಾಡಿದರಾ । ಭಾವನವಿಜಯೋತ್ಸವದ ॥ (73)

ತನಗಲ್ಲದ ಕಾರ್ಯವನೆಸಗಿದ ಚಕ್ರಿ । ಯೆನುತ ಭೂಭುಜ ಕುಲವೃದ್ಧಾ ॥
ಜನರೆಲ್ಲರಾಡುವ ನುಡಿಗೇಳ ತಲೆವಾಗಿ । ಮನದೊಳು ಲಜ್ಜಿತನಾದ ॥ (74)

ತನ್ನೊಡಹುಟ್ಟಿದ ವಡಬಾಗ್ನಿ ಹೀರದೆ । ಮುನ್ನೀರಿನ ಜೀವನವ ॥
ಭಿನ್ನಹೃದಯವಾಗೆ ದಾಯಾದ್ಯರೊಳು ತಾವು । ಮನ್ನಿಸುವರೆ ತಮ್ಮೊಳಗೆ ॥ (75)

ಮರದೊಳಗಿದ್ದಗ್ನಿ ಮಥಿಸಲೊಡನೆ ತನ್ನ । ಮರನಸುಡದೆ ಸುಮ್ಮನಿಹುದೆ ॥
ಸುರರತಿ ಮಥಿಸಲಿಂಗಡಲೊಳು ಪುಟ್ಟಿಸಂ । ಹರಿಸಿತಿಲ್ಲವೆ ಕಾಲ ಕೂಟ ॥ (76)

ಬಲವ ಭುಜದಕೆಲದೊಳುನಿಂದ ಚಕ್ರವ । ಕಲಿಗಳ ದೇವ ತಾಕಂಡು ॥
ಬಲವಂತ ಚಕ್ರೇಶ ತನ್ನ ಸಾಹಸವ ನೆ । ನ್ನೊಳಗೆ ತೋರಿದನೆಂದನಾಗ ॥ (77)

ತನ್ನ ನೆಚ್ಚಿನ ಚಕ್ರರತ್ನವೆ ಬಂದೀಗ । ಎನ್ನನು ಬಲಗೊಂಡು ನಿಲಲು ॥
ಇನ್ನಾವುದಿಳೆಯೊಳು ಕಾವುದೆಂದಾ ಗಮ । ಹೋನ್ನತ ಮನದಿ ಚಿಂತಿಸಿದ ॥ (78)

ಅಷ್ಟಮದಗಳೆಂಬ ದುಷ್ಟರಿಗಾಸ್ಪದ । ಕಷ್ಟವೀರಾಜ್ಯ ಸಂಪದವು ॥
ಎಷ್ಟೆಷ್ಟು ಬಗೆಯೊಳು ರಕ್ಷಿಸಿದರು ಮುಂದೆ । ಕಷ್ಟವ ತೋರದುಳಿಯದು ॥ (79)

ಸೋದರರೊಳು ಸೋದರನು ಛಲದಿಂದ । ಕಾದಿಸುವಳು ರಾಜ್ಯಲಕ್ಷ್ಮಿ ॥
ಭೇದವ ತಂದೆ ಮಕ್ಕಳಿಗೆ ಪುಟ್ಟಿಪಳವ । ಳಾಧಾರವತಿ ಕಷ್ಟವೆಂದ ॥ (80)

ಪಂಚಮಹಾ ಪಾತಕಂಗಳಗಾಸ್ಪದ । ವಂಚನೆ ಮೋಹಧನಗಳ ॥
ಸಂಚಯಕಿದು ಪೇಟೆತೋರಿಮಾರುವದಿದು । ಮಿಂಚಿನ ಮಾಲೆಯಂದದೊಳು ॥ (81)

ಸವಿವಾಗ ಸವಿದೋರಿ ಕಡೆಯೊಳು ಕೊಲುವವು । ನವನವ ವಿಷಯ ಸುಖಗಳು ॥
ಇವರನುಭವಗಳು ನಂಜಿನ ಪಣ್ಗಳ್ । ಸವಿವಂತೆಂದು ಚಿಂತಿಸಿದ ॥ (82)

ಒಂದೊಂದಿಂದ್ರಿಯ ಸುಖಕಾಟಿಸಿ ಬಂದು । ನೊಂದವು ಪಲವು ಜೀವಗಳು ॥
ಇಂದು ಪಂಚೇಂದ್ರಿಯ ಸುಖಕಾಟಿಪ ನ । ಮ್ಮಂದ ವಿನ್ನಾವುದು ಚಂದ ॥ (83)

ಕೆಡುವೊಡಲನು ನಚ್ಚಿ ಇಂದ್ರಿಯ ಸುಖವೆಂಬ । ಮಡೆಗೊಳನುಂಬುದರಿಂದ ॥
ಕೆಡದ ಕೈವಲ್ಯ ಸುಖವನುಂಡು ಮೂಲೋಕ । ದೊಡೆಯ ತಾನಹೆನೆಂದು ಬಗೆದ ॥ (84)

ಎಂದಿಂತು ಮನದೊಳು ಬಗೆದು ಚಕ್ರಿಯೊಳಂ । ತೆಂದನು ಸುಗುಣಿ ಮುಳಿಸನು ॥
ಇಂದಿನ್ನು ಬಿಸುಡು ತಮ್ಮಂದಿರೊಳಗೆ ಹೆಚ್ಚು । ಕುಂದನೋಡುವುದಾವ ಪೆಂಪು ॥ (85)

ಗಿರಿಯ ಭೇದಿಪ ಶಕ್ತಿಯುಂಟು ವಜ್ರಕೆ ವಜ್ರ । ಗಿರಿಯ ಭೇದಿಪ ಶಕ್ತಿಯುಂಟೆ ॥
ಕರದಿಂದ ಬಿಸಸಿದ ಚಕ್ರವೆನ್ನಯ ವಜ್ರ । ವರದೇಹವನ್ನು ಭೇದಿಪುದೆ ॥ (86)

ನಿನ್ನ ವಕ್ಷಸ್ಥಳದೊಳು ಭಾಗ್ಯಲಕ್ಷ್ಮಿ ತಾ । ನಿನ್ನು ಸುಸ್ಥಿರವಾಗಿ ನಿಲಲಿ ॥
ನನ್ನಯ್ಯನಿತ್ತ ರಾಜ್ಯವ ನಿನಗಿತ್ತೆನಾ ನಿನ್ನಾದರು ಬಿಡುಮುಳಿಸ ॥ (87)

ನೀನೊಲಿದಿರ್ದ ವರಾಂಗನೆಯೊಳಗೀಗ । ನಾನೊಲಿದಿನ್ನು ಭೋಗಿಸಲು ॥
ಹೀನವಲ್ಲವೆ ಯೆನ್ನ ನೆಗಳ್ತೆಗೆಯೆಂಬೀ । ಮಾನನಿಧಾನನಾಡಿದನು ॥ (88)

ನಿನ್ನೊಳಗವಿನಯದಿಂದ ನಾನೆಸಗಿದ । ನನ್ನದೋಷವ ತಪದಿಂದ ॥
ಇನ್ನು ನೀಗುವೆ ಬಿಡು ಕಲುಷವ ಸೈರಿಸು । ಎನ್ನಪರಾಧ ಕೋಟಿಯನು ॥ (89)

ಎಂದು ನುಡಿದ ತಮ್ಮನ ಮಾತಲಾಲಿಸಿ । ತಂದು ಕಣ್ಬನಿಗಳ ಚಕ್ರಿ ॥
ಮುಂದರಿಯದೆ ತಾನೆಸಗಿದ ಕೃತ್ಯಕೆ । ನೊಂದು ಮನದೊಳಂತೆಂದ ॥ (90)

ಮನುವಂಶ ತಿಲಕನಪ್ಪನುಜನನು ತಪೋ । ವನಕೆಯ್ದಲವರೊಡನೆನ್ನ ॥
ಘನ ಸಾಮ್ರಾಜ್ಯ ಸುಖವನನು ಭವಿಪೆ ನೆಂ । ದನು ಜಿನಪದಕೆ ಪಾದ್ಯವನು ॥ (91)

ತನ್ನ ಕಣ್ಬನಿಗಳಿಂ ಮಾಡುವಗ್ರಜನ । ತ್ಯುನ್ನತ ಮಸ್ತಕದಲ್ಲಿ ॥
ತನ್ನ ಕಣ್ಬನಿಗಳಿಂ ರಾಜ್ಯಾಭಿಷೇಕವ । ಹೊನ್ನತಿಕೆಯನು ಪೊರೆದನು ॥ (92)

ನೂರ್ವರನುಜರೊಂದಾಗಿ ಪುಟ್ಟಿದೆ ನಾ । ನೋರ್ವನುಳಿದೆ ನೆನ್ನ ಬಿಟ್ಟು ॥
ದೋರ್ವಲ ಶಾಲಿ ನೀನೆಯ್ದಬೇಡೆಂದು ನಿ । ಗರ್ವತೆಯಿಂದ ಮನ್ನಿಸಿದ ॥ (93)

ಅನುಜರೊಳಗ್ರಣಿ ನಿನ್ನ ಬೆಂಬಲ ವಿರ । ಲೆನಗೆ ಪೊರೆವುದು ಸಾಮ್ರಾಜ್ಯ ॥
ನಿನಗಿಂದೆಗ್ಗಳವಲ್ಲವೀ ಸಾಮ್ರಾಜ್ಯ । ಎನಗೆಂದು ಪೇಳ್ದಣ್ಣನೊಳು ॥ (94)

ಡಂಬಕತನದ ಸಿರಿಯನೊಲ್ಲೆ ನಾನು ದಿ । ಗಂಬರ ನಾಥನ ಪೊರ್ಪೆ ॥
ಶಂಬರಾರಿಯ ಗೆಲ್ದು ಮುಕ್ತಿ ಸಾಮ್ರಾಜ್ಯ ದೊ । ಳಂಬಾದ ಸಿರಿಗಾಣ್ಮನಹೆನು ॥ (95)

ಎಂದು ಬಾಹುಬಲಿ ಕುಮಾರನಾನಾ ತೆರ । ದಿಂದೊಡಂಬಡಿಸಿ ಚಕ್ರಿಯನು ॥
ಬಂದು ಮಹಾಬಲಿಯೆಂಬ ಕುಮಾರ ನಿ । ಗಂದಿತ್ತು ನಿಜರಾಜ್ಯಪದವ ॥ (96)

ಬಂಧುಗಳೆಲ್ಲರ ಕೈಯೆತ್ತಿ ಕೊಟ್ಟುತಾ । ಬಂಧನವನು ಪರಿದಿಟ್ಟು ॥
ಗಂಧ ಸಿಂಧುರದಂತೆ ನಡೆದನಧೀಶನ । ಬಂಧುರ ಸಮವಸರಣಕೆ ॥ (97)

ಆಗ ಸುನಂದಾ ದೇವಿಗೆ ಸುತನವಿ । ಯೋಗದಿಂದಾದ ಶೋಕವನು ॥
ತೂಗಿ ಪೇಳುವರೆನಗಳವಲ್ಲ ಪುತ್ರವಿ । ಯೋಗದಿಂ ಮಿಗಿಲುಂಟೆ ದುಃಖ ॥ (98)

ರಾಣಿಯರೆಲ್ಲರು ಶೋಕಿಪ ದುಃಖವ । ಕಾಣಾವಾರವು ಕಣ್ಣುಳ್ಳವರು ॥
ಪ್ರಾಣಕಾಂತನ ವಿರಹದೊಳಾದ ದುಃಖದಿಂ । ಜಾಣ್ಣೆಯರಿಗೆ ಮಿಗಿಲುಂಟೆ ॥ (99)

ಭರತೇಶ್ವರ ಸೇನೆಯೊಡಗೂಡಿ ಸಾಕೇತ । ಪುರವನು ಪೊಕ್ಕ ಸಂಭ್ರಮದಿಂ ॥
ವರಚಕ್ರರತ್ನವ ಪೂಜಿಸಿ ಸುಖದಿಂ । ದಿರುತಿರ್ದ ದೋರ್ಬಲಿಯಿತ್ತ ॥ (100)

ಕೈಲಾಸಗಿರಿದುರ್ಗ ಪೇರಿದ ರಿಪುಕರ್ಮ । ಜಾಲದೊಡನೆ ಕಾದಲೆಂದು ।
ಭೂಲೋಕದೊಳಗಿದಿರಿಲ್ಲೆನುತಾಗ । ಮೂಲೋಕದೊಡೆಯನ ಬಳಿಗೆ ॥ (101)

ಸುರಪುಷ್ಪವೃಷ್ಟಿಯು ಪರಿಮಳದಿಂದ ಬಂ । ಧುರವಾದ ಮಂದಮಾರುತನು ॥
ಪರಿತಂದಿದಿರ್ಗೊಂಡು ಸಂತಾಪವನು ಪರಿ । ಹರಿಸಿತು ಸುಖನಂದದೊಳು ॥ (102)

ದುಂದುಭಿ ಧ್ವನಿಗಳು ಕೇಳಲಾದುವು ತನ । ಗಂದೊಸಗೆಯ ಪೇಳ್ದಂತೆ ॥
ವೃಂದಾರಕರ ಜಯಘೋಷಣೆ ಕೇಳ್ದಂತು । ಮುಂಪಪ್ಪ ಜಯವ ಪೇಳ್ವಂತೆ ॥ (103)

ಭವಹರ ಜಿನಪತಿಯಾಸ್ಥಾನ ಸರಸಿಯು । ಯುವರಾಜ ಹಂಸಸಿಂಗರಿಸಿ ॥
ಅವಯವದಿಂದವನತನಾಗಿ ನಿಂದನು । ತ್ಸವದಿಂದ ಕರಗಳ ಮುಗಿದು ॥ (104)

ದೇವರ ದೇವನೀ ಯುವರಾಜ ಪದವಿಯ । ಭೂವಳಯದೊಳಿತ್ತಂತೆ ॥
ಕೈವಲ್ಯ ಸಾಮ್ರಾಜ್ಯ ಯುವರಾಜ ಪದವಿಯ । ಪ್ರವ್ರಜ್ಯ ಪದವಿತ್ತು ಸಲಹು ॥ (105)

ಎಂದು ಬಿನ್ನವಿಸಲು ಜಿನಪನ ವದನಾರ । ವಿಂದದಿ ದಿವ್ಯಧ್ವನಿಯು ॥
ಅಂದುದಯಿಸಲು ಹೇಯಾದೇಯ ತತ್ವಂಗ । ಳಂದವ ಪೊದಲು ಕೇಳದನು ॥ (106)

ಮತ್ತೆ ಪಂಚವಿಧ ಮಹಾವ್ರತ ಮುಂತಾದಿ । ಪ್ಪತ್ತೆಂಟು ಮೂಲ ಗುಣಗಳ ॥
ಬಿತ್ತರಗಳ ಕೇಳಿ ಇಚ್ಛಾಮಿಯಿಂದಾ ತಾ । ಚಿತ್ತದೊಳಗೆ ಧರಿಸಿದನು ॥ (107)

ಉತ್ತರಗುಣ ಮೂವತ್ತಾರನು ಧರಿಸಿದ । ಚಿತ್ತ ಶುದ್ಧಿಯೊಳು ಕೇಶಗಳ ॥
ಮೊತ್ತವ ಪಂಚ ಮುಷ್ಟಿಗಳಿಂದ ಕಿತ್ತುಜಿ । ನೋತ್ತಮ ಮಂತ್ರ ಪೂರ್ವಕದಿ ॥ (108)

ದೇವೇಂದ್ರ ರತ್ನದ ಹರಿವಾಣದೊಳಗಾಂತ । ನಾ ವಿಭುವಿನ ಕೇಶಗಳ ॥
ಕೈವಲ್ಯ ಕಾಂತೆಗೆ ವಶವಾಗಿ ಕುರುಹಿತ್ತು । ಭಾವದೊಳೊಪ್ಪಿದನಾಗ ॥ (109)

ಜಿನನನುಮತಿಯಿಂದಂಗಾಂಗ ಬಾಹ್ಯವೆಂ । ದೆನಿಪ ಶಾಸ್ತ್ರಗಳನು ಕಲಿತು ॥
ವಿನಯದಿಂ ಬೀಳ್ಕೊಂಡೆ ಕವಿಹಾರಿಯಾ । ದನು ಬಾಹುಬಲಿ ಮುನಿರಾಯ ॥ (110)

ಅತಿರಮ್ಯವಾದ ಪ್ರದೇಶದೊಳಾ ಮುನಿ । ಪತಿಯೊಂದು ವರ್ಷ ಪರ್ಯಂತ ॥
ಮತಿಪೂರ್ವಕ ಮಿಲ್ಲಿಂದ ಚಲಿಸದೆಯು । ಪ್ರತಿಮಾಯೋಗದಿ ನಿಂದನಾಗ ॥ (111)

ನಾಸಾಗ್ರದೊಳಿಟ್ಟ ಸಮದೃಷ್ಟಿ ಧ್ಯಾನ ವಿ । ಲಾಸದಿಂ ಶಾಂತರಸವನು ॥
ಸೂಸುವ ನಗೆಮೊಗ ವಾಜಾನುಬಾಹು ಗ । ಳಾಸುರವಂದ್ಯ ಗೊಪ್ಪಿದವು ॥ (112)

ಇನನಗ್ನಿ ದೆಸೆಯೊತ್ತಿಗೊಂಡು ನಡೆವನನು । ದಿನ ತುಹಿನದ ಬಾಧೆಗಳ್ಗೆ ॥
ಘನ ಹಿಮಗಿರಿಯಂತೆ ಚಲಿಸದೆ ನಿಂದನಾ । ಮುನಿಪ ಯೋಗದೊಳೇನ ನೆಂಬೆ ॥ (113)

ದೇವತೆಗಳು ವಹ್ನಿಮುಖದೊಳಾಹುತಿಯನು । ಸೇವಿಪರಿಂದು ಕಲಿಗಳ ॥
ಸೇವನೆಯನು ಬಿಟ್ಟರೆನಲಾ ಹಿಮದ ಪ್ರ । ಭಾವವ ನೇನೆಂದು ಪೇಳ್ವೆ ॥ (114)

ಹಿಮಕಣಗಳು ತನುವಿನೊಳು ತಪೋಲಕ್ಷ್ಮಿ । ಯುಮರ್ಪ್ಪಿಹೊತ್ತನೆ ಸಾತ್ವಿಕದಿ ॥
ಚಿಪುರ್ವನಿಗಳು ಪೊರಪೊಣ್ಮಿದವು ಸಂ । ಯಮಿಯೋಗದೊಳು ನಿಂದಿರಲು ॥ (115)

ಉರಿವ ಬೇಸಗೆಯು ತಾಪವ ತಾಳಲಾರದೆ । ಹರನು ಗಂಗೆಯ ಧರಿಸಿದನು ॥
ಹರಿ ಇಂಗಡಲ ಸೇರಿದನೆನಲಾ ಮುನಿ । ವರನ ಧೈರ್ಯವನೇನ ಪೇಳ್ವೆ ॥ (116)

ಸುತ್ತಲು ಪುತ್ತುಗಳಾವರಿಸಿದವವ । ರೊತ್ತಿನೊಳಗೆ ಲತೆ ಪರ್ಪೆ ॥
ಪತ್ತಿದುದಂಗವ ಪಲವು ಸರ್ಪಂಗಳ । ಮೊತ್ತವಾಶ್ರಯಿಸಿ ಕೊಂಡಿಹುವು ॥ (117)

ಕಿಡಿಗಳನುಗುಳುತ ಕುಕ್ಕುಟ ಸರ್ಪಂಗ । ಳೆಡೆಯಾಡುತಿಹವು ದೋರ್ಬಲಿಯ ॥
ಎಡಬಲದೊಳಗೆನಲಾತನ ಧೈರ್ಯವ । ಬಿಡಗನೇನೆಂದು ಪೇಳುವೆನು ॥ (118)

ಪೊಡೆವ ಸಿಡಿಲು ಮಿಂಚು ಬೀಸುವ ಬಿರುಗಾಳಿ । ಯೊಡಗೂಡಿ ಮುಗಿಲೊಡೆವಂತೆ ।
ಜಡಿವ ಬಲ್ಸೋನೆಗಳವರ ಸಂಪಾತಕೆ । ಯೊಡಲೊಡ್ಡಿ ನಿಂದನಾ ಯೋಗಿ ॥ (119)

ಮಾಗಿ ಬೇಸಗೆ ಮಳೆಗಾಲದೊಳ್ಪ್ರತಿಮಾ । ಯೋಗದೊಳಾ ಮುನಿ ರಾಯ ॥
ಆಗ ಶೀತಾತಪ ಮಳೆಗೆ ಸುಗಿಯದೆ ಮ । ಹಾಗಿರಿಯಂತೆ ನಿಂದಿರ್ದ ॥ (120)

ಜಡೆಗಳು ನಿಬಿಡರ್ವು ಕರ್ಮೇಂಧನಗಳ । ಸುಡಲು ಧ್ಯಾನಾಗ್ನಿಗಳಿಂದ ॥
ಕಡುವೇಗದಿಂ ಪೇಳ್ವ ಧೂಮರೇಖೆಗಳಂತೆ । ಕಡು ಸೊಬಗಿಂದಾ ಮುನಿಯು ॥ (121)

ಯತಿಪನ ತನು ಕಲ್ಪತರುವೆಂದೆನು ತೊಡರ್ದ । ಲತೆಗಳ ವಿದ್ಯಾಧರರ ॥
ಸತಿಯರೆಯ್ತಂದು ಬಿಡಿಸುವರು ತಪದು । ಗ್ರತೆ ಗತಿ ವಿಸ್ಮಯಬಟ್ಟು ॥ (122)

ಇಂತುಗ್ರೋಗ್ರ ತಪದೊಳೊಂದು ವರುಷಪ । ರ್ಯಂತ ನಿರಂತರ ನಿಲಲು ॥
ಅಂತರಿಸಿತು ಕೇವಲ ಬೋಧವೇಕೆಂದು । ಚಿಂತಿಸಿದನು ಭರತೇಶ ॥ (123)

ಆ ಜಿನೇಶನ ಬೆಸಗೊಳ ಬೇಕೆಂ । ದಾವರದಿಂದ ಲೆಯ್ದಿದನು ॥
ಮೇದಿನಿಪತಿ ಬಲಗೂಡಿ ನಾನಾವಾದ್ಯದ । ನಿನದ ದಿಕ್ತಟವ ವ್ಯಾಪಿಸಲು ॥ (124)

ಆದಿ ಜಿನೇಶನ ಬಲಗೊಂಡು ನುತಿಸಿ ಚೆ । ನ್ನಾಗಿ ಯಷ್ಟಾಂಗದಿಂದೆರಗಿ ॥
ಶ್ರೀಗುರು ಹಂಸನ ಪೂಜಿಸಿ ಬೆಸಗೊಂಡ । ನಾಗದೋರ್ಬಲಿ ಮುನಿಪತಿಗೆ ॥ (125)

ಧ್ಯಾನದೊಳೊಂದು ವರುಷನಿಂದು ಕೇವಲ । ಜ್ಞಾನವುದಯವಾದುದಿಲ್ಲ ॥
ಏನು ಕಾರಣ ಸ್ವಾಮಿಯೆಂದು ಕೇಳಲು ದಿವ್ಯ । ಧ್ವನಿಯಿಂ ದುದಯಿಸಿತಾಗ ॥ (126)

ಮಾನ ಕಷಾಯವಿನ್ನು ಪತ್ತುವಿಡದು ನಿ । ನ್ನೀ ನೆಲದೊಳು ನಿಂದೆನೆಂಬ ॥
ಹೀನ ಧ್ಯಾನವ ಬಿಟ್ಟು ಕೇವಲ ಬೋಧವ । ನೀನೆರಗಲು ಪಡೆವವನು ॥ (127)

ಎಂದು ಬೆಸಸಲು ಗುರೂಪದೇಶವ ಕೇಳಿ । ಬಂದು ಭರತ ಚಕ್ರೇಶ ॥
ಮಂದರ ಗಿರಿಯಂತೆ ನಿಂದಿರ್ದವೀ ಮುನಿ । ವೃಂದಾರಕನ ಪದಯುಗವ ॥ (128)

ಪೂಜಿಸಿ ಸಾಷ್ಟಾಂಗವೆರಗಿ ಕೈಮುಗಿದು ಮ । ನೋಜ ವಿಜಯಮುನೀ ರಾಯ ॥
ಮೂಜಗದೊಡೆಯನಪ್ಪುದ ಬಿಟ್ಟು ನೀನಿಂತು । ವ್ಯಾಜದಿ ನಿಲುವುದುಚಿತವೆ ॥ (129)

ಎನ್ನಂದಿಗರು ಪಲಂಬರು ಯೀಧರೆಯನು । ಮುನ್ನಮಹಾ ಮೋಹದಿಂದ ॥
ಎನ್ನದು ತನ್ನದೆಂದಾಳ್ದು ಪೋದರು ಧರೆ । ನಿನ್ನಾರದೆಂದು ನೀ ನೆನೆವೆ ॥ (130)

ಮೂರುದಿನದ ಸಿಂಗಾರು ತೊಡವ ಗೋರ್ವ । ನೀರೆ ಯಿಟ್ಟಂತೆ ಯೀ ಬಾಳು ॥
ಹೋರಾಟವ ಮಾಡಿ ಬರಿದೆ ದೊರೆಗಳೆಲ್ಲ । ದೂರಿಗೀಡಾದರು ಸ್ವಾಮಿ ॥ (131)

ಆ ನುಡಿಗೇಳಿಯಂತಃಕರಣದೊಳಿರ್ದ । ಮಾನ ಕಷಾಯ ತೊಲಗಲು ॥
ಧ್ಯಾನ ನಿಶ್ಚಲವಾಗೆ ಘಾತಿ ಕರ್ಮಂಗಳ । ಸೇನೆ ಬೆದರಿದುದೇನೆಂಬೆ ॥ (132)

ಘಾತಿ ಮೊದಲು ಮೋಹವನು ಬಳಿಕ ತಾನು । ವೀತರಾಗತೆಯಿಂದಳಿದ ॥
ನೂತನವೆನಿಪ ಶುಕ್ಲಧ್ಯಾನದಿಂ ಶೇಷ । ಘಾತಿಕರ್ಮಗಳ ಖಂಡಿಸಿದ ॥ (133)

ಕೇವಲ ಬೋಧದಿವಾಕರನುದಯಿಸ । ಲಾವಿಭುವಿಗೆ ಗಂಧ ಕುಟಿಯು ॥
ದೇವೇಂದ್ರನಪ್ಪಣೆಯಿಂದ ನಿರ್ಮಿಸಿದನು । ದೇವಕರ್ಣಿಕತಿ ಮುದದಿಂದ ॥ (134)

ಚಾಮರಯುಗಲಸೇಕಾತ ಪತ್ರದ ಸಿರಿ । ಹೇಮ ವಿಷ್ಟರ ಪುಷ್ಪವೃಷ್ಟಿ ॥
ಆ ಮಹಿಮಗೆ ಸುರದುಂದುಭಿಯೊಪ್ಪಿತು । ಕೋಮಲ ತನುಕಾಂತಿವೆರಸಿ ॥ (135)

ದಿವಿಜರೆಲ್ಲರು ಜಯಘೋಷ ದುಂದುಭಿಗಳ । ರವದೊಡಗೂಡಿ ಬಂದಾಗ ॥
ತವಕದಿ ಪೂಜಿಸೆ ಪೋಪರದರ ವೈ । ಭವವನೇನೆಂದು ಪೇಳುವೆನು ॥ (136)

ನಾನಾದೇಶ ವಿಹಾರದಿಂದಾ ಜಿನ । ಭಾನು ಭವ್ಯಾಂಭೋಜವನು ॥
ಏನೆಂಬೆ ವಿಕಸನವನು ಮಾಡಿ ತಣಿಪಿದ । ಪೀನವಚೋಂಶುಗಳಿಂದ ॥ (137)

ಬಂದಾದಿ ಜಿನಪನ ಸಮವಸರಣದೊಳು । ನಿಂದಿರೆದೋರ್ಬಲಿ ಜಿನನ ॥
ಅಂದು ಪೂಜಿಸಿದನು ಭರತೇಶ್ವರ ಮುದ । ದಿಂದ ಮಹಾ ವಿಭವದೊಳು ॥ (138)

ಚಕ್ರವರ್ತಿಯ ದಿಗ್ವಿಜಯ ಯುದ್ಧಂಗಳ । ವಕ್ರೋಕ್ತಿಯಿಂ ಪೇಳ್ವೆ ಕೆಲರು ॥
ಆಕ್ರಮಿಸದೆ ನಾನು ಪೂರ್ವ ಶಾಸ್ತ್ರಂಗಳ ಯಾ । ಥಾ ಕ್ರಮದಿಂದ ಪೇಳ್ದೆನು ॥ (139)
ಇದು ಶ್ರುತಸಾಗರ ಮುನಿರಾಯನ ಶಿಷ್ಯ । ಚೆದುರ ಚಂದ್ರಮವಿರಚಿಸಿದ ।
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯ । ಪದದೊಳ್ಪದಿನಾಲ್ಕುಸಂಧಿ ॥ (140)

( ಹದಿನಾಲ್ಕನೆಯ ಸಂಧಿ ಸಮಾಪ್ತಂ)

## ಹದಿನೈದನೆಯ ಸಂಧಿ.

ಶಕ್ತಿ ಯುಕ್ತಿಗಳಿಂದ ರಿಪು ಕರ್ಮಂಗಳ । ವ್ಯಕ್ತಿಯ ಗೆಲಿದು ಸುಖದೊಳು ॥
ಮುಕ್ತಿ ಸಾಮ್ರಾಜ್ಯ ವಾಳದ ದೋರ್ಬಲೀಶಗೆ । ಭಕ್ತಿಯೊಳಾನೆರಗುವೆನು ॥ (1)
ಉದ್ಧತರಿಪುಗಳ ಗೆಲಿದು ಭರತಚಕ್ರಿ । ಸಿದ್ಧ ವಿಜಯ ತಾನಾಗಿ ॥
ಸಿದ್ಧ ಸಿಂಹಾಸನದೊಳು ಕುಳ್ಳಿರ್ದನು ಮೌಳಿ । ಬದ್ಧರೋಲಗಿಸಲು ತನ್ನ ॥ (2)
ಮೊದಲನು ಕ್ರಮದಿ ಸಾಧಿಸಿ ಮಾಗಧ ದೇವ । ಮೊದಲಾದ ಸುರರೆಯ್ತಂದು ॥
ಮುದದಿ ಗಂಗಾ ಸಿಂಧು ಸತ್ತೀರ್ಥ ಮೊದಲಾದ । ನದಿಗಳ ಜಲವನು ತುಂಬಿ ॥ (3)
ಮಂಗಲಮಾದೌಷಧಿ ರತ್ನಗರ್ಭಿತ । ಗಾಂಗೇಯ ಕುಂಭಗಳ್ವಿಡಿದು ॥
ಮಂಗಳವಾದ್ಯ ಮೊಳಗಲಭಿಷೇಕವ । ಕಂಗೊಳಿಪಂತೆ ಮಾಡಿದರು ॥ (4)
ಮೂವತ್ತಿಚ್ಛಾಸಿರ ಮಕುಟಬದ್ಧರು ಮೈ । ಗಾವಲ ಗಣ ಬದ್ಧರೆಂಬ ॥
ದೇವರ್ಕಳು ಮೂವತ್ತೆರಡು ಸಾವಿರಬಂದು । ಸೇವೆಯನೊಲಿದು ಮಾಡುವರು ॥ (5)
ರಂಭೆಗೆ ಸರಿಮಿಗಿಲೆನಿಸುವ ರೂಪಿನ । ಕುಂಭ ಕುಚದ ಕೋಮಲೆಯರು ॥
ತೊಂಭತ್ತಾರು ಸಾವಿರವಿರೆ ಭರತ ಸು । ಖಾಂಬೋಧಿಯೊಳೊಪ್ಪಿದನು ॥ (6)
ಪುರ ನಿಧಿಶ್ಶಯ್ಯಾಸನ ಭೋಜ್ಯ ವಾಹನ । ವರರತ್ನ ಬಲನಾಟ್ಯಸಭಾ ॥
ಪರಿಕರವೆನಿಪ ದಶಾಂಗ ಭೋಗಂಗಳ । ಸಿರಿಯೊಳೋಲಾಡುತಲಿರ್ದ ॥ (7)
ವಿನುತ ಮಹಾ ಮಹವೆಂದೆಂಬ ನಾಮದ । ಜಿನಪೂಜೆಯನು ಮಾಡಿ ತನ್ನ ॥
ಧನಕನಕಾದಿ ವಸ್ತುಗಳ ಸತ್ಪಾತ್ರಕ್ಕೆ । ವಿನಿಯೋಗಿಸಲೆಂದು ನೆನೆದು ॥ (8)
ಮೊಳೆತಧಾನ್ಯಂಗಳ ರಾಜಾಂಗಣ । ದೊಳಗು ಪೊರಗು ಬಿತ್ತಿಸಿದನು ॥
ಗಳಲನೆ ಬರಹೇಳ್ದನು ಕ್ಷತ್ರಿಯ ವೈಶ್ಯ । ಕುಲೋತ್ತಮರೆನಿಪಭವ್ಯರನು ॥ (9)
ಕೆಲರು ಕೆದರಿದ ಪಲ್ಲವ ಪುಷ್ಪ ಫಲಸಂ । ಕುಲಧಾನ್ಯಾಂಕುರಗಳನು ॥
ತುಳಿವುತ ಬಂದರಾವ್ರತಿಕರು ವ್ರತಿಕರು । ಕೆಲಬರಲ್ಲಿಯೆ ನಿಂದಿರಲು ॥ (10)
ಸಾವದ್ಯ ಭೀರುಗಳೆಂಬುದ ತಿಳಿದು ಮ । ತ್ತಾವಿಭು ಬರಹೇಳಲವರು ॥
ತೀವಿದಂಕುರಗಳ ಮೆಟ್ಟದೆ ಬಂದುವು । ಹೀ ವಲ್ಲಭನಿಗೆರಗಿದರು ॥ (11)
ಎಲ್ಲರು ಬಂದಮಾರ್ಗವಬಿಟ್ಟು ನೀವೀಗ । ಳಲ್ಲಿಗೆ ಬಂದ ಕಾರಣವ ॥
ಸೊಲ್ಲಿಸಿ ನೀವೆನಲವರೆಂದರು ಭೂ । ವಲ್ಲಭನೊಳಗಿಂತೆಂದು ॥ (12)
ಫಲಪಲ್ಲವ ಹರಿತಾಂಕುರ ಕುಸುಮಂಗ । ಳೊಳು ಜೀವರಾಶಿತುಂಬಿಹುದು ॥
ಕೊಲೆನೆಂಬ ವ್ರತವುಳ್ಳವರು ಮೆಟ್ಟಿ ಬಾರದೆಂ । ದೊಲಿದು ವೃಷಭಸೇನಮುನಿಪ ॥ (13)
ಬೆಸಸೆ ಜಿನೇಂದ್ರನ ಸಭೆಯೊಳು ಕೇಳ್ದೆವು । ಪ್ರಸಿಯಲ್ಲ ಪರ್ವದಿನದೊಳು ॥
ಕುಸುಮಾಂಕುರಗಳ ಮೆಟ್ಟಬಾರದು ಯೆಂ । ದೊಸೆದಿಲ್ಲಿಬಂದೆವು ಸ್ವಾಮಿ ॥ (14)

ಎಂದೆನಲವರ ದೃಢವ್ರತಗಳಗಾ । ನಂದಿಸಿ ಭರತ ಚಕ್ರೇಶ ॥
ವಂದ್ಯರು ದಾನ ಸನ್ಮಾನಯೋಗ್ಯರು ಯಿವ । ರೆಂದು ಮನ್ನಿಸಿ ಪದ್ಮನಿಧಿಯು ॥ (15)

ತರಿಸಿ ಸೂತ್ರಂಗಳನೇಕ ದಶೋತ್ತರ । ವೆನಿಪ ಪನ್ನೊಂದು ಸಂಖ್ಯೆಗಳ ॥
ವರಯಜ್ಞಸೂತ್ರಗಾತ್ರರ ಮಾಡಿಯವರಿಗೆ । ನಿರವಿಸಿದನು ಕ್ರಿಯೆಗಳನು ॥ (16)

ದಾನ ಸನ್ಮಾನದಿಂ ಮನ್ನಿಸಿದನು ವ್ರತ । ಹೀನರಕಳೆದು ಬೇರ್ಪಡಿಸಿ ॥
ಮಾನ ಭಂಗವತಾಳ್ದು ವ್ರತಗಳ ಕೈಕೊಳ್ವ । ಮಾನಸರಾವರನಿಬರು ॥ (17)

ದಾನ ಪೂಜಾದಿ ಷಟ್ಕರ್ಮ ಭೇದಂಗಳ । ತಾನವರವರ ವೃತ್ತಿಗಳ ॥
ಮಾನವ ಪತಿ ನಿರವಿಸಿದನು ಶ್ರೀಜಿನ । ಭಾನು ಪೇಳದ ಮಾರ್ಗದೊಳು ॥ (18)

ಮತ್ತೆ ಗರ್ಭಾದಾನ ಮುಂತಾದ ನೂರೆಂ । ಟುತ್ತಮ ಕ್ರಿಯೆಗಳನವರ್ಗೆ ॥
ಚಿತ್ತರದಿಂದ ನಿರೂಪಿಸಿದನು ಭೂ । ಪೋತ್ತಮ ಮನುಕುಲತಿಲಕ ॥ (19)

ವರಗರ್ಭದೀಕ್ಷಾನ್ವಯ ಕರ್ತಾನ್ವಯ । ಸುರುಚಿರನಾಮದಿಂದೆಸೆವ ॥
ಪರಮಾರ್ಥವೆನಿಪ ನೂರೆಂಟು ಕ್ರಿಯೆಗಳನು । ವರಮಂತ್ರವಿಧಿಪೂರ್ವಕದಿಂ ॥ (20)

ವ್ರತ ಸಂಸ್ಕಾರ ಮಂತ್ರೋಪದೇಶಗಳಿಂದ । ಪ್ರತಿಜನ್ಮ ವಾದುದರಿಂದ ॥
ನುತಿಸಿ ದ್ವಿಜನ್ಮರು ದ್ವಿಜರೆಂಬ ಪೆಸರಿಟ್ಟ । ನತಿಶಯದಿಂ ಭರತೇಶ ॥ (21)

ಉತ್ತಮ ಕ್ಷತ್ರಿಯ ಪುತ್ರರೊಳಗೆ ಮೂ । ವತ್ತಿಚ್ಛಾಸಿರವಾಗಿ ನೋಡೆ ॥
ಮತ್ತವರಿಗೆ ಪರಬ್ರಹ್ಮ ಪುತ್ರರೆಂ । ಬುತ್ತಮ ನಾಮವನಿಟ್ಟ ॥ (22)

ರಾಜಮಾನ್ಯರು ವರ್ಣೋತ್ತಮರತಿಪುಣ್ಯ । ಭಾಜನರಿವರೆ ದಾನ ॥
ಪೂಜೆಗೆ ಯೋಗ್ಯರೆಂದವರ ಮನ್ನಿಸಿದನು । ರಾಜಾಧಿ ರಾಜ ಸಂತಸದಿ ॥ (23)

ಕೆಲವು ದಿವಸವಿಂತು ವಿಪ್ರಸಂತಾನವವು । ಸಲೆಸಂದು ನಡೆವುತಲಿರಲು ॥
ಇಳೆಯಾಣ್ಮನೊಂದುದಿನದ ರಾತ್ರಿಯೊಳು ಕಂಡ । ಹಲವುದುಃ ಸ್ವಪ್ನಗಳನು ॥ (24)

ಆಚ್ಚರಿಯನು ಪುಟ್ಟಸುವದಾರ ಫಲಗಳ । ಲಚ್ಚಣವನು ಸೂಚಿಸುವ ॥
ಬೆಚ್ಚಿದಂದದಿ ಸ್ವಪ್ನಗಳ ಕಂಡ ಭರತೇಶ । ನೆಚ್ಚತ್ತು ಮನದಿ ಚಿಂತಿಸಿದ ॥ (25)

ಯುಗದ ಕಡೆಯೊಳವು ಫಲದೋರುವವೆಂದು । ಬಗೆದನು ಮನದಿಂದಾಗ ॥
ಜಗದೊಡೆಯನ ಕೇಳಿ ನಿರ್ಣೈಸಬೇಕೆಂದು । ಸುಗುಣರದೇವ ನೆಯ್ದಿದನು ॥ (26)

ಉದಯಕಾಲದ ಕ್ರಿಯೆಗಳನು ನಿರ್ವರ್ತಿಸಿ । ಮುದದಿಂದ ಪರಿಜನವೆರಸಿ ॥
ಸದಮಲ ಚರಿತನೆಯ್ದಿದನಾದಿ ಜಿನಪನ । ಪದಪದ್ಮಗಳ ಸನ್ನಿಧಿಗೆ ॥ (27)

ಬಲಗೊಂಡು ಸಾಸಿರದೆಂಟು ನಾಮಗಳಿಂ । ದೊಲಿದು ನುತಿಸಿ ಜಿನಪತಿಯ ।
ಪಲವರ್ಚನೆಗಳಿಂದರ್ಚಿಸಿ ಮುನಿಕುಲ । ತಿಲಕನ ವಂದಿಸಿ ಬಳಕ ॥ (28)

ನರಪತಿಯುಚಿತ ಸ್ಥಾನದೊಳುಕುಳಿತಿರಲಾಗ । ದೊರೆಕೊಳ್ಳೆ ಪರಿಣಾಮ ಶುದ್ಧಿ ॥
ಭರದಿಂದ ದೇಶಾವಧಿ ಬೋಧ ಪುಟ್ಟಿತು । ಭರತೇಶ್ವರನ ಪುಣ್ಯಕಣೆಯೆ ॥ (29)

ವಿನಯದಿ ಧರ್ಮಸ್ವರೂಪವ ಕೇಳಿ ಅ । ವನಿಪತಿ ತನ್ನ ಕಾರ್ಯವನು ॥
ಜಿನಪತಿಯೊಡನೆ ಬಿನ್ನವಿಸಿದನಾ ಮರು । ಳ್ತನದಿಂದ ದ್ವಿಜರ ಸೃಷ್ಟಿಸಿದೆ ॥ (30)

ಒಂದಾದಿಯಾಗಿ ಪನ್ನೊಂದುಣಿವರೊಳ ಪರ್ಯಂತದಿ । ಸಂದಗುಣಗಳ ಸೂಚಿಸುವ ॥
ಒಂದು ಸೂತ್ರದಿ ಮೊದಲ್ಗೊಂಡು ಸೂತ್ರಂಗಳ । ನ್ನೊಂದನವರ್ಗೆ ಕಲ್ಪಿಸಿದೆ ॥ (31)

ಇದರೊಳು ಗುಣವೊ ದೋಷವೊ ಮೋಣಯುಕ್ತವೊ । ಮುದಯುಕ್ತವೊ ಹಾನಿವೃದ್ಧಿ ॥
ಇದರಿಂದಪ್ಪುದೊ ಬೆಸಸೆಂದು ಕೇಳಿದ । ನೃಪರಂಜನನು ಭರತೇಶ ॥ (32)

ಅಂತಲ್ಲದೆ ಯಿಂದು ಬೆಳಗಪ್ಪ ಜಾವದೊ । ಳಿಂತು ದುಸ್ವಪ್ನಸಂತತಿಯ ॥
ಅಂತರಿಸದೆ ಕಂಡೆನಿವರ ಫಲಂಗಳ । ನಿಂತು ಜಿನನು ಬೆಸಸೆನಲು ॥ (33)

ಅವಧಿ ಜ್ಞಾನದಿಂದ ತಾನರಿದರು ಭವ್ಯ । ನಿವಹವೆಲ್ಲವು ಕೇಳಲೆಂದು ॥
ಅವನಿಪ ಬೆಸಗೊಳಲೊಡನೆ ದಿವ್ಯ ಧ್ವನಿ । ಅವತರಿಸಿತು ಭೋರ್ಗರೆದು ॥ (34)

ದ್ವಿಜರನು ಧರ್ಮಾರ್ಥದಿಂದ ನಡೆಸಲೆಂದು । ಸೃಜಿಸಿದುದದುವೆ ಲೇಸಾಯ್ತು ॥
ನಿಜಧರ್ಮದೊಳು ಕೃತಯುಗ ಪರಿಯಂತರ । ದ್ವಿಜರು ನಡೆವರಲ್ಲಿಂದ ॥ (35)

ಕಲಿಯುಗ ದೊತ್ತಿನೊಳವರು ಸನ್ಮಾರ್ಗಕ್ಕೆ । ಸಲೆಪರಿಪಂಥಿಗಳಹರು ॥
ಒಲಿದು ದುರ್ಮಾರ್ಗೋಪದೇಶಗಳನು ಮಾಡಿ । ಬಲಿಯಿಸುವರು ಮಿಥ್ಯಾತ್ವವನು ॥ (36)

ಕಪಟ ಹೃದಯದಿಂದ ಶ್ರುತಿವಾಕ್ಯಂಗಳ । ವಿಪರೀತವಾಗಿ ಪೇಳುವರು ॥
ಜಪಹೋಮ ತರ್ಪಣನಿಯಮ ವೆಂದರ್ಥವ । ಅಪಹರಿಸುವರು ಲೋಭದೊಳು ॥ (37)

ಗ್ರಹಣ ಸಂಕ್ರಾಂತಿ ಪರ್ವಗಳೊಳು ದ್ವಿಜರಿಗೆ । ಬಹಳ ಧನಗಳಿತ್ತವರ್ಗೆ ॥
ಗ್ರಹಚಾರದೋಷಕ್ಕೆ ಪರಿಹಾರವೆಂದು ಸಂ । ಗ್ರಹವಮಾಡುವರು ಧನಗಳ ॥ (38)

ಮಧು ಮದ್ಯ ಮಾಂಸ ಸೇವೆಗಳ ಮಾಡುವರು ಬಹು । ವಿಧಯಾಗವನೆವದಿಂದ ॥
ಅಧಮರಾಧಾರ್ಮಿಕರವರನ್ಯ ವನಿತಾಸೇ । ವನೆಯೊಳು ತತ್ಪರರಹರು ॥ (39)

ಅತಿಧೂರ್ತರು ಪಾಪಿಗಳು ನಿಷ್ಠುರ ವಾಕ್ಯ । ಯುತರು ಹಿಂಸಾಕರ್ಮರತರು ॥
ವ್ರತಹೀನರವರಿಗೆ ದಾನವ ಕೊಡಲಧೋ । ಗತಿಯಲ್ಲದೆ ಪುಣ್ಯವಿಲ್ಲ ॥ (40)

ಉತ್ತಮ ವೇದಾಹಾರಾದಿ ದಾನವ । ನೊತ್ತರಿಸುವರೀದ್ವಿಜರು ॥
ಹತ್ತುತೆರದ ದಾನಂಗಳ ಕಲ್ಪಿಸಿ । ವಿತ್ತವನಪಹರಿಸುವರು ॥ (41)

ಈಗಸದಾಚಾರರಪ್ಪುದರಿಂ[1] ದಿನ । ರಾಗದು ಕೆಡಿಸಲ್ಕಿನ್ನಿವರ ॥
ನೀಗುರಿಯಾಗದಿರಪಕೀರ್ತಿಗೆಂದಾ । ಯೋಗಿಗಳರಸ ಪೇಳ್ದನು ॥ (42)

ಬಳಿಕೆಪೇಳಿದನು ಷೋಡಶ ಸ್ವಪ್ನಂಗಳ ಫಲ । ಗಳುಮನಿಂತೆಂದು ಜಿನೇಂದ್ರ ॥
ನೆಲದಾಣ್ಮ ಕೇಳು ನೀಕಂಡ ಕನಸುಗಳು । ಫಲದಾಯಿಗಳು ಮುಂದೆ ಮುಂದೆ ॥ (43)

ಇಪ್ಪತ್ತು ಮೂರು ಕೇಸರಿಗಳ ನೀಬೆಳ । ಗಪ್ಪ ಜಾವದೊಳು ಕಂಡುದರಿಂ ॥
ಇಪ್ಪತ್ತು ಮೂರು ತೀರ್ಥೇಶ್ವರರಿನ್ನು ಮುಂ । ದಪ್ಪರು ಕ್ರಮದಿಂದಿಲ್ಲಿ ॥ (44)

ಹರಿಯೊಡನಾಡುವ ಹರಿಣಾದಿ ಮೃಗಗಳ । ನಿರದೆ ನೀ ಕಂಡುದರಿಂದ ॥
ಧರೆಯೊಳು ಪಾಷಂಡಿಗಳು ಪುಟ್ಟಿಯಡಗುವ । ಪರಿಯ ಸೂಚಿಪ್ಪುದು ಭೂಪಾಲ ॥ (45)

ಆನೆಯು ಭಾರವ ಹೊರಲಾರದಳುಕುವ । ಹೀನ ಹಯವ ಕಂಡುದರಿಂ ।
ಪೀನ ಮೂಲೋತ್ತರ ಗುಣಗಳ ಮುನಿಗಳು । ಹೀನ ಸತ್ವರು ದುಷಮದೊಳು ॥ (46)

---

[1] ದಾಗದು ಕೆಡಿಸಲ್ಕಿನ್ನಿವಾ ॥

ಧರಿಸಲಾರದೆ ಕೆಡಿಸುವರು ಕೆಲರು ತಮ್ಮ । ಗುರುಜಿನಗಪಕೀರ್ತಿಯನು ॥
ತರಿಸುವ ಕಲಿಕಾಲ ದೋಷವಿದೆಂದು । ನಿರವಿಸಿದನು ಜಿನಚಂದ್ರ ॥ (47)

ಹಿಂತಾಗಿನಿಂದ ವೃಷಭಗಳ ಕನಸಿನೊ । ಳ್ಕಂಡುದರಿಂದ ನರೇಂದ್ರ ॥
ಹಿಂಡನಗಲಿಯುಗದೊಳು ಚರಿಸದೆ ತಂಡವಿಹುದು ಮುನಿಜನರ ॥ (48)

ಮುಸುಕಿದ ಮುಗಿಲಿಂದೆಸೆವ ಸೂರ್ಯನ ಕಂಡ । ದೆಸೆಯಿಂದ ಕಲಿಕಾಲದೊಳು ॥
ಅಸದೃಶ ಕೇವಲ ಬೋಧ ಮುನಿಗಳೊಳು । ಮಸುಳಿಸುವುದು ವಸುಧೇಶ ॥ (49)

ಫಲ ಪಲ್ಲವ ಪುಷ್ಪಕಳಿಕಾಂಕುರವಿಂದ ತೊಲಗಿದ ಮರವ ಕಂಡುದರಿಂ ॥
ಕಲಿಯುಗದೊಳು ನರನಾರಿ ಜನರು ಸತ್ಯ । ಕುಲಧರ್ಮವ ಮೀರುವರು ॥ (50)

ತಳಿರೆಲೆಗಳ ಬಿಟ್ಟು ತರಗೆಲೆಗಳನಡ । ಕುಲವೊಪ್ಪುದರ ಕಂಡುದರಿಂ ॥
ಕುಲಮಾರ್ಗವ ಬಿಟ್ಟು ನಾಲ್ಕು ವರ್ಣಂಗಳು । ಪಲವು ದುಶ್ಚರಿತವಾಂತಿಹವು ॥ (51)

ಮತ್ತಗಜವನೇರಿ ಕೋಡಗನಿರ್ದುದ । ಮತ್ತೆ ಕಂಡುದರಿಂದ ಮುಂದೆ ॥
ಉತ್ತಮ ಕುಲದರಸರು ಅಳಿವರು ಮುಂದೆವು । ನ್ಮತ್ತದೂಷಿತರರಸಹರು ॥ (52)

ಹೀನ ಕುಲರು ದುಶ್ಚರಿತರು ಸತ್ಪಾತ್ರ । ದಾನಧರ್ಮ ವಿವರ್ಜಿತರು ॥
ಈಕೆಲ ಕರಸುಗಳಪ್ಪರು ಷಟ್ಖಂಡ । ಭೂನಾಥ ಕಲಿಕಾಲದೊಳು ॥ (53)

ಕಾಗೆಯು ಹಿಂಡಿಂದ ಬಳಸಿ ಕೊಂಡಿರುತಿರ್ಪ । ಗೂಗೆಗಳನು ಕಂಡುದರಿಂ ॥
ಆಗಮವಿದರ ಸಾರದೆ ಕುಲಿಂಗಿಗಳನು । ಪೋಗಿ ಜನರು ಸೇವಿಪರು ॥ (54)

ಮರುಳು ತಂಡಗಳ ನೀ ನಿರುಳು ಕಂಡುದರಿಂದ । ಧರೆಯೊಳು ಗುರುಗಳ ಪೆಸರ ॥
ಕೆರೆವರು ಜಡಮತಿಗಳು ಮಕ್ಕಳಿಗೆ ವ್ಯಂ । ತರರನು ಕೊಂಡು ಕೊನೆವರು ॥ (55)

ನಡುಗೆರೆ ಬತ್ತಿ ಸುತ್ತಲು ನೀರಿರ್ದುದ । ಪೊಡವಿಪ ಕಂಡುದರಿಂದ ॥
ನಡುನಾಡೊಳು ಧರ್ಮ ನೆಲಸದೆ ಸುತ್ತಲು । ಕಡೆಯೊಳು ನಿಲ್ವುದೆಂದರಿಯ ॥ (56)

ಧೂಳಿಗಳಿಂದ ಧೂಸರವಾದ ನವರ । ತ್ನಾವಳಿಯನು ಕಂಡುದರಿಂ ॥
ಕಾಲ ಮಹಿಮೆಯಿಂದ ಬುದ್ಧಿಗಳಿಲ್ಲ ಭೂ । ಪಾಲಕರಿಗೆ ದೀಕ್ಷೆಯಿಲ್ಲ ॥ (57)

ಕೊರಳೊಳಗಿಕ್ಕಿದ ಮಾಲೆ ಚಂವಣವಪ್ಪ । ಪೆರಸಿ ರನ್ನದ ವಿಷ್ಟರದೊಳು ॥
ಸ್ಥಿರವಾಗಿ ಕುಳಿತಾಸಿರುವ ಜೋನಾಯನು । ಧರಣೀಶ ಕಂಡುದರಿಂದ ॥ (58)

ವ್ರತಹೀನರು ದುರ್ವಸನಿಗಳವರಿಯೊ । ಳತಿಕಷ್ಟರು ಸನ್ಮಾರ್ಗ ॥
ಪ್ರತಿಕೂಲವೆನಿಪ ಅತಿಥಿಗಳಿಗಾಹಾರವ । ಪ್ರತಿದಿನವಿತ್ತು ಮನ್ನಿಪರು ॥ (59)

ತರುಣ ವೃಷಭ ಕೆಲೆವುತ ತೊಳಲುತ್ತಿಹ । ಕನಸನು ಕಂಡುದರಿಂದ ॥
ತರುಣರು ಜಿನದೀಕ್ಷೆಗೆ ಮೈಗೊಡುವರು । ಪರಿಣತವಯರು ಮೈಗೊಡರು ॥ (60)

ಪರಿವೇಷಗೊಂಡ ಚಂದ್ರನ ಕಂಡುದರಿಂದ । ಧರೆಯೊಳು ಕಲಿಯುಗದಲ್ಲಿ ॥
ವರಮುನಿಗಳಿಗೆ ಅವಧಿ ಮನಃ ಪರ್ಯಾಯ । ದೊರೆಕೊಳ್ಳದಾವಿ ಚಕ್ರೇಶ ॥ (61)

ಪುದಿದಿರ್ದ ತರಗೆಲೆಗಳನು ಕಂಡುದರಿಂದ । ತುದಿಯೊಳು ಧಾನ್ಯ ಸಮೂಹ ॥
ಹದಗೆಟ್ಟು ನೀರಸವಹುದಾ ಜನರೆಲ್ಲ । ಅದನೆ ಭೋಗಿಪರು ನರೇಂದ್ರ ॥ (62)

ನೀನಗೀ ಸ್ವಪ್ನದ ಫಲಗಳು ತಪ್ಪವು । ಜಿನಧರ್ಮವೆ ರಕ್ಷಿಪುದು ॥
ಕನಸಿನ ಫಲಕೆ ಕೊಕ್ಕರಿಸದಿರಿವು ಬಲು । ದಿನಕಲ್ಲದೆ ಫಲಗೊಡವು ॥ (63)

ಎಂದು ಪೇಳಲು ವೃಷಭೇಶನ ಪಾದಾರ । ವಿಂದಕೆರಗಿ ಭರತೇಶ ॥
ಅಂದು ಪ್ರಸನ್ನ ಚಿತ್ತದಿ ಬೀಳ್ಕೊಂಡು ತಾ । ಬಂದನಯೋಧ್ಯಾ ಪುರಕೆ ॥ (64)

ಜಿನಪತಿಗಭಿಷೇಕ ಪೂಜೆ ಶಾಂತಿಕ ಮುಖ್ಯ । ಜಿನಕಲ್ಪ ವೃಕ್ಷ ಮಹಿಮೆಯು ॥
ಮುನಿಜನಕಾಹಾರ ದಾನವಮಾಡಿಸಿ । ದನು ಬಲ್ಲವರ ವಲ್ಲಭನು ॥ (65)

ಭೂರಿದಾನಂಗಳ ಕೊಟ್ಟನು ವಿನಯೋಪ । ಚಾರದಿಂದುಳಿದವರ್ಗೆಲ್ಲ ॥
ಧಾರಿಣೀಶ್ವರ ಕೊಟ್ಟ ವಿದ್ವಜ್ಜನಗಳ ಮ । ನೋರಥ ಪೂರೈಸುವಂತೆ ॥ (66)

ಕೈಲಾಸಗಿರಿ ಶಿಖರಗಳೊಳು ಜಿನ ಚೈ । ತ್ಯಾಲಯಗಳನು ಮಾಡಿಸಿದ ॥
ನೀಲಮಾಣಿಕ ವಜ್ರ ವೈಡೂರ್ಯಮಯದಶ । ತಾಲವ ಬಿಂಬಂಗಳನು ॥ (67)

ನಿರ್ಮಾಪಣೆಯನು ಮಾಡಿಸಿದನು ಜಿನ । ಧರ್ಮ ಪ್ರಭಾವನೆಗಳನು ॥
ಕೂರ್ಮೆಯಿಂದವನಲ್ಲಿ ಸ್ಥಾಪಿಸಿದನು ಪೂಜೆಯ । ನಿರ್ಮಲ ಮನದಿ ಧ್ಯಾನಿಸಿದ॥ (68)
ಇಂತು ಲೋಕದ ಜನರಿಗೆ ಸರ್ವವಿಘ್ನೋಪ । ಶಾಂತಿಯಾಗಲಿಯೆಂದು ಚಕ್ರಿ ॥
ಸಂತೋಷದಿಂದ ಮಾಡಿಸಿದನು ಧರ್ಮಕೆ ಪುಣ್ಯ । ವಂತರ ಭಾಗ್ಯವತ್ತು ॥ (69)

ವಂದನ ಮಾಲೆಗಳನು ಮಾಡಿಸಿದನು । ಬಂದು ಪೋಗುವ ಪೊರಮಡುವ ॥
ನಿಂದಿಪ್ಪ ತೋರಣ ಗೋಪುರ ಪುರದೊಳಗಾ । ನಂದದಿಂ ಭರತ ಚಕ್ರೇಶ ॥ (70)

ಇತ್ತ ವೃಷಭಜನ ವೃಷಭಸೇನಾದಿ ಯೆಂ । ಭತ್ತನಾಲ್ವರು ಗಣಧರರ ॥
ಮೊತ್ತದೊಡನೆ ಕೂಡಿ ಯಾಯುಷ್ಯದೊಳಗೆಂ । ಭತ್ತು ನಾಲ್ಕು ಲಕ್ಷ ಪೂರ್ವೆ ॥ (71)

ಸಂದದರೊಳು ಪದಿನಾಲ್ಕು ದಿವಸಗಳು । ಕುಂದಿದ ಕೈಲಾಸಗಿರಿಯ ॥
ಮುಂದಣ ಸಿದ್ಧಕೂಟದಿ ಪೂರ್ವ ಮುಖವಾಗಿ । ಸಂದ ಪಲ್ಯಂಕಾಸನದೊಳು ॥ (72)

ಆಗಲಾ ಪುಷ್ಯ ಮಾಸದ ಪೂರ್ಣಿಮೆಯೊಳು । ಯೋಗನಿರೋಧಕುಜ್ಜುಗವ ॥
ಯೋಗಿಗಳರಸ ಮಾಡಲು ಕನಸನು ಕಂಡ । ನಾಗಭರತ ಚಕ್ರೇಶ ॥ (73)

ಮಂದಾರ ಮಿಷತ್ಪ್ರಾಕಾರ ಪರ್ಯಂತರ । ಸಂದು ನೀಳ್ಪುದಕೆ ವಿಸ್ಮಯವ ॥
ಮಂದರ ಧೀರಮಾಡಿದ ನಾಗ ತಾನಿದ । ರಂದವೇನೆಂದು ಮನದೊಳು ॥ (74)

ಯುವರಾಜ ಮುಂತಾದವರೆಲ್ಲರೊಂದೊಂದು । ನವನವಸ್ವಪ್ನವ ಕಂಡು ॥
ಸುವಿವೇಕದಿಂದ ಪುರೋಹಿತರೊಳು ಪೇಳ । ಲವನಿಂತೆಂದು ಪೇಳಿದನು ॥ (75)

ನೀವೆಲ್ಲರು ಕಂಡ ಕನಸಿನ ಫಲದಿಂದ । ದೇವರ ಕೈವಲ್ಯ ಪದವಿ ॥
ಪಾವನ ಮುನಿಗಳೊಡನೆ ಪೋಪನೆಂದೆಂಬ । ಭಾವನ ಸೂಚಿಸುತಿದೆ ಕೊ ॥ (76)

ಎಂದು ಪೇಳುವಸಮಯದೊಳೈ ತಂದನು । ನಂದನನೆನಿಪ ವೇದಕನು ॥
ನಿಂದು ಕೈಮುಗಿದು ಪೇಳಿದನು ವೃಷಭಜಿನ । ನಂದವ ಚಕ್ರೇಶನೊಡನೆ ॥ (77)

ಆತನ ಮಾತನು ಕೇಳಿ ಚಕ್ರೇಶನು ವಿ । ನೀತ ಜನರನೊಡಗೂಡಿ ॥
ವೀತರಾಗನ ಬಳಿಗೆಯ್ತಂದು ಪೂಜಿಸಿದ । ನೊತಮಹಾಮಹದಿಂದ ॥ (78)

ಪದಿನಾಲ್ಕು ದಿವಸಪರ್ಯಂತರ ಸ್ವಾಮಿಯು । ಪದಪದ್ಮಗಳನು ಪೂಜಿಸುತ ॥
ಮೊದಲ ಸ್ವಸ್ಥಾನ ಕೇವಲಿಯೋಗಿಮಾಡಿದ । ವಿದಿತ ಪ್ರವೇಶನಿರ್ಜರೆಯು ॥ (79)

ದಂಡಕಾವಾಟ ಪ್ರತರ ಲೋಕಪೂರಣ । ಗೊಂಡು ಸಮುದ್ಘಾತ ವಿಧಿಯು ॥
ಖಂಡಿತ ಘಾತಿ ಚತುಷ್ಕಸ್ಥಿತ್ಯನುಭಾಗ । ಮಂಡನನಾದನಾ ಯೋಗಿ ॥ (80)

ಯೋಗ ಬಾಧರ ಸೂಕ್ಷ್ಮ ಕೃಷ್ಟಿಯ ಮಾಡಿ ಮು । ತ್ತಾಗನಿರುದ್ಧನಿಃಶೇಷ ॥
ಯೋಗಾಸ್ರವನಿರುದ್ಧ ಚರಮ ಗುಣಸ್ಥಾನ । ಯೋಗದೊಳಿದ್ದನಾ ಯೋಗಿ ॥ (81)

ಆಗುರುಪಂಚಾಕ್ಷರೋಚ್ಚರಣ ವೆಲ್ಲವನು । ಳ್ಳಗುಣದು ಪಾಂತ್ಯದೊಳಿರ್ದು ॥
ಸುಗುಣ ಸಮಯದೊಳು ದ್ವಾಸಪ್ತತಿ ಪ್ರಕೃ । ತಿಗಳನು ಕೆಡಿಸಿ ಮತ್ತುಳಿದ ॥ (82)

ಚರಮ ಸಮಯದೊಳು ಪದಿಮೂರು ಪ್ರಕೃತಿಯ । ಕೆಡಿಸಿದನಾಕ್ಷಣದೊಳಗೆ ॥
ಪರಮ ಮುಕ್ತಿಗೆ ಸಂದಡಿಯಿಟ್ಟನಂತರ । ವರಸಿದ್ಧ ಪರಮೇಷ್ಠಿಯಾವ ॥ (83)

ಪರಮಬ್ರಹ್ಮ ಕಲ್ಪಕೆ ಸಂದು ಸುಖಸಾ । ಗರಮಧ್ಯದೊಳಗಾದಿ ಬ್ರಹ್ಮ ॥
ನೆರೆದಷ್ಟಗುಣದೊಳು ಭವ್ಯ ಚಿಂತಾಮಣಿ । ಯಿರುತಿರ್ದ ಮೂಜಗದೊಡೆಯ ॥ (84)

ವರಮಾಘ ಮಾಸದ ಕೃಷ್ಣಚತುರ್ದಶಿ । ವೆರದಭಿಜನ್ಮ ಮುಹೂರ್ತದೊಳು ॥
ಪುರುಪರಮೇಶ್ವರ ಪರಮ ಮುಕ್ತಿ ವಧು । ವರನಾದ ಮಂಗಲ ಮಹಿಮ ॥ (85)

ತದನಂತರ ಬಾಹುಬಲಿಜಿನಪತಿ ಯಾ । ಪದದೊಳು ನಿಂದು ಧ್ಯಾನದೊಳು ॥
ಮೊದಲು ಪೇಳ್ದಂತೆಯು ಘಾತಿಕರ್ಮಂಗಳ । ಹವಗೆಡಿಸಿದ ನೇಸೆಂಬೆ ॥ (86)

ಎಪ್ಪತ್ತೆರಡು ಪ್ರಕೃತಿಗಳ ಕೆಡಿಸಿದ । ತಪ್ಪದಯೋಗಿ ತಾನಾಗಿ ॥
ಒಪ್ಪುವ ಚರಮ ಸಮಯದಿ ಕೆಡಿಸಿದ ಮುಂ । ದಿಪ್ಪ ಪನ್ನೆರಡು ಪ್ರಕೃತಿಯು ॥ (87)

ಇಂತಾ ಜನಶಕ್ತಿ ಯುಕ್ತಿಗಳಿಂ ಬಹಿ । ರಂತರಂಗದ ಶತ್ರುಗಳನು ॥
ಚಿಂತೆಯಿಲ್ಲದೆ ಗೆಲ್ದು ಸುಖದಿ ಪರಮ ಮುಕ್ತಿ । ಕಾಂತೆಗೆ ವರನಾದನಾಗ ॥ (88)

ಭರತಗೆ ಗುರುವಿಯೋಗದ ದುಃಖ ಶರಧಿಯ । ಭರತಪಂವದಿ ಕಣ್ಬನಿಗಳು ॥
ಸರಸಿಜ ದಳನೇತ್ರದೊಳಗುಕ್ಕುತಿರೆಗಣ । ಧರಮುನಿ ಮುಖ್ಯನಿಂತೆಂದ ॥ (89)

ದೃಷ್ಟಾಷ್ಟಕರ್ಮಗಳನು ಗೆಲ್ದು ಸಮ್ಯಕ್ತ್ವ । ದ್ಯಷ್ಟಗುಣಗಳನು ಪಡೆದು ॥
ಶಿಷ್ಟನಾದನು ನಿನ್ನಯ್ಯನು ನೀನಿದ । ಕಿಷ್ಟು ಪರಿಯಲಿ ಸೋಕಿಪರೆ ॥ (90)

ಮೊದಲು ಲೋಚನ ಗೋಚರವಾದ ನಿನ್ನಯ । ಹೃದಯದೊಳಗೆ ನಿಲಲೀಗ ॥
ಇದರಿಂದ ಬಿಟ್ಟು ಸಮೀಪವಾವುದು ನೀನು । ಹದುಳಸಿನೋಡು ಚಿತ್ತವನು ॥ (91)

ಚರಮಾಂಗರು ನಾವೆಲ್ಲರು ನಮಗಿನ್ನು । ಸ್ಥಿರವಲ್ಲವಿವು ನಾಲ್ಕುದಿನದ ॥
ಸಿರಿಯಲ್ಲದೆ ಮುಂದೆ ಪುರುಜಿನನೆಯ್ದಿದ । ಪರಮಪದವನೆಯ್ದುವೆವು ॥ (92)

ಎಂದು ಹಲವು ಪರಿಯಿಂದೊಡಂಬಡಿಸಿ ತಾ । ಹಿಂದಾದ ಭವಗಳನೆಲ್ಲ ॥
ಅಂದುಗಾಣಿಸಿ ಪೇಳೆ ಸಂಸಾರ ಭ್ರಮಣೆಗ । ಳಂದವ ಕೇಳದು ಚಕ್ರೇಶ ॥ (93)

ಇರಲಾಕ್ಷಣದೊಳು ದೇವನಿಕಾಯ ಬಂ । ಧುರ ಕೈಲಾಸಾದ್ರಿಗೆಯ್ತಂದು ॥
ಪರಿನಿರ್ವಾಣ ಕಲ್ಯಾಣ ವಿಧಿಯನಂದು । ವಿರಚಿಸಿದರು ಸಂಭ್ರಮದಿ ॥ (94)

ವರಗಾರ್ಹಪತ್ಯಾಹವನೀಯ: ಕುಂಡದೊ । ಳ್ಗುರುದೇಹದ ಪ್ರತಿಕೃತಿಯು ॥
ವಿರಚಿಸಿಯಗ್ನಿಕುಮಾರನ ಮಕುಟಾಗ್ನಿ । ಯುರಿಯಿಂದದಹಿಸಿ ಶ್ರೀಖಂಡ ॥ (95)

ದೇವ ಕುಸುಮ ಕುಂಕುಮ ಕರ್ಪೂರದಿಂ । ದಾವಿಭುಗಳ ನಿರ್ವಾಣ ॥
ಪಾವನಕ್ರಿಯೆಯನು ಮಾಡಿಯಾಭಸ್ಮವ । ದೇವರ್ಕಳೆಲ್ಲರು ತಮ್ಮ ॥ (96)

ಫಣಿಕಂಠ ಭುಜಯುಗ ಹೃದಯ ಪ್ರದೇಶದೊ । ಳಣಿಕೆಯ ಪಂಚಪದಗಳ ॥
ಗುಣಮಣಿಗಳು ಧರಿಸಿದರು ಗುಣವತಿ । ಫಣಿಯೊಳೋಲಾಡಿ ತಣಿಯದೆ ॥ (97)

ಪುರುಜಿನ ಪತಿ ಬಾಹುಬಲಿಜಿನ ಮುಂತಾದ । ವರಿಗೆ ನಿರ್ವಾಣ ಕ್ರಿಯೆಯನು ॥
ಪರಿನಿರ್ವರ್ತಿಸಿ ಸುರರೆಲ್ಲ ತಂತಮ್ಮ ಪುರಕೆಯ್ದಿದರು ಸಂಭ್ರಮದಿ ॥ (98)

ಇಂತೆಂದು ಬಾಹುಬಲೀಶನ ಪೂರ್ವ ವೃ । ತ್ತಾಂತವೆಲ್ಲವ ಮುನಿರಾಯ ॥
ಸಂತೋಷದಿಂ ಪೇಳೆ ಕೇಳ್ದಿರಗಿದನು ಭೂ । ಕಾಂತ ಶ್ರೀ ಪಾಂಡ್ಯ ರಾಜೇಂದ್ರ ॥ (99)

ಇಂದೆಮ್ಮ ಜನ್ಮಸಫಲವಾದುದು ಸ್ವಾಮಿ । ಯೆಂದು ಬಿಳ್ಕೊಂಡು ಸಂಭ್ರಮದಿ ॥
ಬಂದು ಮಂದಿರವನು ಪೊಕ್ಕು ಸುಖದೊಳಿರ್ದ । ಮಂದರಧೀರ ಪಾಂಡ್ಯೇಂದ್ರ ॥ (100)

ಇದು ಶ್ರುತಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯ । ಪದದೆಳ್ಪದಿನೈದನೆಯಸುಸಂಧಿ ॥ (101)

(ಹದಿನೈದನೆಯ ಸಂಧಿ ಸಮಾಪ್ತಂ)

## ಹದಿನಾರನೆಯ ಸಂಧಿ.

ಲೋಕಾಲೋಕವ ಬೆಳಗುವ ಬೋಧದಿ । ವಾಕರ ಗುರುಂಬರ ಸಾರ ॥
ಶ್ರೀಕಾರಕಳದ ಗುಮ್ಮಟಜಿನ ಸಲಹೆಮ್ಮ । ನೇಕಸಂಪದ ಸುಖವಿತ್ತು ॥ (1)

ಆತನನ್ವಯದೊಳನೇಕ ಭೂಪಾಲರು । ನೀತಿನಿಪುಣರು ಪುಟ್ಟಿದರು ।
ಭೂತಳದೊಳು ಧರ್ಮ ಕೀರ್ತಿಯ ಪಡೆದು ವಿ । ಖ್ಯಾತರಾದರು ಜಗದೊಳಗೆ ॥ (2)

ಅಲ್ಲಿಂದ ಬಳಿಕಾದೊರೆಗಳ ಕುಲದೀಪ । ಫುಲ್ಲಶರನ ಸಮರೂಪ ॥
ಎಲ್ಲದೊರೆಗಳಗಧಿಕ ಪ್ರತಾಪ ಭೂ । ವಲ್ಲಭ ನೀತಿ ಕಲಾಪ ॥ (3)

ಶ್ರೀ ವೀರ ನರಸಿಂಹ ಭಂಗರಾಜೇಂದ್ರನ । ಪಾವನ ಗರ್ಭಾಬ್ಧಿ ಚಂದ್ರ ॥
ಭೂವಳಯ ದೊಳುಳ್ಳ ಭೋಗದೇವೇಂದ್ರ ವಿ । ಭಾವವಪೇರಿ ಮೃಗೇಂದ್ರ ॥ (4)

ಕಮ್ಮಗಣ್ಣೆಯ ನರಸಿಯ ಪೋಲ್ವರೂಪಿನ । ಗುಮ್ಮಟಾಂಬಿಕೆಯ ಗರ್ಭದೊಳು ॥
ಇಮ್ಮಡಿ ಭೈರವಗಾಯ ಪುಟ್ಟಿದರವ । ಹಮ್ಮಿನ ದೊರೆಗಳಗಂಡ ॥ (5)

ಆತನ ಪಟ್ಟದರಸಿ ಭುವನದೊಳು ವಿ । ಖ್ಯಾತೆ ಯೆಂಕಲಿಯುಗದೊಳಗೆ ॥
ಸೀತೆಯೆನಿಸಿ ಮಲ್ಲಿದೇವಿಯಮ್ಮನು ಜಗ । ನ್ಮಾತೆ ಯೊಪ್ಪಿದಳು ಧರೆಯೊಳು ॥ (6)

ಅವರೀರ್ವರ ಗರ್ಭದೊಳುದಯಿಸಿದನು । ಭುವನೈಕ ವೀರ ಪಾಂಡ್ಯೇಂದ್ರ ॥
ಅವನಿಗೆ ಸರಿಯಾದ ದೊರೆಗಳನ್ನಾರು ನೋ । ಡಲಿ ಭುವನದೊಳನ್ನಿಲ್ಲ ॥ (7)

ಅಂಗಜ ರೂಪನವನ ಕಂಡು ಮರೆಗೊಂಡ । ನಂಗವೆಸರ ಪಡೆದವನು ॥
ಅಂಗನೆಯರು ಪೋಲ್ವುದರಿದೆಯವನ ರೂಪಿ ನಂಗ ಶೃಂಗಾರವ ಕಂಡು ॥ (8)

ಪರನಾರಿಯರಿಗೆ ಸಹೋದರನೆಂದೆಂಬ ಬಿರುದನು ಪ್ರತಿಪಾಲಿಸುವನು ॥
ಸರಸ ಸಂಗೀತ ಸಾಹಿತ್ಯ ಕಲಾಧರ । ಧುರಧೀರ ಶರಧಿ ಗಂಭೀರ ॥ (9)

ಸಾಮದಿಂದಲಿ ತನ್ನ ಸಕಲ ಸಾಮ್ರಾಜ್ಯವ । ನಾಮಹೀಪತಿಯಾಳ್ದು ತಿರಲು ॥
ಭೂಮಿ ಪಾಲಕರೆಲ್ಲ ಕಪ್ಪವಕೊಡುವರಿ । ನ್ನಾಮಹಿಮಾನಿಗೆಣೆಯುಂಟೆ ॥ (10)

ಅವನನುಜಾತನು ಚಂದ್ರಶೇಖರನೆಂಬ । ಸುಕವೀಶ ಪುಟ್ಟಿದ ಬಳಿಕ ॥
ಅವನ ವಿನಯ ಪವಿತ್ರ ರತ್ನಗುಣ ಮುಂತಾ । ದವನು ಬಣ್ಣಿಸಲಳವಲ್ಲ ॥ (11)

ಆಜಾನುಬಾಹು ಪಂಥದೊಳು ಗರ್ವಿಪರಿಪು । ರಾಜಮಂಡಲಿಕವರಾರು ॥
ಶ್ರೀಜಿನ ಪದಭಕ್ತ ವಿಬುಧ ಸತ್ಕವಿಕಲ್ಪ । ಭೂಜಪೇಳ್ಗಳಿಗೆ ಮನೋಜ ॥ (12)

ಕವಿಗಮಕಿಗಳು ವಾದಿಗಳು ವಾಗ್ಮಿಗಳಿಂ ಬೀ । ವರಗೋಷ್ಠಿಯೊಳನುದಿನವು ॥
ಅವನಿದ್ದು ರಾಜ್ಯವ ಪ್ರತಿಪಾಲಿಸುವನಿ । ನ್ನವನವಿವೇಕಕೆ ಸರಿಯೆ ॥ (13)

ಅವನನುಜ ನಿಮ್ಮಡಿ ಭೈರವರಾಯ । ನೂತನ ಮನಸಿಜ ಕಾಯ ॥
ನೀತಿನಿಪುಣನು ಸಮರ ಗಾಂಗೇಯ ವಿ । ಖ್ಯಾತನೀಧರೆಯೊಳೊಪ್ಪಿದನು ॥ (14)

ದೊರೆಗಳ ದೇವ ಶರಣು ಪೊಕ್ಕವರ ಕಾವ । ಧುರದೊಳು ರಘುವರದಾವ ॥
ಸರಸವಿಬುಧಜನ ಸಂಜೀವಕರದೇವ । ಸುರಭೂಜಬಂಧುರ ಭಾವ ॥ (15)

ಅರಿರಾಯರಗಂಡ ಘಾವಣಿಯೆಂದೆಂಬ । ಬಿರಿದಾಳ್ವ ಸಮರ ನಿಶ್ಶಂಕ ॥
ತರುಣಿಯರಿಗೆ ಮಕರಾಂಕಮನೋಹರ । ಚರಿತ್ರ ಚತ್ತುದಿ ನಿಷ್ಕಳಂಕ ॥ (16)

ಸಂಗೀತ ಸಾಹಿತ್ಯ ಭರತ ನಾಟಕ ಕಾವ್ಯ । ಶೃಂಗಾರ ನೀತಿ ಶಾಸ್ತ್ರಗಳ ॥
ಸಂಗ್ರಹ ಧರ್ಮಾರ್ಥ ಕಾಮ ಶಾಸ್ತ್ರಂಗಳಂತ । ರಂಗವನರಿಬಲ್ಲ ಜಾಣ ॥ (17)

ಮನದಿಂಗಿತವಬಲ್ಲ ಮಾನಿನಿಯರಿಗೆಲ್ಲ । ತನುವಾಂತ ಪೊಸಕಬ್ಬುವಿಲ್ಲ ॥
ಜಿನನೊಬ್ಬಬಲ್ಲ ನಿನ್ನಳದ ಗುಣವನೆಲ್ಲ । ನನಗೆ ಪೇಳುವರಳವಲ್ಲ ॥ (18)

ಕೊಟ್ಟಭಾಷೆಗೆ ತಪ್ಪುವರಗಂಡ ರಣಕೆ ಹಿ । ಮ್ಮೆಟ್ಟುವ ದೊರೆಗಳ ಗಂಡ ॥
ಪಟ್ಟ ಪೊಂಬುಚಪುರವರಾಧೀಶ್ವರ ಪಟ್ಟದದೊರೆ ಭೈರವೇಂದ್ರ ॥ (19)

ಶ್ರೀ ವೀತರಾಗಗಲ್ಲದೆ ಮಿಕ್ಕದೇವರ್ಗೆ । ಎರಗುವ ಭಾವದೊಳಿಲ್ಲ ॥
ಆವಕಲೆಯೊಳು ನೋಡಿದರವಗಿದಿರಿಲ್ಲ । ಕೋವಿದರಣರಂಗ ಮಲ್ಲ ॥ (20)

ಆತನದನಕೆ ಭೈರವರಾಯನಿಗೆ ಪುಣ್ಯ । ಖ್ಯಾತಿಗಳಾಗಲೆಂದೆನುತ ॥
ನೂತನ ಜನ್ಮಾಭಿಷೇಕವ ಗುಮ್ಮಟ । ನಾಥಗೆಯವನು ಮಾಡಿಸಿದ ॥ (21)

ಕ್ಷೀರಸಮುದ್ರದ ಜಲದಂತೆ ತೆರೆಸುಳಿ । ದೋರುವ ಕ್ಷೀರಧಾರೆಯನು ॥
ಧೀರಗುಮ್ಮಟ ಜಿನಪತಿಗೆ ಮಾಡಿಸಿದನು । ಭೂರಿವೈಭವದೊಡಗೂಡಿ ॥ (22)

ಹಿಡಿಹೊನ್ನು ಪಟ್ಟೆಯ ಹಚ್ಚಡ ದಂಡಿಗೆ ಸ । ಮರ್ಪಣೆಯನುಮಾಡಿ ಬಳಿಕ ॥
ಪೊಡವಟ್ಟನುಗುರು ಜನಕೆಲ್ಲ ಮೂಲೋಕ ದೊಡೆಯನ ಜನ್ಮೋತ್ಸವದೊಳು ॥ (23)

ಕಲಿಯುಗ ಗಣಧರ ಕಲ್ಪಸನ್ಮುನಿಕುಲ । ತಿಲಕ ಮಹೇಂದ್ರಕೀರ್ತಿಯನು ॥
ನಿಲಿಸಿ ಕೊಂಡವರಿಂಪ ಬುಧಜನರಿಗೆ ಕಾರ । ಕಳದೊಳನ್ನಿಲ್ಲವೆಂದೆನಲು ॥ (24)

ಅಬ್ಧಿಸವಣನ ಗಂಭೀರವೆನಿಪ ಪುಣ್ಯ । ಲಬ್ಧಿಸಾರವ ಹೇಳಿಸಿದನು ॥
ಲುಬ್ಧನೃಪರಗಂಡ ಭೈರವರಾಯಗೆ । ಲುಬ್ಧ ಭೂಭುಜರೆಣ್ಣೆಯುಕರೆ ॥ (25)

ಕಲಿಕಾಲದೋಷದಿಂದಾ ಗೋಮಟೇಶಗೆ । ಕೆಲವು ದಿವಸ ಪರಿಯಂತ ॥
ಕೇವಾಗಿ ಪೂಜೆಯಂತರಿಸಲಾ ಭೂಪನ । ಕುಲಗುರು ಲಲಿತಕೀರ್ತ್ಯಾರ್ಯರ್ ॥ (26)

ಗುರುಕುಲಾಂಬರಸೂರ್ಯರ್ ಸುರಗಿರಿ ಸಮಧೈರ್ಯರ್ । ನಿರುಪಮಗುಣಗಾಂಭೀರ್ಯರ್ ॥
ನಿರುತನು ಕಂಡಾಲಲಿತ ಕೀರ್ತ್ಯಾಚಾರ್ಯರ್ । ಸ್ಮರಿಸಿದ ಪರಹಿತ ಕಾರ್ಯರ್ (27)

ಆಗಲಾ ಗುಮ್ಮಟ ಜಿನಗೆ ಪ್ರತಿಷ್ಠೆಯ । ನಾಗು ಮಾಡಿಸಬೇಕೆಂದು ॥
ಆ ಗುರುವಿನ ಕೂಡೆ ಆಲೋಚನೆಯ ಮಾಡ । ಲಾಗುರುವಪನೊಳೆಂತೆಂದ ॥ (28)

ಎಲೆ ಭೈರವರಾಯ ಭವ್ಯ ಜನಂಗಳ । ಗೊಲಿದು ಪುಣ್ಯವ ಮಾಡಿಕೊಟ್ಟು ॥
ಸಲಹಬೇಕೀ ಪ್ರತಿಷ್ಠೆಗೆ ಅಪ್ಪಣೆಯ ಕೊಟ್ಟು । ಸಲಿಸಬೇಕೆನ್ನ ಭೀಷ್ಟವನು ॥ (29)

ಹಿರಿಯರು ಮಾಡಿದ ಬಿಂಬಪ್ರತಿಷ್ಠೆಯ । ಪರರಿಗೆ ಕೊಡುವದೆಂತೆನಲು ॥
ಪರರಾರು ಧಾರ್ಮಿಕ ಬಂಧು ನೀನಲ್ಲವೆ । ನಿರುಪಮ ಗುಣಗಣ ನಿಲಯ ॥ (30)

ಗುರುಮಾಡಿದ ಧರ್ಮ ಶಿಷ್ಯರಿಗಲ್ಲವೆ । ಯೆರವೇಕೆನಮ್ಮೊಳಗೆನಲು ॥
ಗುರುವಚನವನುಲ್ಲಂಘಿಸಬಾರದೆಂ । ದರಸ ಚಿಂತಿಸಿ ಮನದೊಳಗೆ ॥ (31)

ಆರು ಧರ್ಮವಮಾಡಿದರು ಕಾರಕಳದೊಳು । ಭೈರವೇಂದ್ರಗೆ ಪುಣ್ಯವೃದ್ಧಿ ॥
ಕಾರಣಕೆಂದು ಮುಂಪೇಳ್ವರೈಸೆಯೆಂದು । ಧಾರಿಣಿಪತಿ ಚಿಂತಿಸಿದನು ॥ (32)

ಒಂದು ಪೇಳ್ವದಿ ಭವ್ಯ ಜನರಿಗೆ ಮೋಕ್ಷಾರ್ಥ । ಕೆಂದವಕಾಶವ ಕೊಡಲು ॥
ಕುಂದಹುದೆಯೆಂದು ಧರ್ಮಕೆನುತ ಬಳ್ಕೆ । ಯಿಂದಪ್ಪಣೆಯಕೊಟ್ಟನಾಗ ॥ (33)

ದೇವರ ವಚನವ ಮೀರುವದದುನನು । ಗಾವವಿವೇಕವೆಂದೆನುತ ॥
ದೇವರ ಚಿತ್ತಕ್ಕೆ ಬಂದಂತೆ ಮಾಳ್ಪುದೆಂ । ದಾವಿಭು ಬಿನ್ನವಿಸಿದನು ॥ (34)

ಪರಗೊಟ್ಟದಗ್ನಿಯು ಕಾಸಿದರದು ತಾ । ಪರಿಹರಿಸದೆ ಶೀತವನು ॥
ಗುರುನೀಪೇಳ್ದಂತೆ ಮಾಡಲೆನಗೆ ಪುಣ್ಯ । ದೊರೆಯದಿಹುದೆ ಯೆಂದನಾಗ ॥ (35)

ಕೃತ ಕಾರಿತಾನು ಮೋದಗಳೆಂದು ಮೂರುಂಟು । ಕ್ಷಿತಿಯೊಳು ಪುಣ್ಯಕಾರಣವು ॥
ಯತ್ರಿರಾಯ ಪೇಳ್ದಂತೆ ಕಾರಿತದಿಂ ಪುಣ್ಯ । ಮತಿಯಿಂದೊರೆಯದೆ ಪುಣ್ಯ ॥ (36)

ಅಂದೈನೂರು ಪೊನ್ನನು ಗುರುವಿನ ಕೈಯ್ಯ । ತಂದು ಕೊಟ್ಟನು ದೊರೆರಾಯ ॥
ಮುಂದೆ ಬೇಕಾದ ಸಹಾಯವ ಮಾಳ್ಪೆ ತಾ । ನೆಂದೊಡಂಬಟ್ಟೆರಗಿದನು ॥ (37)

ಆರಿಗಾದರು ತ್ಯಾಗ ಮಾಳ್ಪದೇವನೆಂದು । ಮೇರುನೂರವನೆಯಿದ್ದತೆನಲು ॥
ಕಾರಕಳದ ಭೈರವರಾಯನದೊಂದು । ದಾರತ್ವೆಯನು ಪೇಳಲಳವೆ ॥ (38)

ಹಲರೈದು ಸಾವಿರ ಹೊಂದಿ ಬಂದಾಯತಿ । ಕುಲತಿಲಕನನಿದಿರ್ಗೊಂಡು ॥
ಬಲುದೊಡ್ಡ ಕಾರ್ಯವನೆಸಗಿದರೆಂದು ತಾ । ಪೊಲಿದೆರಗಿದರಡಿದಳಕೆ ॥ (39)

ದೇವರದಯೆಯಿಂ ನಾಲ್ಕು ಸಂಘವನೆಲ್ಲ । ನಾವ್ರತಡೆದು ದಾನದಿಂದ ॥
ಪಾವನವಪ್ಪೆವೆಂದರು ಮೂಲಕಾರಣ । ಶ್ರಾವಕರಲ್ತೆ ಧರ್ಮಕ್ಕೆ ॥ (40)

ಕೋಲ ಬಳಿಯು ಭವ್ಯ ಜನರೈದು ಸಾವಿರ । ಲೀಲೆಯೊಳೈತಂದರಾಗ ॥
ಓಲಗವನು ಮಾಳ್ಪೆವು ಸ್ವಾಮಿ ನೀ ಪೇ । ಳ್ದೊಳಗದವರಂತೆ ನಾವು ॥ (41)

ಸಂಬಳವಿಲ್ಲದೆ ಊಳಗದವರೆಂ । ತೆಂಬಿರಿ ಮಾತದೆಂತೆನಲು ।
ಸಂಬಳವಲ್ಲವೆ ಮುಕ್ತಿಗೀ ಕಾರ್ಯ ವಿಂ । ತೆಂಬರೆ ಸ್ವಾಮಿ ನಮ್ಮೊಡನೆ ॥ (42)

ಕೈ ಸಹಾಯವ ಮಾಳ್ಪೆವು ನಾವೆಲ್ಲರು । ಮೈಸಹಾಯವನು ಮಾಡುವೆವು ॥
ಕೈ ಮೈ ಸಹಾಯವ ಧರ್ಮದೊಳಗೆ ಮಾಡಿಂ । ಮೈಸಿರಿವಂತರಹೆವು ॥ (43)

ಅವರೆಲ್ಲರನುಮತಿಯಿಂದಾ ಮುನಿಪತಿ । ಸುವಿವೇಕದಿಂ ಮಾಡಲೆಂದು ॥
ಹವಣಿಸಿದನು ಕಾರಕಳದೊಳು ಧರ್ಮವ । ನವನಿಯೊಳಂತಿಲ್ಲವೆನಲು ॥ (44)

ಅರುವತ್ತು ದಾನ ಸಾಲೆಯು ಕಟ್ಟಿಸಿದ ಪಾಂಡ್ಯ । ಪುರದೊಳೊಕ್ಕಲ ನಿಟ್ಟನಾಗ ॥
ನೆರೆದ ಜನರ ಪಡಿ ಪಾನಕಂದೆನುತ ಪ । ನ್ನೆರಡುಗ್ರಾಣವ ಮಾಡಿಸಿದ ॥ (45)

ನೇಮಿ ಜಿನೇಶನ ಚೈತ್ಯ ಗೃಹಕೆ ಪೋಗಿ । ನೇಮದಿಂದಭಿಷೇಕ ವಿಧಿಯು ॥
ಸ್ವಾಮಿಗೆ ಪೂಜೆಯು ಮಾಡಿಸಿ ನುತಿಸಿದ । ಪ್ರೇಮ ಭಕ್ತಿಯೊಳೊಡಗೂಡಿ ॥ (46)

ಲೋಕಕೆಲ್ಲಕೆ ಶಾಂತಿಯಾಗಲೆಂದೆನುತ ನಿ । ರಾಕುಲ ಭಾನುತೊಡಗಿದ ॥
ಕಾರ್ಯಕೆ ನಿರ್ವಿಘ್ನವ ಮಾಡು ಕೃ । ಪಾಕರ ಜಗದೇಕ ಬಂಧು ॥ (47)

ಆವುದು ಗಹನ ನಿಮ್ಮಯ ಪದಗಳ ನಂಬಿ । ಭಾವಿಪ ಭವ್ಯ ಜನರಿಗೆ ॥
ಕೈವಲ್ಯ ಸುಖವಪ್ಪುದುಳಿದ ಕಾರ್ಯಗಳೊಳು । ದೇವ ನಿನ್ನಯ ಕೃಪೆಯಿಂದ ॥ (48)

ಶತ್ರುಗಳೆಲ್ಲರು ತಮ್ಮ ಕೋಪವ ಬಿಟ್ಟು । ಮಿತ್ರರಪ್ಪರು ಜಗಧೀಶ ॥
ಸ್ತೋತ್ರವ ಮಾಡಲು ನಿನ್ನ ಪಾದಂಗಳ । ನೇತ್ರಾನಂದೈಕ ರೂಪ ॥ (49)

ಎನ್ನಭಿಮತವನು ಸಲಿಸಿ ಕೊಡುವ ಭಾರ । ನಿನ್ನದು ಲೋಕೈಕ ನಾಥ ॥
ಮನ್ನಿಸಬೇಕು ಬಾಲಕ ನಾನು ಮಾಡುವ । ಬಿನ್ನಹವನು ಭವದೂರ ॥ (50)

ತ್ರಿಭುವನ ಗುರುವೆ ನೀನೇ ಗುರು ನಮಗೆಂದು । ಸಭೆಯೆಲ್ಲ ಮೆಚ್ಚುವಂದದೊಳು ॥
ಉಭಯ ಲೋಕಕೆ ಹಿತವಪ್ಪ ಪ್ರತಿಜ್ಞೆಯ । ಶುಭಮುಹೂರ್ತದೊಳು ಮಾಡಿದನು ॥ (51)

ಚಾಮರ ಸತ್ತಿಗೆ ಪಲ್ಲಕ್ಕಿ ಮುಂತಾದ । ರಾಮಣೀಯಕ ಚಿಹ್ನಗಳ ॥
ನೇಮಿಸಿ ಬಿಟ್ಟನು ಯತಿರಾಯ ಗುಮ್ಮಟ । ಸ್ವಾಮಿಯ ಪೂಜೆಯಪ್ಪನಕ ॥ (52)

ಭಕ್ಷ ಪಾಯಸದೊಳಗಿನಿ ತಿನಿತೆಂದು ವಿ । ಚಕ್ಷಣ ನಿಯಮಿಸಿ ಬಿಟ್ಟ ॥
ಆ ಕ್ಷಣದೊಳ್ ದೇವರ ದೇವ ನೀನೇ । ಸಾಕ್ಷಿಯೆಂದಾ ಮುನಿರಾಯ ॥ (53)

ಇಂತು ಪ್ರತಿಜ್ಞೆಯ ಮಾಡಲಾ ಮುನಿಪತಿ । ಯಂತರಂಗದ ಶುದ್ಧಿಯಿಂದ ॥
ಅಂತರಿಸದೆ ಶ್ರಾವಕ ಶ್ರಾವಕಿಯರು । ತಂತಮ್ಮ ಭಕ್ತಿಯಿಂದೆರಗಿ ॥ (54)

ವ್ರತಗಳ ಮಾಡಿಕೊಂಡರು ಭೂಷಣ ವಸ್ತ್ರ । ಪ್ರತಿದಿನ ಉಂಬವಸ್ತುಗಳ ॥
ಮಿತವನು ಮಾಡಿ ತಾವಿನಿತಿನಿತೆಂದಾ । ಯತಿ ಸನ್ನಿಧಿಯೊಳಗವರು ॥ (55)

ಅಲ್ಲಿಂದ ಬಂದು ಬೆಟ್ಟದ ಬ್ರಹ್ಮರಾಯಗೆ । ಸಲ್ಲೀಲೆಯಿಂದ ಪ್ರಾರ್ಥನೆಯ ॥
ಸೊಲ್ಲಿಸಿ ನುಡಿದಿಂತೆಂದ ನೀ ಕಾರ್ಯ । ಕೆಲ್ಲ ನೀ ಸಹಾಯವಾಗು ॥ (56)

ಕ್ಷೀರಸಾಗರ ಸನ್ನಿಧಿಯೊಳಗಿರ್ದವನಿಗೆ । ನೀರ ಬರವೆ ನಿನ್ನ ಕರುಣ ॥
ಆರಿಗುಂಟವನಿಗೆ ನೆನೆದ ಕಾರ್ಯಗಳು ಕೈ ಸೇರುವದೊಂದಚ್ಚರಿಯೆ ॥ (57)

ಮುನ್ನೇಸರು ಮೂಡೆ ಕತ್ತಲೆಗಳಹುಂಡು । ಭಿನ್ನವಪ್ಪಂತೆ ಲೋಕದೊಳು ॥
ನಿನ್ನ ಕರುಣವಿರೆ ವಿಘ್ನ ಸಮೂಹ । ಕ್ಕಿನ್ನವಕಾಶಗಳುಂಟೆ ॥ (58)

ಎಂದು ನುತಿಸಿ ನಾನಾತೆರದಿಂದಲ್ಲಿ । ನಿಂದು ಪೊಂಬುಚದಂಬಿಕೆಗೆ ॥
ಅಂದು ಪ್ರಾರ್ಥನೆಗಳ ಮಾಡಿಕೊಂಡನು ಮುನಿ । ವೃಂದಾರಕರ ಮುದದಿಂದ ॥ (59)

ಇಂತು ಪ್ರತಿಜ್ಞೆಯ ಮಾಡಿಯುಟ್ಟಲಿಗೆ । ಮುಂತಾದವಕೆ ಮರಗಳನು ॥
ತಾಂತಡೆಯದೆ ಮುಹೂರ್ತವನು ಮಾಡಿಸಿದನು । ಕಂತು ವಿಜಯ ಮುನಿರಾಯ ॥ (60)

ಅಲ್ಲಿಂ ದಿಗ್ಗಾವುದ ದೂರವುಂಟೆಂ । ಬಲ್ಲಿಂದ ರುಜುವೃತ್ತವಾದ ॥
ಬಲ್ಲಿತ್ತಾದಾ ಮರಗಳ ತರಿಸಿದನು । ಸಲ್ಲೀಲೆಯಿಂ ಮುನಿರಾಯ ॥ (61)

ಐದು ಸಾವಿರ ಕೋಲಬಳ್ಳಯವರೆಲ್ಲರು । ಯೆಯ್ದಿಯಾ ಮರಗಳನೆಳೆದು ॥
ಐದಾರು ಮರಗಳ ನೊಂದೊಂದು ದಿನಕೆ ತಾ । ವೆಯ್ದಿಸುವರು ಮುದದಿಂದ ॥ (62)

ಅಂತಿದ್ದಾಮರಗಳ ನೆಳೆವಾಗ ತಾ । ಸಂತೈಸುವರೆಲ್ಲರನು ॥
ತಾಂತರಿಸಿದ ಪಾನಕ ವೀಳ್ಯ ಫಲಗಳು । ಮುಂತಾದ ಪರಿಕರಗಳನು ॥ (63)

ಕುಡಿಮಜ್ಜಿಗೆ ಸಕ್ಕರೆಯ ಪಾನಕಗಳ । ಕೊಡ ಕೊಡದೊಳು ತುಂಬಿ ತರಿಸಿ ॥
ಕೊಡಿಸಿದನವರಿಗೆ ಸಂತೋಷವಪ್ಪಂತೆ । ಎಡೆವಾಯದೆಯನುದಿನವು ॥ (64)

ಬೆಲ್ಲ ಬಾಳೆಯಹಣ್ಣು ಕಬ್ಬು ಕಡಲೆ ಕಾಯಿ । ಮಲ್ಲಿಗೆ ಜಾಜಿ ಮುಂತಾದ ॥
ಪುಲ್ಲ ಸರಗಳ ತರಿಸಿ ಕೊಡಿಸುವ ನವ । ಯೆಲ್ಲರ್ಗೆ ಮೈಯುಬ್ಬುವಂತೆ ॥ (65)

ಎರಡು ತಿಂಗಳು ಪರಿಯಂತವೀರೀತಿ ಯೊ । ಳ್ಮರ ಮೋಪುಗಳ ತರಿಸಿದನು ॥
ದೊರೆಗಳಗಲ್ಲದೆ ಯತಿಗಳಗೀ ಯತ್ನ । ದೊರೆಯದೆಂದೆಲ್ಲ ಕೊಂಡಾಡೆ ॥ (66)

ಹತ್ತು ಸಾವಿರ ಕುಂಭಗಳನು ಮಾಡಿಸಿದನು । ಮತ್ತೆ ಕೆಲವು ಭಾಜನಗಳ ॥
ಉತ್ತಮವಾದಂಕುರ ಭಾಜನಗಳ । ಚಿತ್ರಜವೈರಿ ಮಾಡಿಸಿದ ॥ (67)

ಧರ್ಮಚಕ್ರವು ಪದ್ಮಯಾನ ಷೋಡಶಸ್ವಪ್ನ । ನಿರ್ಮಯ ಸಂತತಿಗಳನು ॥
ಕೂರ್ಮೆಯಿಂ ಬರಸಿದ ಸಮವಸರಣವನು । ಕರ್ಮಕ್ಷಯಾರ್ಥವ ಮುನಿಪ ॥ (68)

ಧ್ವಜಪಟ ದಿಕ್ಕನ್ನಿಕೆ ದಿಕ್ಪಾಲರ । ನಿಜನಿಜ ಲಕ್ಷಣಗಳನು ॥
ಗಜಗರುಡಾದಿ [ವಾಹನ ವೇರಿಬಂದರು] । ಭುಜಬಲಿ ಜಿನನುತ್ಸವಕೆ ॥ (69)

ಮಂಡಪಗಳ ಮುಂಚಿ ಮಾಡಿಸಿಯದರೊಳು । ಕುಂಡವೇದಿಕೆಯನೆತ್ತಿಸಿದ ॥
ಕಂಡ ಕೈಕರಣವ ಬಲ್ಲ ಆಚಾರ್ಯರ । ತಂಡದಿಂಗಾ ಮುನಿರಾಯ ॥ (70)

ಬಡಗಿ ಕಮ್ಮಾರರ ಮೋಪ ತರಿಸಿದನು । ಜಡಿಸಿದ ಕದನಿ ಬಾಣಗಳ ॥
ಕಡಿಸಿ ಧ್ವಜಸ್ತಂಭವ ತರಿಸಿದ ಮು । ಪ್ಪೊಡೆಯನ ಉತ್ಸವಕೆಂದು ॥ (71)

ಸಾವದ್ಯವಲ್ಪವಾದರು ಪುಣ್ಯ ಬಹಳ ವೆಂ । ದಾವಿಬುಧರು ಪೇಳ್ವರದನೆ ॥
ಭಾವಿಸಿ ಧರ್ಮಾನುರಾಗದಿಂದಾ ಮುನಿ । ಯೀ ವಿಧಗಳನು ಮಾಡಿಸಿದ ॥ (72)

ಬಿದುರೆಗು ಕಾರಕಳಕಾ ಭೇದವಿಲ್ಲೆಂ । ದುದರೈದು ಸಾವಿರ ಹಲರು ॥
ಇದಿರ್ಗೊಂಡು ಇನ್ನೂರು ಹೊನ್ನ ಗೋಷ್ಠಿಯ ಮಾಡಿ । ಮುದದಿಂದಿತ್ತ ರಾ ಮುನಿಗೆ ॥ (73)

ಬಿದುರೆಗೆ ಹೊಂದಿದ ಮೂವತ್ತೆರಡು ನಗ । ರದ ಹಲರೆಲ್ಲರಾರತಿಯು ॥
ಮುದದಿಂದಿದಿರ್ಗೊಂಡು ವಿನಯ ಸನ್ಮಾನದಿಂ । ದೊದಗಿಸಿ ಕೊಟ್ಟರು ಧನವ ॥ (74)

ತುಳುದೇಶದ ಭವ್ಯಜನರೊಳ ಗೊಬ್ಬರು । ಉಳಯಿತಿಲ್ಲೆಂಬಂದದೊಳು ॥
ಘಳಲನೆ ಗೋಷ್ಠಿಯ ಮಾಡಿಕೊಟ್ಟರು ಬಾಹು । ಬಲಿಜಿನನುತ್ಸವಕೆಂದು ॥ (75)

ಅಜಿಲ ಭೂಪಾಲನು ಕೊಟ್ಟನು ತನ್ನಯ । ವೃಜಿನವೆಲ್ಲವು ಪೋಗಲೆಂದು ॥
ನಿಜವಾದ ಗುಳವನ್ನೈನೂರು ಹಾಡವನಾ । ತ್ರಿಜಗದೊಡೆಯನುತ್ಸವಕೆ ॥ (76)

ಬಂಗಾರು ಕೊಟ್ಟರು ನೂರು ಗದ್ಯಾಣವ । ಮಂಗಲೋತ್ಸವ ಕಾಜಿನನ ॥
ಹಿಂಗಾಲಿ ತಮ್ಮ ವಿಘ್ನಗಳಿಂದಾ ಮುನಿ । ಪುಂಗವಾಚಾರ್ಯನ ಕೈಯ್ಯ ॥ (77)

ಕೊಟ್ಟರು ಚೌಟರು ನಿತ್ಯ ಪೂಜೆಗೆ ಮನ । ಮುಟ್ಟಿ ಭೂಮಿಯನು ವಿಂಗಡಿಸಿ ॥
ಪಟ್ಟಿಯ ಬರಸಿ ಗುಮ್ಮಟ ಜಿನನಿಗೆ । ಪಟ್ಟದ ಗುರುವಿನ ಕೈಯ್ಯ ॥ (78)

ಘಟ್ಟದ ಮೇಲಣ ಶ್ರಾವಕರೆಲ್ಲರು । ಕೊಟ್ಟರು ಗೋಷ್ಠಿಯ ಮಾಡಿ ॥
ಪಟ್ಟದಾಚಾರ್ಯನ ಕೈಯ್ಯ ತಮ್ಮ ಮನ । ಮುಟ್ಟಿ ಶಕ್ತಿಗೆ ತಕ್ಕಂತು ॥ (79)

ಉಳಿದ ಸಹಾಯವನೆಲ್ಲವ ಕೆಳದಿಯ । ದೊರೆಯು ಬೇಗದಿ ಮಾಡಿಸಿದ ॥
ಇಳೆಯೊಳಾಮುನಿ ಪುಣ್ಯೋದಯ ದೊಂದ । ಗ್ಗಳಕೆಯನೇ ಕೊಂದು ಪೇಳ್ವೆ ॥ (80)

ಊರೂರೊಳಗುಳ್ಳ ಶ್ರಾವಕರೆಲ್ಲರು । ಭೋರೆಂಬ ವಾದ್ಯದಿಂದೆಯ್ದಿ ॥
ಆರತಿ ಯೆತ್ತಿದಿ ರ್ಗೊಳ್ವರಾ ಮುನಿಪನಿ । ನ್ನಾರು ಬಣ್ಣಿಪರಾ ಸೊಬಗ ॥ (81)

ತರಿಸಿದ ಮರಗಳ ಬೆಟ್ಟವ ನೆಯ್ದಿಸಿ । ಬರಿಸಿ ಬಡಗಿಗಳ ಬೇಗ ॥
ವಿರಚಿಸಿ ಅಟ್ಟಳಗೆಯ ಕಟ್ಟ ಮಾಡಿದ । ನಿರುಪಮ ಮುನಿ ಮುಖ್ಯನಾಗ ॥ (82)

ಅಟ್ಟಳಗೆಯನು ಮಾಡಿಸಿದನು ಮುಗಿಲನು । ಮುಟ್ಟುವಂದದೊಳಾ ಜಿನಗೆ ॥
ದಿಟ್ಟಿಸಿ ನೋಡುವ ಜನರ ಕಣ್ಮನವನು । ನೆಟ್ಟನೆ ಸೂರೆಗೊಂಬಂತೆ ॥ (83)

ನವರಂಗವನೊಡ್ಡಿಸಿದನು ನೋಳ್ಪರ ಕಣ್ಗೆ । ತಾರಂಗು ಪುಟ್ಟಿಸುವಂತೆ ॥
ನವಕೇವಲಲಬ್ಧಿ ಸ್ವಾಮಿ ಗುಂಟೆಂಬುದ । ವಿವರಿಸಿ ತೋರ್ಪಂದದೊಳು ॥ (84)

ಪಟ್ಟೆ ಝಲ್ಲಿಗಳಿಂದ ನವರಂಗವನೊಡ್ಡಿ । ಇಟ್ಟನದರ ಮಧ್ಯದೊಳು ॥
ಕಟ್ಟಾಯತವಾದ ಪೊಂಗಳಸವನು ತಂ । ದಿಟ್ಟನಾಶ್ಚರ್ಯ ಪಪ್ಪಂತೆ ॥ (85)

ಪೊಂದಾವರೆ ಮೊಗ್ಗೆಗಳನು ತಮ್ಮಯ ಮಕ । ರಂದವನುಣಿಸ ಬೇಕೆಂದು ॥
ಬಂದವೊ ತರುಗಳೆಂಬಂತಾ ಕಳಸಕ । ಣ್ಗೆಂಬಾಗಿ ರಂಜಿಸಿತೆಂದು ॥ (86)

ಏಳುನೆಲೆಗಳಿಂದೊಪ್ಪುವಟ್ಟಳಿಗೆಯ । ಮೇಲೆ ರನ್ನದ ಪೊಸಕಳಸ ॥
ಥಾಳಿಸುತಿಹುದು ಮಹಮ್ಮೇರುಗಿರಿಯಗ್ರ । ಚೂಳಿಕೆಯೆಂಬಂದ ದೊಳು ॥ (87)

ಜಿನನೆಂಬ ಕಲ್ಪವೃಕ್ಷದ ಪಲ್ಲವಗಳೆ । ನನುಕರಿಸಿ ತೋರ್ಪಂತೆ ॥
ಅನಿಲಾಂದೋಲಿತ ಕೇತುಗಳೊಪ್ಪಿದ । ವನಘನಟ್ಟಲಿಗೆ ಯಗ್ರದೊಳು ॥ (88)

ನೆಲೆ ನೆಲೆಯೊಳು ತೋರ್ಪ ನೆಚ್ಚಣಿಗೆಗಳು ಕ । ಣ್ಗೊಳಗುತಿಹವು ನೋಳ್ಪಜನಕೆ ॥
ಸಲೆ ಸ್ವರ್ಗ ಮೋಕ್ಷದ ಪದವಿಯಾರೋಹಣ । ಕೊಲಿದಿಟ್ಟ ನಿಶ್ರೇಣಿಯಂತೆ ॥ (89)

ಹಸುರೆಡೆಕೆಗಳು ಹಣ್ಣಡಕೆ ಗಳಂಸುತ್ತಿ । ಪೊಸತಾದ ಕುಂಭವೊಪ್ಪಿಹವು ॥
ಮಿಸುಪ ಪಚ್ಚೆಯು ಪದ್ಮರಾಗದ ಮಣಿಗಳಂ । ದೊಸೆದು ತೆತ್ತಿಸಿದಂದದೊಳು ॥ (90)

ಅಲ್ಲಲ್ಲಿ ಮಕರ ತೊರಣಗಳ ವೀಥಿ ಮ । ತ್ತಲ್ಲಲ್ಲಿ ಗುಡಿ ತೋರಣಗಳು ॥
ಅಲ್ಲಲ್ಲಿ ಕುರುಜು ಪತಾಕೆಗಳೊಪ್ಪಿದ । ವೆಲ್ಲಿ ನೋಡಿದರು ಪುರದೊಳು ॥ (91)

ಮನೆ ಮನೆಗಳ ಮುಂದೆ ಚಪ್ಪರಗಳನಿಕ್ಕಿ । ಯನುಪಮ ಪಟ್ಟೆಝಲ್ಲಿಯೊಳು ॥
ಮನ ವೊಲ್ದು ಸಿಂಗರಿಸಿದರು ಪುರವನಾಗ । ದನದ ಪುರದಂ ತೊಪ್ಪಿಹುದು ॥ (92)

ಚಿತ್ರಗಳನು ಮನೆ ಮನೆಯೊಳು ಬರಸಿದ । ನೇತ್ರಕಾನಂದ ವಪ್ಪಂತೆ ॥
ಪಾತ್ರದಾನಕೆ ಸಾರಣೆಯ ಮಾಡಿಸಿದರು ವಿ । ಚಿತ್ರ ವೆನಿಪ ವಸ್ತುಗಳನು ॥ (93)

ಬೇಳೆ ಬೆಲ್ಲಗಳನು ಗೋಧಿಕಡಲೆಯನು । ಮೇಲಾದ ತುಪ್ಪ ಹಪ್ಪಳವ ॥
ಮೇಲಾದ ಸಣ್ಣಕ್ಕಿ ಶಾಕಪಾಕಗಳ ಭ । ವ್ಯಾಳ ಸಾರಣೆಯ ಮಾಡಿದುದು ॥ (94)

ಚಪ್ಪರಗಳನು ಮಾಡಿಸಿದರೆಲ್ಲೆಲ್ಲಿಂದ । ಬಪ್ಪಜನಕೆ ವಿಶ್ರಮಿಸಲು ॥
ತಪ್ಪದೆ ಮೇಲ್ಕಟ್ಟ ಕಟ್ಟಿಸಿ ಮುನಿರಾಯ । ನೊಪ್ಪವಂತಲ್ಲಲ್ಲಿಗಾಗ ॥ (95)

ಪನ್ನೆರಡು ಗ್ರಾಮದ ಮನೆ ತುಂಬಿತು । ಮುನ್ನವೆ ಸಾರಣೆ ಬಂದು ॥
ಇನ್ನೆಲ್ಲೂ ತೆರಪಿಲ್ಲವೆನಲಾ ಮುನಿಪನ । ಸನ್ನಹವನು ಪೇಳಲಳವೆ ॥ (96)

ಎಣ್ಣೆಯು ಹಾಡೆ ತುಪ್ಪದ ಹಾಡೆಗಳು ಬಹು । ಬಣ್ಣದ ಧಾನ್ಯ ರಾಶಿಗಳು ॥
ಸಣ್ಣಕ್ಕಿಯು ರಾಶಿ ಸಕ್ಕರೆಗಳ ರಾಶಿ । ಕಣ್ಣಿಗೆ ಕೋರೈಸುತಿಹವು ॥ (97)

ನಾಳಿಕೇರದ ರಾಶಿಗಳು ಬೆಲ್ಲದ ರಾಶಿ । ಬಾಳೆಯ ಹಣ್ಣ ಕೊನೆಗಳು ॥
ಮೇಲೋಗರದ ಕಾಯ ರಾಶಿಯನಿನ್ನು । ಪೇಳುವರೆನಗಳವಲ್ಲ ॥ (98)

ಮೆಣಸುಪ್ಪುಹುಳಿ ಮುಂತಾದ ಸನ್ನಾಹಗಳ । ಗಣನೆಯಿಲ್ಲದೆ ಕೊಡಿಸಿದನು ॥
ಹಣ ಹೊನ್ನುಗಳ ನೆಲ್ಲ ತೃಣಕೆಣೆಯೆಂದಾ । ಗುಣಮಣಿ ಹಾರ ಬಗೆದನು ॥ (99)

ಊಳಿಗದವರುಗ್ರಾಣದವರು ಕಾವ । ಲಾಳು ಕಟ್ಟುಗೆಯಾಳ್ಗಳನು ॥
ಮೇಳದವರು ವಾದ್ಯದವರು ಮಣಿಹದ ಕ । ಟ್ಟಾಳುಗಳನು ಸಂಗ್ರಹಿಸಿದ ॥ (100)

ಬಾಗಿಲವರ ವಲೆತಾಳಗಳನು ಕಂಡು । ಪೋಗುವ ಹರಿಕಾರರನು ॥
ಬೇಗಬರವ ಸೇನಭಾವ ಲೆಕ್ಕಿಗರವು । ತ್ತಾಗುರು ಸಂಗ್ರಹಿಸಿದನು ॥ (101)

ತೇರನುಗೆಯ್ಸಿದ ನೋಳ್ಪರಿಗಿದು ಪೊಸ । ತೇರಾಯಿತೆಂಬ ಮಾಳ್ಕೆಯೊಳು ॥
ಕಾರಕಳದ ಗುಮ್ಮಟೇಶನುತ್ಸವವ । ನಾರು ಬಣ್ಣಿಪರಿಂತೆಂದು ॥ (102)

ಗಾಳಿಯಬ್ಬಿನ ಮರ ಹಲಗೆ ಕಂಭಗಳಿಂದ । ಮೇಲು ನೆಲಗಳಸಿಂಗರಿಸಿ ॥
ಮೂಲೋಕದ ಸಿರಿಯನು ತೋರುತಿಹುದದು । ಸಾಲು ಮುತ್ತಿನ ಕುಚ್ಚಿನಿಂದ ॥ (103)

ಪಟ್ಟೆಝಲ್ಲಿಗಳಿಂದ ಸಿಂಗರಿಸಿದರದ । ಕಟ್ಟಾಯತಗಳನು ಮಾಡಿ ॥
ಮುಟ್ಟುವಂದದಿ ಮುಗಿಲನು ಪತಾಕೆಗಳು । ಇಟ್ಟಣಿಸಿದವೇನನೆಂಬೆ ॥ (104)

ಮೂರು ನೆಲೆಗಳೆಂಬ ಮೂರು ಮೇಖಲೆಯಿಂದ । ಬೀರುತ ರನ್ನದ ಸೊಬಗ ॥
ಮೇರುವೆ ಜಿನನ ಮಜ್ಜನ ಕಿದಿರ್ವಂದಂತೆ । ತೀರೊಪ್ಪಿತೇನೆಂದು ಪೇಳ್ವೆ ॥ (105)

ಜವಳಿಯು ನೈವತ್ತು ಕೋಡಿಯು ತರಿಸಿದ । ನವರವರಿಗೆ ತಕ್ಕಂತು ।
ಹವಣಿಸಿ ಸಂಘ ಪೂಜೆಯ ಮಾಡಬೇಕೆಂದು । ಭವಹರ ಜಿನನುತ್ಸವದೊಳು ॥ (106)

ಜವಳಿಯಂಗಡಿ ಮುತ್ತಿನಂಗಡಿ ರನ್ನದ । ಪವಳದಂಗಡಿಗಳಲ್ಲಲ್ಲಿ ॥
ವಿವಿಧ ತಾಮ್ರದ ಕಂಚಿನುಪಕರಣಂಗಳ । ನವನವ ಪಸರವೊಪ್ಪಿಹವು ॥ (107)

ಅಕ್ಕಿಯ ರಾಸಿ ವೀಳೋಗರ ಕಾಯ್ಗಳ । ಚೊಕ್ಕಟವಾದ ರಾಸಿಗಳು ॥
ಇಕ್ಕೆಲದಲಿ ತುಂಬಿಹವೆಲ್ಲ ನೋಡಲು । ದಿಕ್ಕು ದಿಕ್ಕಿನ ಬೀದಿಗಳೊಳು ॥ (108)

ಓಲೆಯ ಕಳುಹಿಸಿ ದೇಶ ದೇಶದ ಭವ್ಯ । ಜಾಲವ ಬರಿಸಿದನಾಗ ॥
ಸಾಲುದಂಗಿಗೆ ಛತ್ರ ಚಾಮರದಿಂ ಪುಣ್ಯ । ಶೀಲರಾ ಚಾರ್ಯರೆಯ್ದಿದರು ॥ (109)

ಅವರವರಿಗೆ ತಕ್ಕ ವಿನಯೋಪ ಚಾರದಿಂ । ದವರನು ತಾವಿದಿರ್ಗೊಂಡು ॥
ವಿವಿಧ ವಿಭವದಿಂದ ಗೂಡಿ ತಾ ಕರತಂದು । ಸುವಿವೇಕದಿಂ ಮುನಿರಾಯ ॥ (110)

ಶ್ರಾವಕರಿಗೆ ಶ್ರಾವಕರನು ಕಳುಹಿಸಿ ಮ । ತ್ತಾವಿಭವದೊಳದಿರ್ಗೊಳಿಸಿ ॥
ಠಾವನು ಮಾಡಿ ಕೊಡಿಸಿ ಬಿಡಾರಕ್ಕೆ । ಪಾವನ ಮುನಿಕುಲತಿಲಕ ॥ (111)

ಇಂತು ಸನ್ನಹವ ಮಾಡಿಸಿ ಯಾ ಮುನಿ । ಕಾಂತನಾನಾ ತೆರದಿಂದ ॥
ಕಂತು ವಿಜಯ ಜಿನಪತಿಯ ಪ್ರತಿಷ್ಠೆಯ ತಾಂತೊಡಗಿಸಲು ಧ್ಯಾನಿಸಿದ ॥ (112)

ಇದು ಶ್ರುತ ಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯೊ । ಳ್ಪದಿನಾರನೆಯ ಸುಸಂಧಿ ॥ (113)

(ಹದಿನಾರನೆಯ ಸಂಧಿ ಸಮಾಪ್ತಂ)

## ಹದಿನೇಳನೆಯ ಸಂಧಿ-

ಕಾಯಜನಾಗಿ ಕಾಯಜನ ಗೆಲಿದು ಮುಕ್ತಿ । ನಾಯಕಿಗರಸಾದಭವ ॥
ಹೇಯಾದೇಯ ತತ್ವಗಳ ತಿಳುಹಿಕಾಮ । ಕಾಯೊ ಶ್ರೀ ಗುಮ್ಮಟಜಿನಪ ॥ (1)

ತ್ರಿಭುವನ ಗುರು ನೇಮಿ ನಾಥಗೆ ಮೊದಲೊಳ । ಗಭಿಷೇಕ ಪೂಜೆಯ ಮಾಡಿ ॥
ಶುಭ ಮುಹೂರ್ತದೊಳು ಪ್ರತಿಷ್ಠಾ ಪ್ರಾರಂಭಕೆ । ಅಭಯ ಘೋಷಣೆಯ ಮಾಡಿಸಿದ ॥ (2)

ಜಯಘಂಟೆ ದುಂದುಭಿ ಮೊಳಗಿತು ಪುರದೊಳು । ಜಯಜಯವೆನೆ ಭವ್ಯಸಂಗ ॥
ನಯನೀತಿಯೊಡಗೂಡಿ ವಿಘ್ನ ನಿವಾರಣ । ಕ್ರಿಯೆಯ ಮಾಡಿದರು ಯತಿಗಳು ॥ (3)

ಪೂಜಾಚಾರ್ಯನ ಲಕ್ಷಣ ಯುಕ್ತನ । ರಾಜಾಧಿರಾಜ ಪೂಜಿತನ ॥
ಮೂಜಗ ದೊಡೆಯನುತ್ಸವ ದಾದಿಯೊಳು ಜಿನ । ರಾಜ ಮನ್ನಿಸಿದ ಸಂತಸದಿ ॥ (4)

ನೇಮಿ ಜಿನೇಶನ ಚೈತ್ಯಾಲಯಕೆ ಮ । ತ್ತಾಮ ಹಾಜನರನು ಕರೆಸಿ ॥
ಪ್ರೇಮದಿಂದಾ ಭವ್ಯ ಸಂಘ ದೊಡನೆ ಕೂಡಿ । ಯಾಮುನಿ ಪೇಳ್ದನಿಂತೆಂದು ॥ (5)

ಬಾಲಕ ನಾನು ಬಲ್ಲವನಲ್ಲ ವಿಧಿಗಳ । ಕಾಲವೆಂಬುದು ಬಲು ವಿಷಮ ॥
ಮೂಲೋಕ ದೊಡೆಯನುತ್ಸವಕೆ ನೀವೆಲ್ಲನು । ಕೂಲವಾಗಿ ನಡೆಸಬೇಕೆಂದು ॥ (6)

ಇಂದ್ರರೊಳುತ್ತಮ ವೆನಿಸುವ ಶ್ರೀನಾಗ । ಚಂದ್ರನ ಕರೆದು ತರ್ಕೈಸಿ ॥
ರುಂದ್ರಗಣಾನ್ವಿತ ನಿನ್ನಿಂದಲಿ ಜಿನ । ಚಂದ್ರನುತ್ಸಹ ವಾಗಬೇಕು ॥ (7)

ಇಂದ್ರನಹುದು ಜಿನ ಪೂಜೆಗೆ ಸ್ತುತಿಗೆ ನಾ । ನಾಗೇಂದ್ರನಹುದು ಜಿನಪತಿಯು ॥
ಚಂದ್ರ ನಹುದು ಶಾಂತರಸದೊಳ' ಗೆಂದು ಮು । ನೀಂದ್ರ ನುಡಿದನಾತನೊಡನೆ ॥ (8)

ದೇವೇಂದ್ರ ಮಾಡುವ ಪೂಜಾ ವಿಧಿಯಿದ । ನಾವೇನು ಬಲ್ಲೆವು ಸ್ವಾಮಿ ॥
ದೇವರ ಕಾರುಣ್ಯದಿಂದ ಬಲ್ಲಂದದಿ । ನಾವೆಸಗುವೆ ವೆಂದವನು ॥ (9)

ಉತ್ತಮ ಮಧ್ಯ ಮಾಧಮದೊಳಗೆ ನಾವು । ಉತ್ತಮಾಧಮ ವಿಧಿಗಳನು ॥
ಇತ್ತೆರನನು ಬಿಟ್ಟು ಮಧ್ಯಮ ವಿಧಿಯನು ಚಿತ್ತೈಸು ಸ್ವಾಮಿ ಮಾಡುವೆವು ॥ (10)

ಈ ಕಾಲದೊಳಗೆ ಜಘನ್ಯ ಪ್ರತಿಷ್ಠೆಯು । ಸಾಕಲ್ಯದಿಂ ಮಾಡಿಸುವರು ॥
ಲೋಕದೊಳಗೆ ದುರ್ಲಭವದರಿಂದಿದು । ಸಾಕೀ ಕಾಲದೊಳೆಂದ ॥ (11)

ಅಂತಾದೊಡದಕೆ ಬೇಕಾದ ಸಾಮಗ್ರಿಯು । ನೀಂತಳುವದೆ ಬರೆಸೆನಲು ॥
ಮುಂತಪ್ಪ ವಿಧಿಗೆ ಬರೆಸಿ ಬಿನ್ನವಿಸಲು । ತಾಂತರಿಸಿದನಾ ಮುನಿಪ ॥ (12)

ಆ ಮರುದಿನದೊಳಗಿಂದ್ರ ಪ್ರತಿಷ್ಠೆಯು । ತಾಮಾಡಿಸಿದ ಬೇಕೆಂದು ॥
ಪ್ರೇಮದಿಂ ಪಲ್ಲಕ್ಕಿ ಛತ್ರ ಚಾಮರ ವಾದ್ಯ । ಸ್ತೋಮವ ಕಳುಹಿದನಾಗ ॥ (13)

ಕಳಸ ಕನ್ನಡಿಯಾಂತು ಮುತ್ತೈದೆ ವೆಂಗಳು । ತಳಿಯ ನೆಳಲೊಳಿದ್ದರು ॥
ವಿಳಸಿತ ಧವಳ ಶೋಭನಗಳ ಪಾಡುತ । ಕಳಹಂಸ ಗತಿಯೊಳಿದ್ದರು ॥ (14)

ಪಲ್ಲಕಿಯೊಳಗಿಂದ್ರ ಕುಳಿತು ಬಂದನು ನೋಳ್ಪಜನ । ರೆಲ್ಲಚ್ಚರಿವಡುವಂತೆ ॥
ಸಲ್ಲೀಲೆಯಿಂದಾಗಲಾ ಮುನಿಪತಿ ಯಿ । ರ್ದಲ್ಲಿಯ ದಾನ ಸದನಕೆ ॥ (15)

ಇದಿರು ಗೊಳಿಸಿ ಕರತಂದು ಮಂಟಪದಲ್ಲಿ । ಮುದದಿಂದ ಹಸೆಯನು ಬರೆಸಿ ॥
ಚದುರೆಯರಿಂದ ಶೋಭನಗಳ ಪಾಡಿಸಿ । ಯದರೊಳು ಹಸೆವಣೆಯಿಡಿಸಿ ॥ (16)

ಕುಳ್ಳಿರಿಸಿ ಸೇಸೆಯನಿಡಿಸಿ ಯಾರತಿಯನು । ಬೆಳಗಿಸಿ ಕಮ್ಮೆಣ್ಣೆಯನು ॥
ಕುಲಸತಿಯರ ಕೈಯ ಲೊತ್ತಿಸಿ ಸ್ನಾನವ । ಘಳಿಲನೆ ಮಾಡಿಸಿ ಬಳಿಕ ॥ (17)

ಪಟ್ಟೆಯ ಹಚ್ಚಡ ಧೋತ್ರ ಮುಂಡಾಸನು । ಕೊಟ್ಟು ಕುಂಡಲ ಕಂಕಣವ ॥
ಕಟ್ಟಿದ ನವರತ್ನ ಮಯವಾದುದ ನಾಗ । ಪಟ್ಟದಿಂದ್ರಗೆ ಮುನಿರಾಯ ॥ (18)

ಉಡಿವಾರ ಮುದ್ರಿಕೆ ಹೊನ್ನುಂಗುರಗಳ । ನಿಡಿಸಿ ಚಿನ್ನದ ಯಜ್ಞ ಸೂತ್ರ ॥
ಪಿಡಿದು ಮಂತ್ರ ವನುಚ್ಚರಿಸಿ ಯಾತನಿಗೆ । ಕೊಡಿಸಿದನತಿ ಮುದದಿಂದ ॥ (19)

ಈ ರೀತಿಯೊಳು ಹತ್ತು ಮಂದಿಗೆ ಕೊಟ್ಟನು । ದಾರ ಶಿರೋಮಣಿ ಬಳಿಕ ॥
ಪೂರೈಸಿ ಕೊಡಬೇಕು ನಮ್ಮಭೀಷ್ಟವನೆಂದು । ಕಾರುಣ್ಯದಿಂ ಹರಸಿದನು ॥ (20)

ಮೇಲಾದವರಿಗೆಲ್ಲ ಧೋತ್ರ ಮುಂಡಾಸವ । ಲೀಲೆಯಿಂದಿತ್ತನಾ ಮುನಿಪ ॥
ಲಾಲಿಸಿ ಕಳುಹಿದ ಮುನ್ನಿನಂದದಿ ದಾನ । ಶೀಲರಿಗುಂಟೆ ಲುಬ್ಧತ್ವ ॥ (21)

ಅಂದಿನ ದಿನದ ರಾತ್ರಿಯೊಳಾ ಮುನಿಪತಿ । ನಾಂದಿ ಮಂಗಲದ ವಿಧಿಯನು ॥
ಚಂದದಿಂ ಮಾಡಿಸಿದನು ಸಂಹಿತೆಯೊಳು ವೇ । ಳ್ದಂತೆಲ್ಲ ಸಾಕಲ್ಯವಾಗಿ ॥ (22)

ವಿಸ್ತಾರ ಸಂಕ್ಷೇಪವೆಂದಿತ್ತೆರನುಂಟು । ವಾಸ್ತು ಪೂಜೆಗೆ ಬಲಿಯಲ್ಲಿ ॥
ವಸ್ತು ಸಾಮಗ್ರಿಯ ತರಿಸ ಮಾಡಿಸಿದನು । ವಿಸ್ತಾರ ವಾಸ್ತು ಪೂಜೆಯನು ॥ (23)

ನಾಂದಿ ಮಂಗಲವಾಸ್ತು ಪೂಜೆಗಳಗೆ ತಕ್ಕ । ಸಂದ ಯಂತ್ರವನುದ್ಧರಿಸಿ ॥
ಒಂದು ದಿನದ ರಾತ್ರಿಯೊಳು ಮಾಡಿಸಿದನು । ಮಂದರಧೀರನುದಾರ ॥ (24)

ಸ್ತಂಭವ ನೆತ್ತಿಸಿ ಧ್ವಜಪಟ ಪೀಠವ । ಷ್ಟಂಭಿಸಿ ಧ್ವಜವನೆತ್ತಿಸಿದ ॥
ಗಂಭೀರವಾಗಿ ದುಂದುಭಿ ವಾದ್ಯಗಳ ಧ್ವನಿ । ಯಂಬುಧಿಯಂತೆ ಘೂರ್ಣಿಸಲು ॥ (25)

ದಿಕ್ಕನ್ನಿಕೆಯರ ದಿಕ್ಪಾಲರ ಧ್ವಜಗಳ । ದಿಕ್ಕು ದಿಕ್ಕಿನೊಳೆತ್ತಿಸಿದನು ॥
ದಿಕ್ಕಿನೊಳಗೆ ಪೂರ್ವ ಮುಖವಾಗಿ ನಿಂದುದು । ಚೊಕ್ಕಟವೆನೆ ಮುಖ್ಯ ಧ್ವಜವು ॥ (26)

ಅಲ್ಲಿಗೆ ದಳ ಕದಳಿಯ ಕಂಬ ತೋರಣ । ಝಲ್ಲಿ ಪತಾಕೆ ಕಬ್ಬುಗಳ ॥
ನಿಲ್ಲಿಸಿ ದರ್ಭೆ ಮಾಲೆಯ ಸುತ್ತಿಸಿದನು । ಸಲ್ಲೀಲೆಯಿಂದಾ ಮುನಿಪ ॥ (27)

ಪಲ್ಲಕ್ಕಿಯೊಳು ಸರ್ವಾಣ್ಹ್ಯಕ್ಷನನಿಟ್ಟು । ಸಲ್ಲೀಲೆಯಿಂ ಪುರದೊಳಗೆ ॥
ಪಲ್ಲವ ಸತ್ತಿಗೆ ಧರ್ಮ ಚಕ್ರಧ್ವಜ । ಯಲ್ಲಲ್ಲಿ ಯಾಡುವ ಪಾತ್ರ ॥ (28)

ಆಲೆ ವಟ್ಟಲು ಸೂರಿಯ ಪಾನ ಚಾಮರ । ಸಾಲು ಪಂಜುಗಳು ಹಿಲಾಲು ॥
ಓಲಗಿಸುವ ನಾನಾ ವಾದ್ಯರಭಸದಿಂ । ತಾಳಮದ್ದಳೆ ಕಹಳೆಗಳ ॥ (29)

ಧ್ವನಿಗಳು ದಿಕ್ಚಕ್ರವನು ವ್ಯಾಪಿಸುತಿರೆ । ಮುನಿಜನ ಪಲ್ಲಕ್ಕಿಯೊಳು ॥
ಅನುಪಮ ವಿಭವದೊಡನೆ ಕೂಡಿ ಬರುತಿರೆ । ಜನರೆಲ್ಲ ಜಯಜಯವೆನಲು ॥ (30)

ಆಕಾಶಬಾಣ ಬಿರಿಸು ಕದನಿಯ ಧ್ವನಿ । ನಾಕಲೋಕವನು ವ್ಯಾಪಿಸಲು ॥
ಶ್ರೀಕಾರಕಳದುತ್ಸವದ ಪ್ರಾರಂಭವ । ನೇಕ ಸಂಭ್ರಮದೊಳೊಪ್ಪುವುದು ॥ (31)

ಎರಡು ಹೊತ್ತಿಲಿ ಇತ್ತೆರದ ಪ್ರಭಾವನೆ । ಪುರದೊಳು ಸಂಭ್ರಮದಿಂದ ॥
ಸೊರವಡುವುದು ಮುನ್ನಿಂತಿಲ್ಲವೆನಲಾ । ಸಿರಿಯನದೇನ ಬಣ್ಣಿಪೆನು ॥ (32)

ಮತ್ತಾ ಮರುದಿನದೊಳು ಶುದ್ಧವೆನಿಸುವ । ಮೃತ್ತಿಕೆ ಸಂಗ್ರಹಗಳನು ॥
ಉತ್ತಮ ಮುನಿ ಮಾಡಿಸಿದನು ಸಂಭ್ರಮದಿಂದ । ಚಿತ್ರಿಸಲಂಕುರಗಳನು ॥ (33)

ಪಟಲಪಾಲಿಕೆ ಶರಾವೆಗಳನು ಮತ್ತೆ । ಘಟಗಳೆಂಬಿವ ಮಂಟಪದೊಳು ॥
ಸ್ಫುಟವಾದ ವೇದಿಕೆಯೊಳು ಸ್ಥಾಪಿಸಿದರು । ಪಟುತರ ಭಕ್ತಿಯೊಳಾಗ ॥ (34)

ಹದಿನೆಂಟು ತೆರದ ಧಾನ್ಯಗಳನು ತರಿಸಿ ಮ । ತ್ತದನು ಪ್ರಕ್ಷಾಲನೆ ಗೆಯ್ಸಿ ॥
ಸುದತಿಯರನು ಸಿಂಗರವಾಗಿ ಬರಹೇಳ । ಮುದದಿ ಡಂಗುರವ ಸಾರಿಸಿದ ॥ (35)

ಮೊದಲೆ ಬಂದಿರ್ದ ನಾನಾ ದೇಶದ । ಸುದತಿಯರೆಲ್ಲ ಸಿಂಗರಿಸಿ ।
ಮುದದಿಂದ ಬಂದೇರಿದರಾ ಗಿರಿಯನು । ಮದಗಜ ಗಮನೆಯರಾಗ ॥ (36)

ಕಾಲಂದುಗೆ ಕಟಿಸೂತ್ರ ಕಡಗ ಕಂಠ । ಮಾಲೆ ಮೂಗುತಿ ಕನ್ನಡಿಯ ॥
ಓಲೆಮುತ್ತಿನ ಬೊಟ್ಟು ನಿ [ಟ್ಟು] ಸಿಂಗರವಾಗಿ । ಬಾಲೆಯರೆಯ್ತಂದರಾಗ ॥ (37)

ಪೊಂಬಾಳೆದೊಡೆಯ ಪೊಂಬೊಗರೆ ಮೊಲೆಯ ಪಕ್ಷ । ಬಿಂಬಾಧರದ ಬಲ್ಮುಡಿಯ ॥
ಕಂಬು ಕಂಠದ ಪಿಡಿನಡುವಿನ ಕಳರವ । ದಂಬುಜ ಮುಖಿಯರೆಯ್ದಿದರು ॥ (38)

ಪಟ್ಟೆ ಪೀತಾಂಬರ ಬಗೆ ಬಗೆ ಬಣ್ಣವ । ನುಟ್ಟು ಪಟ್ಟೆಯರವಕೆಗಳ ॥
ತೊಟ್ಟು ಸಿಂಗರವಾಗಿ ಬಗೆಯಿಂದ ಬಂದರು । ಕಟ್ಟಾಣಿವೆಂಗಳೊಗ್ಗಿನಲಿ ॥ (39)

ತಳಿರಡಿಗಳ ತಾವರೆಯೆಸಳ್ಗಣ್ಣಿನ । ಕಳಸ ಕುಚದ ತೆಳುವಸುರ ॥
ಕಳಕಳಿಸುವ ನಗೆಮೊಗದ ಕೋಮಲೆಯರಂ । ದೆಳಸಿದರಂಕುರಾರ್ಪಣೆಗೆ ॥ (40)

ಎಸಳುಗಂಗಳ ಪೆರೆ ನೊಸಲ ತುಂಬಿಗಳಂತೆಸೆವಳಕದ ನಳತೋಳ ॥
ದೆಸೆದೆಸೆಯೊಳು ಪಸರಿಸುವ ಮೈಬೆಳಗಿನ । ಪೊಸಜವ್ವನೆಯರೆಯ್ದಿದರು ॥ (41)

ಸುರಸತಿಯರೊ ವಿದ್ಯಾಧರ ಸ್ತ್ರೀಯರೊ । ಉರಗ ಲೋಕದ ಕಾಂತೆಯರೊ ॥
ಸರಸ್ವತಿ ಪಲವು ರೂಪಾದಳೊಯೆಂಬಂತೆ । ತರುಣಿಯರೆಯ್ತಂದರಾಗ ॥ (42)

ಬಂದಾಗಿರಿಯಗ್ರವನೆಯ್ದಿ ಕಡುಸೊಬ । ಗಿಂದ ಬ್ರಹ್ಮನ ಬಲಗೊಂಡು ॥
ವಂದಿಸಿ ಸ್ವಾಮಿಯ ಗುರುವಿನ ಚರಣಾರ । ವಿಂದಕೆರಗಿ ಭಕ್ತಿಯಿಂದ ॥ (43)

ಹರಸಿಯಾಗುರುರಾಯ ಧ್ಯಾನವ ಚಿನ್ನದ । ಹರಿವಾಣದೊಳಗಿಟ್ಟವರ ॥
ಕರದೊಳು ಕೊಟ್ಟಂಕುರವ ಬಿತ್ತಿಸಿದನು । ವರಮಂತ್ರ ಪೂರ್ವಕದಿಂದ ॥ (44)

ಪುಣ್ಯಾಂಕುರದ ಬೀಜವ ಬಿತ್ತಿಸುವಂತೆ । ಪುಣ್ಯಾಂಗನೆಯರ ಕೈಯಿಂದ ॥
ಪಣ್ಯಾಂಗನೆಯರು ಪಾಡಿನರ್ತಿಸಲಗ್ರ । ಗಣ್ಯ ಮಾಡಿಸಿದ ನಾ ವಿಧಿಯ ॥ (45)

ಸಾವಿರ ಮುತ್ತೈದೆ ವೆಣ್ಗಳಗಾಗ । ಭಾವಜ ವಿಜಯ ಮುನೀಂದ್ರ ॥
ದೇವಾಂಗ ವಸ್ತ್ರ ರವಕೆಗಳ ಕೊಟ್ಟು ಸಂ । ಭಾವಿಸಿ ದಕ್ಷಿಣೆ ಸಹಿತ ॥ (46)

ಕಡಲೆ ತೆಂಗಿನಕಾಯಿ ಕಬ್ಬಿನ ಕಂಡಿಕೆ । ಮಡಿಲಕ್ಕಿ ಬಾಳೆಯ ಹಣ್ಣು ॥
ಅಡಕೆಲೆಗಳ ತುಂಬಿ ಕನಕಭಾಜನದೊಳು । ಕೊಡಿಸಿದ ಬಾಗಿನಗಳನು ॥ (47)

ಅವರೆಲ್ಲರಿಗಾಶೀರ್ವಾದವ ಮಾಡಿ । ಯವರನು ಕಳುಹಿಸಿ ಬಳಿಕ ॥
ಭವಹರ ಜಿನಬಿಂಬ ಶುದ್ಧಿಯ ಮಾಡಲು । ಹವಣಿಸಿದನು ಮುನಿರಾಯ ॥ (48)

ಮುದದಿಂದ ಕಲಶನ್ಯಾಸವ ಮಾಡಿಸಿ ನೂ । ರದಿಮೂರು ಕಳಸದೊಳು ॥
ಸದಮಲ ಸರ್ವೌಷಧಿ ಜಲವನು ತುಂಬಿಸಿ । ಯುದರವಿನ್ಯಾಸವನರಿತು ॥ (49)

ಧಾಮಶುದ್ಧಿಗೆ ದಾವು ವಿಲ್ಲದಿದ್ದುದರಿಂದ । ಸ್ವಾಮಿಯ ಬಿಂಬ ಶುದ್ಧಿಯನು ॥
ತಾಮಾಡಿಸಿದನು ಸರ್ವೌಷಧಿ ಜಲದಿಂ । ದಾಮುನಿರಾಯನುತ್ಸವದಿ ॥ (50)

ಗರ್ಭಾವತರಣ ಜನ್ಮಾಭಿಷೇಕಗಳೆಂಬ । ನಿರ್ಭರ ಕರ್ಣಾಣವಿಲ್ಲ ॥
ದರ್ಭಶಯನ ವಕಾರ ಶುದ್ಧಿಗಳೊಳಂ । ತರ್ಭಾವವೆಂದು ಮಾಡಿಸಿದ ॥ (51)

ಯುವರಾಜ ಪಟ್ಟ ಮುಂತಾದ ವಿಧಿಗಳನು । ಸುವಿವೇಕದಿಂದ ಮಾಡಿಸಿದ ॥
ಭವಹರ ಜಿನರುಪಚಾರ ಕ್ರಿಯೆಗಳ ವೈ । ಭವವ ತೋರಿಸಲೆಂದಾಗ ॥ (52)

ಪರಿನಿಷ್ಕ್ರಮಣ ಕಲ್ಯಾಣ ವಿಧಿಯ ಮತ್ತೆ । ಪರಮಾನಂದದೊಳಾಗ ॥
ಗುರುಕುಲ ತಿಲಕ ಮಾಡಿಸಿದನು ನಿರ್ವೇಗ । ಕ್ಕರಸು ತಾನಾದುದರಿಂದ ॥ (53)

ಮಾತ್ರಾ ಪ್ರಮಾಣ್ಯಯಂತ್ರೋದ್ಧಾರವ । ಬಿತ್ತರದಿಂದ ಮಾಡಿಸಿದ ॥
ಉತ್ತಮ ದೇವತೆಗಳ ಸ್ಥಾಪಿಸಿದರು । ಸುತ್ತಿದ ದಿಕ್ಕರ್ಣಿಕೆಯೊಳು ॥ (54)

ಯುವಸಂಧ್ಯಾವರ್ತವಯು ಮುಂತಾಗಿರ್ದ । ವರಮಹಾ ಪೂಜಾವಿಧಿಗಳ ॥
ಅವರವರಾಹ್ವಾನ ಸ್ಥಾಪನಾದಿಗಳಿಂದ । ಸವಿನಯದೊಳು ಮಾಡಿಸಿದ ॥ (55)

ಮಂಗಲಾಷ್ಟಕವ ಪತಾಕಾಷ್ಟಕವನು । ಕಂಗೊಳಿಪಾಯುಧಾಷ್ಟಕವ ।
ಸಿಂಗರಿಸಿದ ಕರಬನ ಮುಂತಾದವ । ಹಿಂಗದರ್ಚಿಸಿದರಲ್ಲಲ್ಲಿ ॥ (56)

ಶ್ರೀಪತಿಗಾಗ ಸಂಸ್ಕಾರ ಮಾಲೆಯನಾ । ರೋಪಣೆಯನು ಮಾಡಿಸಿದನು ॥
ಪಾಪ ಕರ್ಮಗಳ ಕೆಡಿಸಿ ಮುಕ್ತಿ । ರೂಪಿಗುಪಾಯವೆಂದೆನಿಪ ॥ (57)

ಕನಕ ಭಾಜನದೊಳು ಹಿಮದುಗ್ಧ ಸಕ್ಕರೆ । ಯನುಮಿಶ್ರವನುಮಾಡಿ ಬಳಿಕ ॥
ಕನಕ ಶಲಾಕೆಗಳಿಂದ ನೇತ್ರೋನ್ಮೀ । ಲನವಿಧಿಗಳ ಮಾಡಲಾಗ ॥ (58)

ತೆರೆಜಾರಿತು ಘಾತಿಕರ್ಮ ತೊಲಗಿದಂತೆ । ವರಭವ್ಯಜನ ಜಯವೆನಲು ॥
ದೊರೆಗಳು ಶ್ರಾವಕರೆಲ್ಲರು ಸ್ವಾಮಿಯ । ಚರಣಕೆ ಕಾಣಿಕೆಯಿಕ್ಕಿ । (59)

ಜಯಜಯವೆಂದು ಸಾಷ್ಟಾಂಗವೆರಗಿದರು । ಭಯಭಕ್ತಿಯಿಂದಾ ಜಿನಗೆ ॥
ಅಯಮೇವಕೇವಲಿಯೆಂದು ಭಾಷಿಸಿಯಾ । ಕ್ರಿಯೆಯ ಮಾಡಿದರು ಯತಿಗಳು ॥ (60)

ವಸು ಋತು ಶರಶಿ ಸಂಖ್ಯೆಯೊಳಗೆ ವ । ರ್ತಿಸುವ ಶಕಾಬ್ದದೊಳಿಂದು ॥
ಎಸೆವ ಪಾರ್ಥಿವದ ಫಾಲ್ಗುಣದ ಶುದ್ಧ ದ್ವಾ । ದಶಿಯೊಳಾಜಿನಗೆ ಪ್ರತಿಷ್ಠೆ ॥ (61)

ಆದುದಾ ಸಮಯದೊಳಗೆ ಭವ್ಯಸಂಘ । ಮೇದಿನಿಯೊಳು ಮೂರು ಲಕ್ಷ ॥
ಆದರದಿಂದ ನೆರೆದುದದರಂದವ । ಭೇದಿಸಿ ಪೇಳಲೆನ್ನಳವೆ ॥ (62)

ಇಂತು ಪ್ರತಿಷ್ಠೆಯ ಮಾಡಿಸಿ ತ್ರಿದಿನ ಪ । ರ್ಯಂತ ಮಹಾ ವಿಭವದೊಳು ॥
ಶಾಂತಿಕವಿಧಿಯನು ಮಾಡಿಸಿದನು ಲೋಕ । ಶಾಂತಿನಿಮಿತ್ತ ಮುನೀಂದ್ರ ॥ (63)

ಒಂದೊಂದು ಹೊತ್ತಿಗೊಬ್ಬೊಬ್ಬರ ಮನೆಯೊಳ । ಗೊಂದು ಸಾವಿರ ಸಂಘಕ್ಕೆ ॥
ಬಂದು ಸನ್ಮಾನಿಸಿಕ (?) . . . . . । . . . . . . . ನು ॥ (64)

ಪರಮಾನ್ನ ಕಜ್ಜಾಯ ತುಪ್ಪ ಸಕ್ಕರೆ ಪರಿ । ಪರಿಯ ಶಾಕೋಪದಂಶಗಳ ॥
ಪರಿಮಳಿಸುವ ಶಾಲ್ಯನ್ನ ದಧಿ[ಯನ್ನವ । ನಿರದುಣ ಬಡಿಸಿ ಶ್ರಾವಕರ] ॥ (65)

[1] ಆ ಸಮಯದೊಳಗೆ ಮಾಸಪರ್ಯಂತ ವಿ । ಲಾಸದಿಂದಾ ಶ್ರಾವಕರು ॥
ಲೇಸೆನೆ ಮುದಾವು ಸಂಘವ ತಡವರಿ । ನ್ನಾ . . . . . . ॥ (66)

. . . . ಳೊಳಗೊಂದೊಂದು ಸಾವಿರ । ತಾನುಂಬುದೆ ಭವ್ಯಸಂಘ ॥
ಯೇನೆಂಬೆ ಪ್ರೊಂದೊಂದು ಹೊತ್ತಿಗಾ ಸಿರಿಯನು । ನಾನಾ ಪ . . . . . . ॥ (67)

. . . . . . . ಧನರಿಗೆ ನಿಚ್ಚ । ಸನ್ಮಾನವನು ಮಾಡಿಸುವನು ॥
ತನ್ನ ಪಂಜಿಯೊಳು ಬಿಕ್ಷೆಗೆ ಮುನಿಪನದಾನ । ದುನ್ನತಿಕೆಯ ನೇನ ದೇಳ್ವೆ ॥ (68)

. . . . . . . . ಗಳನು ತಾವು । ತರಿಸಿ ನಾನಾವಾದ್ಯ ವೆರಸಿ ॥
ಸಂಯಮಾದಷ್ಟ ಕುಗ್ರಾಣಗಳನು ನಿಚ್ಚ । ಪಿರಿದಾಗಿ ತುಂಬಿಸುತಿಹನು ॥ (69)

. . . . . . . . . . । . . . . ದಿನವಳವೃತಲಿಹರು ॥
ಮುನಿಪನಪ್ಪಣೆಯಿಂದ ನಾನಾಪ್ರಜೆಗಳ್ಗೆ । ವಿನಯೋಪ ಚಾರಗಳಿಂದ ॥ (70)

[1] ಅಂದವ ಸಮಯದೊಳಗೆ.

ಸಕ್ಕರೆ ತ . . . . . . . . . । . . . . . . . . ಹಿತ ॥
ಚೊಕ್ಕಟವಾಗಿ ಪಡಿಯು ಕೊಡಿಸುವನು । ಮಿಕ್ಕಯಾಚಕ ಜನಕ್ಕೆಲ್ಲ ॥ (71)

ದಿನವ್ರೊಂದಕೆನ್ನೂರು ಕದನಿ ಬಿರಿಸುಬಾಣ । . . . . . . . ॥
. . . . ಮುಂದಾರತಿ ನಿವಾಳಗಳನು । ಜನರು ಮಾಳ್ಪರು ಪ್ರಭಾವನೆಗೆ ॥

ಸಿಂಗರಿಸಿದ ರಥದೊಳು ಋಷಿಬಿಂಬವ । ತಂದಿಟ್ಟು ವ . . . . . । 
. . . . . . . . . . । . . . . ಗಣದಾಚಾರ್ಯರ ಬರಿಸಿ ॥ (73)

ಆ ರಥವೇರಿಸಿ ಧರ್ಮದೊಳ್ತನ್ನ ಮ । ನೋರಥ ಪೆಚ್ಚಿಸುವಂತೆ ॥
ಭೂರಿವೈಭವದೊಡಗೂಡಿ . . . । . . . . . . ನಿಪ ॥ (74)

ಅಲ್ಲಲ್ಲಿಯಾಡುವ ಪಾತ್ರ ಭೋಗಗಳು ಮ । ತ್ತಲ್ಲಲ್ಲಿ ಬಿರುಸು ಬಾಣಗಳು ॥
ಸಲ್ಲೀಲೆಯಿಂದ ಕಾಣಿಸಿ ತೋರಿ । . . . . . . . . ॥ (75)

ಎತ್ತಿದ ಪಂಜುಹಿವಾಲು ದೀವಟಿಗೆಯು । ಮೊತ್ತಗಳಿಲ್ಲಿ ನೋಡಿದರು ॥
ಕತ್ತಲೆಯನು ಕಂಡು ಪಲವು ಸೂರ್ಯರ । . . . . . . . ॥ (76)

ತಾಳಿಯು ಚೀತ್ಕಾರವಾಗಲಾದಿಕ್ಚಕ್ರ । ವಾಲವನೆಲ್ಲ ವ್ಯಾಪಿಸಲು ॥
ಲಾಲಿಸಿ ದಿಗ್ಗಜ ತಂತಮ್ಮ ದಿಕ್ಕಿನ । ಮೂಲೈದಿದ . . . . ॥ (77)

. . . . . . ವಾದ್ಯದ ರಭಸಕೆ । ಜಲಧಿಯು ಜಲ ಪೆರ್ಚಿಯುಬ್ಬಿ ॥
ನಲದಾಡು ತಿರ್ದದೊಯೆನೆ ತೆರೆ ಕೈಗಳಿಂದೆ । ನಲುಳದವ ನಿನ್ನೆ . . . ॥ (78)

. . . . . . . . ಛತ್ರಧ್ವಜ । ವಾಗಲೆತ್ತಿದವು ಪತಾಕೆಗಳು ॥
ಆಗಸವೆಲ್ಲಿಯು ತೆರಪಿಲ್ಲ ವೆಂಬಂ । ತಾಗಿಯೂರದ ಮು . . . . ॥ (79)

. . . . . . . . . ಬಳಯ್ಯೈದು ಸಾ । ವಿರನೆರೆದಾ ತೆರವಿಣಿಯನು ॥
ಹರುಷದೆಂದೆಯ್ದಿ ಪಿಡಿದರೆಂದೆನಲಾ । ಸಿರಿಯುನ ದೇನ ಬಣ್ಣಿಪೆನು ॥ (80)

. . . . . . ನೇನಿಜಿನೇಶನಾಲಯ । ಮುಟ್ಟಿರಥವ ತಾನೆಳಸಿ ॥
ಪಟ್ಟದ ಗುರುರಾಯನಾಜಿನನಿಗೆ ಮನ । ಮುಟ್ಟಿ ಪೂಜೆಗಳ ಮಾಡಿ [ದನು] ॥ (81)

. . . . . . ಮುನ್ನಿನ ಪರಿ । ಯೊಳಿಯಾ ಮಾರ್ಗದೊಳೆಯ್ದಿ ॥
ನಿಲ್ಲಿಸಿ ರಥವನು ಬಟ್ಟಾದ ಸನ್ನಿಧಿ । ಯಲ್ಲಿ ಸಂಭ್ರಮ ದೋರಿ . . . ॥ (82)

ಶ್ರೀಗುಮ್ಮಟನಾಥನ ಪಾದ ಪದ್ಮಕೆ । ಬೇಗನಿವಾಳಿಯ ನಿಟ್ಟು ॥
ಆಗಸಾಷ್ಟಾಂಗ ವೆರಗಿದನು ಭಕ್ತಿಯಿಂ । ದಾಗುರು . . . . . ॥ (83)

. . . . . . ಮುಟ್ಟಿ ಜಿನಗಭಿಷೇಕವ । ನಾರೈದು ಮಾಡಿಸಿ ಬಳಕ ॥
ನಾರವೆನಿಸುವ ಮಹಾಭಿಷೇಕಕೆ । ಪ್ರಾರಂಭವ ಮಾಡಿಸಿದನು ॥ (84)

ಅಂದಾ ಕಳಶವೆಲ್ಲಕೆ ತಿಲದಂತರ । ದಿಂದಾ ತಂತುಗಳ ಸುತ್ತಿಸಿದ ॥
ಒಂದೊಂದು ಪದದೊಳು ಪ್ರಸ್ಥಪ್ರಮಿತಶಾಲಿ । ಯಿಂದ ರಚನೆಯಮಾಡಿಸಿದ ॥ (85)

ಆ ಮಹಾ ಕ್ಷೀರಸಮುದ್ರದಂ ತೊಪ್ಪುವ । ರಾಮ ಸಮುದ್ರದ ಜಲವ ॥
ಆ ಮುನಿರಾಯ ತರಿಸಬೇಕೆಂದು ಮ । ಹಾ ಮಹಿಮೆಯೊಳೆಯ್ದಿದನು ॥ (86)

ಭವ್ಯಜನರಕೈಯ್ಯ ಬೇರೆಬೇರೊಂದೊಂದು । ನವ್ಯ ಕುಂಭಗಳನು ಕೊಟ್ಟು ॥
ಸೇವ್ಯವೆನಿಪ ಜಲದೇವತಗಳನಲ್ಲಿ । ದಿವ್ಯಜಲಾದಿಗಳಿಂದ ॥ (87)

ಮನ್ನಿಸಿ ಜಲವನು ಸೋದಿಸಿ ತುಂಬಿಸಿ । ಚಿನ್ನಬೆಳ್ಳಿಯ ಕುಂಭದೊಳಗೆ ॥
ಪನ್ನಿರಿಗೆ ಸಮಗಂಧ ಬಂಧುರತೆಗೆ । ಚೆನ್ನತುಂಬಿಗಳು ಬಂದೆರಗೆ ॥ (88)

ಪಲ್ಲಕ್ಕಿಯೊಳಗಿಟ್ಟು ಕುಂಭಗಳನು । ಸಲ್ಲೀಲೆಯಿಂದ ಮಿಕ್ಕಾದ ॥
ಪಲ್ಲವ ಶೋಭಿಪ ಕುಂಭಗಳನು ಭವ್ಯ । ರೆಲ್ಲರಕೈಯೊಳು ಕೊಟ್ಟು ॥ (89)

ಮುಂದಿ ನರ್ತನವಾದ್ಯ ಸಂಗೀತಗಳ ನಾ । ನಂದದಿಂದೆ ಸಗುತಲಿರಲು ॥
ಹಿಂದೆ ಪಲ್ಲಕ್ಕಿಯೊಳಾ ಮುನಿಪತಿ ಭವ್ಯ । ವೃಂದದೊಡನೆ ಬಂದನಾಗ ॥ (90)

ಮಂಗಲಾಷ್ಟಕವನು ಪೇಳೆಯಾ ಜನರೆಲ್ಲ । ಹಿಂ ಗದೆ ಜಯ ಘೋಷಣೆಯೊಳು ॥
ಕಂಗೊಳಸುತ ಮೇರುವಿನಂತೊಪ್ಪುವ । ತುಂಗಗಿರಿಯನೇರಿದರು ॥ (91)

ಒಂದೊಂದು ಕಳಸದಡಿಗೆ ಪ್ರಸ್ಥವ್ರೀಹಿಯ । ತಂದು ಹರಹಿ ಕಮಲಗಳ ॥
ಅಂದಕ್ಷತೆಯಿಂದ ಸ್ವಸ್ತಿಕವನು ಬರ । ದಿಂದಿರೆ ಕಲಶವ ತಂದು ॥ (92)

ಶಾಸ್ತ್ರಪಾದಗಳನು ಬಿಟ್ಟಲ್ಲಿ ಹರಹಿದ । ಧಾನ್ಯಪದಂಗಳ ಮೇಲೆ ॥
ಮಾನ್ಯ ಸ್ಥಾಪಿಸಿದನು ಸ್ವಸ್ತಿಯ ವಪ್ಪಡೆಂ । ದಾಂ ನ್ಯಾಯದಾವರಣದೊಳು ॥ (93)

ಫಲಪುಷ್ಪ ಪಲ್ಲವ ಚಿಂದಿ ಮುಂತಾಗಿರ್ದ । ಹಲವು ವಸ್ತುಗಳಿಂದಾಗ ॥
ಚೆಲುವನಪ್ಪಾಡಕ ಜಲಪರಿಪೂರಿತ । ಕಲಶವ ಸಿಂಗರಿಸಿದರು ॥ (94)

ಕೋಣೆಗಳೊಳು ಮಧ್ಯದೊಳು ತಂದಿಟ್ಟರು । ದ್ರೋಣ ಪ್ರಮಾಣ ಕುಂಭಗಳ ॥
ಊಣಯವಿಲ್ಲದೆ ತುಂಬಿ ಮಂಗಲದ್ರವ್ಯ । ಶ್ರೇಣಿಗಂಧೋದಕಗಳನು ॥ (95)

ಕಳಸಾರ್ಚನೆಯನು ಕ್ರಮದಿಂದ ಮಾಡಿಸಿ । ಬಳಕ ಪ್ರಶಸ್ತಿ ಗದ್ಯಗಳ ॥
ಭಳರೆನೆ ಪೇಳಸಿ ಮಂತ್ರಪೂರ್ವಕದಿಂದ । ಕಲಶೋದ್ಧರಣವನಾಗ ॥ (96)

ಮೊದಲಿಂದ್ರನಿಂದ ಮಾಡಿಸಿ ಭವ್ಯವೃಂದವ । ಮುದದಿಂದ ಪಂಕ್ತಿಯೊಳ್ನಿಲಿಸಿ ॥
ಪದಕಳಸವ ಪ್ರದಕ್ಷಿಣ ಕ್ರಮದಿಂ । ದೊದವಿಸಿಕೊಟ್ಟರರ್ತಿಯೊಳು ॥ (97)

ಭವ್ಯಮೇಘಂಗಳು ಕುಂಭದ ಜಲಗಳ । ನವ್ಯಯ ಸುಖವೃದ್ಧಿಗಾಗಿ ॥
ದಿವ್ಯಜಿನೇಶನೆಂದೆಂಬ ಸುಕ್ಷೇತ್ರದೊ । ಳ್ನವ್ಯವೃಷ್ಟಿಯ ಮಾಡಲೆಂದು ॥ (98)

ಇಂದ್ರನ ಕೈಯೊಳು ತಂದು ಕೊಟ್ಟರು ಜಿನ । ಚಂದ್ರನ ಮಜ್ಜನಕಾಗ ॥
ರುಂದ್ರ ವಾದ್ಯಗಳು ಮೊಳಗುತಿರಲಾ ಮು । ನೀಂದ್ರನ ಮುದವನೇನೆಂಬೆ ॥ (99)

ಎರಡುಭುಜದ ಸನ್ನಿಧಿಯೊಳಗೀರ್ವರು । ವರಮಸ್ತಕದ ಸನ್ನಿಧಿಯೊಳು ॥
ಸ್ಥಿರವಾಗಿ ನಿಂದೀರ್ವರಿಂದ್ರರು ಜಯವೆನೆ । ಸುರಿದರು ಕುಂಭದ ಜಲವ ॥ (100)

ಹಿಮಗಿರಿಯಿಂದ ಗಂಗಾಸಿಂಧು ನದಿಗಳು । ಕ್ರಮದಿಂದೆಯ್ತರುವಂತೆ ॥
ಕಮಲ ಸರೋವರದಂತಿರ್ದ ಕುರುಳ್ಗಳಿಂ । ಕ್ರಮ ಪರಿಯುಂತವಾ ಜಲವು ॥ (101)

ಕುರುಳೊಳು ಸುಳದು ಶ್ರೀಮುಖದೊಳು ನಲಿದು । ಉರದೊಳುಯಿಳದಾ ನಾಭಿ ॥
ಸರಸಿಯ ಪೊಕ್ಕು ತ್ರಿವಳಿಗಳ ಮಿಕ್ಕವ । ತರಿಸಿತು ಚರಣಯುಗಲವ ॥ (102)

ಭೇರಿಯು ಗಂಭೀರ ನಾದಿಘರ್ಜಿತ ಮಿಂದ್ರ । ಪ್ರೇರಿತ ಕುಂಭ ಮೇಘಗಳು ॥
ಭೋರೆಂದು ಕರೆದುವು ಜಿನನಂಗ ಕ್ಷೇತ್ರದೊ । ಳಾಸರನಾಥ ಸುಜಲದ ॥ (103)

ಸಾಸಿರದೆಂಟು ಕುಂಭದ ಜಲಗಳನಿಂತು । ಸೂಸಿದರಭವನಂಗದೊಳು ॥
ಆಸಮಯದೊಳು ಭವ್ಯರು ಜಯಜಯವೆಂದು । ಲೇಸಾಗಿ ಘೋಷಿಸುತಿರಲು ॥ (104)

ಪಟ್ಟೆ ಪೀತಾಂಬರಗಳನು ನಿವಾಳಿಯು । ನಿಟ್ಟು ಜಲಾದಿಗಳಿಂದ ॥
ಪಟ್ಟದಿಂದ್ರರು ಬಂದು ಪೂಜಿಸಿದರು ಮನ । ಮುಟ್ಟಿದ ಭಕ್ತಿಯೊಳಾಗ ॥ (105)

ಅಮೃತರಸಕೆ ಸಮವೆನಿಪ ಕೆಂದೆಂಗಿನ । ವಿಮಲ ಶೀತಲ ಜಲದಿಂದ ॥
ಕ್ರಮದಿಂದ ಸಾಸಿರದೆಂಟೆಂಟು ಇಂದ್ರರಾ । ಕ್ರಮಿಸಿ ಮಜ್ಜನವ ಮಾಡಿದರು ॥ (106)

ಲಕ್ಷತೆಂಗಿನ ಕಾಯಿ ಸಳಿಯು ವಣಿಸಿದ ಬ । ಲಾಕ್ಷ ಪಕ್ಷವ ಚಂದ್ರಮನ ॥
ಸಾಕ್ಷಾತ್ಕಿರಣ ಮಾಲೆಗಳೊಯಿಸೆಂಬಂ । ತಾಕ್ಷಣದೊಳ್ ಮುನಿರಾಯು ॥ (107)

ಈ ಜಿನನಂಗವ ಸೋಂಕಿ ಕಲಂಕವ । ಮಾಜಿಸ ಬೇಕೆಂದು ಚಂದ್ರ ॥
ರಾಜಿಪ ತನ್ನಕಿರಣ ಜಾಲದಿಂ ಬಂದು । ಪೂಜಿಸು ವಂತೊಪ್ಪಿತಾಗ ॥ (108)

ಮಂದಾರ ಮಾಲೆಯೊಡನೆ ಪುಷ್ಪವೃಷ್ಟಿಯು । ನಂದು ಸುರರು ಮಾಡಿದಂತೆ ॥
ಬಂದು ನೋಡುವ ಜನರಿಗೆ ಕಾಯಿಸುಳಿಗಳಾ । ನಂದವ ಪುಟ್ಟಿಸುತಿಹವು ॥ (109)

ಆಕಾಶದೊಳು ನಿಂದು ನೋಡುವ ಸುರರಾ । ನೀಕದ ಕಣ್ಬೆಳಗುಗಳಂ ॥
ಆಕಾರವಾಂತಂತೆ ತೆಂಗಿನ ಸುಗಿಗಳ । ನೇಕವಿಸ್ಮಯವ ಪುಟ್ಟಿಪವು ॥ (110)

ಕದಳಿಯ ಪಕ್ವಫಲಗಳಭಿಷೇಕನ । ತದನಂತರದೊಳ್ಮಾಡಿದರು ॥
ಅದಕಂತಃಸಾರ ಮೃದು ಮಧುರತೆ ಗಂಧ । ಒದವಿತಾ ಜಿನನ ಸೋಂಕಿಂದ ॥ (111)

ಕಂಟಕ ಬಹುಳ ವಾದುವು ನಮಗಿನ್ನು ನಿ । ಷ್ಕಂಟಕವನು ಮಾಡಿಸೆಂದು ॥
ಕಂಟಕಿ ಪಲಸಾರಗಳು ಜಿನನಂಘ್ರದೊ । ಳ್ನಂಟು ತನವನು ಮಾಡಿದುವು ॥ (112)

ಮೊದಲು ನಿನ್ನಯಚಾಪವನು ಮಾಡಿ ನಮ್ಮನು । ಮುದದಿಂದ ಸಲಹಿದೆಯಿನ್ನು ॥
ಮದನಾರಿ ನಿಮ್ಮಾದರಪದಯುಗಲವ ಸರ್ವಥಾ । ಬಿಡೆವೆನಾವೆಂದೆನುತ ॥ (113)

ನೀ ತಪದೊಳು ತಪ್ತನಾದಂತೆ ನಾವಗ್ನಿ । ಯಾ ತಪದಿಂ ತಪ್ತರಾಗಿ ॥
ಓತು ಬಂದೆವು ಸಲಹೆಂದಪ್ಪಿದಂತಿಕ್ಷು । ಜಾತ ರಸಗಳೊಪ್ಪಿದುವು ॥ (114)

ಮುನ್ನೂರು ಕೊಡಗೂಳದಭಿಷೇಕವಮಾಡಿ । ರನ್ನದ ಬಿಂಬವೆಂಬಂತೆ ॥
ಮುನ್ನಕಂಡಿತು ಜನರಿಗೆ ಬಳಿತಾ ಬಿಂಬ । ಚಿನ್ನದ ಬಿಂಬದಂದದೊಳು ॥ (115)

ಬೆಲ್ಲ ಸಕ್ಕರೆ ಯಭಿಷೇಕದೊಳಗೆ ಮೋ [ಹ] । ಮಲ್ಲನೊಡನೆ ಕಾದಲೆಂದು ॥
ಸಲ್ಲೀಲೆಯಿಂದ ದೇಹದೊಳು ಕೆಂದೂಳಿಯು । ಚೆಲ್ಲಿದಂತೊಪ್ಪಿಹುದಾಗ ॥ (116)

ಶ್ರೀಜಿನ ಪತಿಯುವ[ರ]ಭಿಕರಣಕೆ ಮುಕ್ತಿ । ರಾಜೀವ ಮುಖಿಯ ಕುಂಕುಮದ ॥
ರಾಜಿಪ ಚೂರ್ಣವ ತಳದಂತೆ ಗುಡಚೂರ್ಣ । ವಾಜಿನನಂಗ ಕೊಪ್ಪಿಹುದು ॥ (117)

ಜಿನನಿದಿರೊಳುತಾದಿ ಸೋಲ್ತುಮೇಲೇಬಿಲ್ಲ । ನೆನಗೇತಕೆಂದೆನುತ ॥
ಮನಸಿಜನೀತೆರದಿಂದ ಚೂರ್ಣವಮಾಡಿ । ಜಿನಗೆ ಸೇಚಿಸಿದಂತೊಪ್ಪಿಹುದು ॥ (118)

ಹೃದ್ಯ ಸುಬುದ್ಧಿ ವರ್ಧನಕರ ಶ್ರೀಜಿನ । ವಿದ್ಯೆಯಂ ತೊಪ್ಪುತಲಿರ್ಪ ॥
ಸದ್ಯೋಘೃತದಭಿಷೇಕವ ನೆಸಗಿದನಿರ । ವದ್ಯಗೆ ಮಾಡಿದರಾಗ ॥ (119)

ದಂಡಾಕಾರವ ನೆಯ್ದಿದ ಮಿಂಚಿನ । ಖಂಡಮಾಲೆಗಳೊಯ್ಯೊಂಬಂತೆ ॥
ಪಂಡಿತ ಪುಂಡರೀಕರ ಕಣ್ಗೆರಂಜಿಸಿ । ಕಂಡಿತಾ ಘೃತಧಾರೆಯಾಗ ॥ (120)

ನೀನೆನ್ನ ಮೇಲಣ ಸ್ನೇಹವ ಬಿಟ್ಟರು । ನಾನಿನ್ನ ಸ್ನೇಹವ ಬಿಡೆನು ॥
ತಾನೆಂದು ಬಂದು ತೇಜೋಲೇಶ್ಯ ಮೊಪ್ಪಿದಂ । ತಾನವಘೃತ ಮೊಪ್ಪಿತಾಗ ॥ (121)

ಘೃತವರಸಾಗರ ವೆಯ್ತಂದುದೋಜಿನ । ಪತಿಯ ಮಜ್ಜನ ಕೆಂಬಂತೆ ॥
ಪ್ರತಿಯಿಲ್ಲವೆನೆ ಮುನ್ನೂರು ಕೊಡ ಗೋ । ಘೃತದ ಭಿಷೇಕ ಮಾಯ್ತಾಗ ॥ (122)

ಗೋಕ್ಷೀರದಿಂ ಮಜ್ಜನವ ಮಾಡಿಸಲಾಗ । ಲಕ್ಷಿಪ ಜನರಕ್ಷಿ-ಗಳಿಗೆ ।
ಸಾಕ್ಷಾತ ರಜತ ನಿರ್ಮಿತ ಬಿಂಬವೆಂಬಂ । ತಾಕ್ಷಣದೊಳ ಗೊಪ್ಪಿದುದು ॥ (123)

ತೆರೆನೊರೆ ತುಂತುರ್ವನಿ ಗೂಡಿ ಕ್ಷೀರಸಾ । ಗರವೆಯ್ತಂದಾ ಜಿನನ ॥
ಶಿರದಿಂದ ಪಾದ ಪರ್ಯಂತರ ಚೆಲ್ವನು । ಪರಿಪರಿಯಲಿ ನೋಡಿಬಳಿಕ ॥ (124)

ತನ್ನಮಗಳು ಬಹಿರಂಗ ಲಕ್ಷ್ಮಿಯು ನಿತ್ತು । ಮನ್ನಿಸಿ ಯಾಜಿನ ಪತಿಯು ॥
ಚೆನ್ನಾಗಿ ಗಾಢಾಲಿಂಗನವನು ಮಾಳ್ಪ । ಬಿನ್ನಾಣವನು ತೋರಿತಾಗ ॥ (125)

ಇನ್ನೀ ಜಿನನೊಳು ಕಾದಿದೆ ಯಾವರೆ । ನನ್ನಾಣೆಯೆಂದು ಮೊಮ್ಮಗನ ॥
ಮುನ್ನನಿವಾರಿಸಿ ಕ್ಷೀರಾಬ್ಧಿ ಜಿನಪನ । ಮನ್ನಿಸಿದಂತೊಪ್ಪಿತಾಗ ॥ (126)

ಸಾವಿರದೆಂಟೆಂಟು ಕುಂಭದೊಳಗೆ ತುಂಬಿ । ಪಾವನ ಕ್ಷೀರವೆ ತಂದು ॥
ದೇವನ ಮಸ್ತಕ ಭುಜಯುಗ ದೊಳು ಮ । ಹಾ ವಿಭವದೊಳು ಸೂಸಿದರು ॥ (127)

ಘನಗೊಂಡ ಹಿಮ ಖಂಡದಂತೆ ಪಾಂಡುರವಾದ । ಕೆನೆಮೊಸರಭಿಷೇಕವನು ॥
ಜಿನನ ಮಸ್ತಕದೊಳು ಮಾಡಿದರಾ ಪುಣ್ಯ । ಜನರೆಲ್ಲ ಜಯ ಜಯ ವೆನಲು ॥ (128)

ಮಂಗಲ ವಸ್ತುವಿನೊಳು ಮುಖ್ಯ ಮಾಯ್ತು ಜಿ । ನಾಂಗ ಸಂಗವು ಮಾತ್ರದಿಂದ ॥
ಹಿಂಗದೆ ದಧಿಯೆನೆ ಭಜಿಸುವ ಭವ್ಯಜ । ನಂಗಳ ಭಾಗ್ಯವಿನ್ನೆಂತೊ ॥ (129)

ಕೊಡ ಕೊಡದೊಳು ತುಂಬಿ ದಧಿಯಭಿಷೇಕವ । ತಡೆಯದೆ ಮಾಡಲಾದಧಿಯು ॥
ಅಡಿಮುಟ್ಟ ಸ್ನೇಹವ ಬಿಡದೆಯ್ದಿ ತಾಜಿನ । ನಡಿಯ ಸಾರ್ದರಿಗುಂಟೆ ಜಡತೆ ॥ (130)

ಬೇರೆ ಬೇರೊಂದೊಂದು ತೆರದಭಿಷೇಕಕೆ । ಸಾರಜಲಾದಿಗಳಿಂದ ॥
ಆರಾಧಿಸಿ ನಿವಾಳಿಸಿದರು ಪಟ್ಟಿ । ಪಾರಿಗಳಿಂದಾ ಜಿನಗೆ ॥ (131)

ಪಿಷ್ಟಗಳಂ ಕಲ್ಕಚೂರ್ಣ ಮುಂತಾದ ವಿ । ಶಿಷ್ಟವಸ್ತುಗಳಿಂದ ಜಿನನ ॥
ಸಾಷ್ಟಾಂಗ ದೊಳಗುಳ್ಳ ಸ್ನೇಹಾ ಮೋಹವ । ಶಿಷ್ಟರು ಮಾಡಿದರಾಗ ॥ (132)

ಸಿಂದೂರ ಕುಂಕುಮ ಕರ್ಪೂರ ಮಿಶ್ರಿತ । ಗಂಧದಿಂದ ಭಿಷೇಕವನು ॥
ಬಂಧುರಾಂಗಕೆ ಮಾಡಲಾಜಿನಪನೆತನು । ಗಂಧ ವ್ಯಾಪಿಸಿತು ದಿಕ್ತಟವ ॥ (133)

ಮಂದಾರ ಮಲ್ಲಿಗೆ ಕುಂದಸೇವಂತಿಗೆ । ಬಂದುಗೆ ಜಾಜಿಮುಂತಾದ ॥
ಕಂದದ ಪೂವಿನ ಮಳೆಗರೆದರುಜಿನನೆಂದೆಂಬ ಸುಕ್ಷೇತ್ರದೊಳು ॥ (134)

ಇಂತೀ ಮಹಾಭಿಷೇಕವ ಮಾಡಿಸಿ ಮುನಿ । ಕಾಂತನತ್ಯಾನಂದದಿಂದ ॥
ಮುಂತೆ ಸಾಷ್ಟಾಂಗ ವೆರಗಿದನು ಜನಪತಿ । ಗಂತರಂಗದ ಭಕ್ತಿಯಿಂದ ॥ (135)

ಆನಂದಾಶ್ರು ಜಲಗಳಿಂದ ಮುನಿಪತಿ । ಸ್ನಾನವ ಮಾಡಿದನಾಗ ॥
ಏನೆಂಬೆ ಜಿನಚಂದ್ರ ದರ್ಶನದಿಂ ಪರ । ಮಾನಂದಗ[ಡ] ಲೊಳುಬ್ಬಿದನು ॥ (136)

ಉತ್ತಮವಾದ ಬೃಹಚ್ಛಾಂತಿ ವಿಧಿಯನು । ಮತ್ತೆ ಮಾಡಿಸಿ ಮುನಿರಾಯ ॥
ಪತ್ತು ಕುಂಡಗಳೊಳು ಬಿತ್ತರದಿಂದಲಿ । ಪತ್ತು ಮುಂದಿಂದ್ರರ ಕೈಯ್ಯ ॥ (?) (137)

ಅದರಿಂದ ಬಳಿಕ ನವಗ್ರಹ ಶಾಂತಿಯು । ನದರ ಲಕ್ಷಣ ಯುಕ್ತವಾಗಿ ॥
ಮುಂದದಿಂದ ಮಾಡಿಸಿದನು ನವಕುಂಡ ದೊ । ಳದರ ಬಿನ್ನಣವನೇನೆಂಬೆ ॥ (138)

ಭಟ್ಟಾರಕಾಚಾರ್ಯರಿಗೆ ಮುನಿರಾಯನು । ಪಟ್ಟೆಯ ಹಚ್ಚಡಗಳನಿತ್ತು ॥
ಕೊಟ್ಟನು ವಸ್ತ್ರಾಂಗ ಕಲ್ಪ ವೃಕ್ಷವೆ ಕೈ । ಬಿಟ್ಟಂತೆ ಸಂತೋಷದಿಂದ ॥ (139)

ಉಳಿದ ಯತಿಗಳಿಗೆ ಒಂದೊಂದು ವರಕದ । ಬಿಳಿಯ ಹಚ್ಚಡಗಳನಿತ್ತು ॥
ಬಳಕಾರ್ಯಿಕ ಸಮುದಾಯಕೆ ಹಚ್ಚಡ । ಗಳನಿತ್ತು ಮುದದಿ ಮನ್ನಿಸಿದ ॥ (140)

ಇಂತೇಳು ನೂರಡಕೆ ಸಂಘ ಪೂಜೆಯ । ನಂತರಂಗದ ಶುದ್ಧಿಯಿಂದ ॥
ಕಂತು ವಿಜಯ ಶ್ರೀಲಲಿತ ಕೀರ್ತ್ಯಾಚಾರ್ಯರ । ದೆಂತು ಬಣ್ಣಿಪೆ ಕೊಟ್ಟ ಸಿರಿಯ ॥ (141)

ವರಬುಧರಿಗೆ ಕೊಟ್ಟನವರ ಮನೋರಥ । ಪರಿಪೂರ್ಣ ವಪ್ಪಂದದೊಳು ।
ಗುರುರಾಯ ಲಲಿತ ಕೀರ್ತ್ಯಾಚಾರ್ಯನತ್ಯಾಗ । ದಿರವನಾನೆಂತು ಬಣ್ಣಿಪೆನು ॥ (142)

ಭೂರಿದಾನಗಳನು ಯಾಚಕರಿಗೆ ಕೊಟ್ಟ । ಧಾರಿಣಿ ಪೊಗಳು ವಂದದೊಳು ॥
ಮಾರಮಣರಿಗುಡು ಗೊರೆಯನು ಕೊಟ್ಟನು । ದಾರ ಶಿರೋಮಣಿಯಾಗ ॥ (143)

ದಾನಸನ್ಮಾನದಿಂದಾ ಚತುಃಸಂಘವ । ತಾನು ಮನ್ನಿಸಲಾ ಮುನಿಪ ॥
ನಾನಾದೇಶದ ದೊರೆಗಳು ಶ್ರಾವಕ । ರಾನಂದದಿಂದೈತಂದು ॥ (144)

ಗಂಧಾಕ್ಷತೆ ಪುಷ್ಪ ನೈವೇದ್ಯ ದೀಪದಿಂ । ವಿಲಸಿತ ಧೂಪ ಸತ್ಫಲದಿಂ ॥
ಲಲಿತ ಕೀರ್ತ್ಯಾಚಾರ್ಯನ ಪಾದ ಪದ್ಮವ । ನೊಲಿದು ಪೂಜಿಸಿ ಭಕ್ತಿಯಿಂದ ॥ (145)

ಪಟ್ಟೆಯ ಹಚ್ಚಡಗಳನು ಕಾಣಿಕೆಯನು । ಕೊಟ್ಟು ನಲ್ಮೆಯ ರತ್ನಗಳನು ॥
ಇಟ್ಟು ಸಾಷ್ಟಾಂಗ ವೆರಗಿದರು ಭವ್ಯರು । ಪಟ್ಟದ ಗುರುವಿನ ಮುಂದೆ ॥ (146)

ನಿರುಪಮ ಸದ್ಧರ್ಮ ನಿರತರು ನೀವಾಗಿ । ಪರಿಪೂರ್ಣ ಸುಖದೊಳೋಲಾಡಿ ॥
ಪರಮ ಸ್ವರ್ಗಾ ಪವರ್ಗವ ನೆಯ್ದಿನೀವೆಂದು । ಹರಸಿದ ನವರನಾ ಮುನಿಪ ॥ (147)

ಮಿಸುನಿಯ ಬೆಳ್ಳಿಯಂಡೆಗಳೊಳು ಕುಂಕುಮ । ರಸವನು ತುಂಬಿಯೋಕುಳಿಯ ॥
ಹೊಸಹರೆಯದ ಹೆಂತ ಕಾರಿಗಳಾಡಿದ । ರೆಸೆದೆಸೆದೋರೋರ್ವರಾಗ ॥ (148)

ಉಟ್ಟ ಚಲ್ಲಣ ಜಟ್ಟಿ ಚೋಗೆ ಕುಲ್ಲಾಯಿಗ । ಳಿಟ್ಟ ಕಸ್ತೂರಿ ಬೊಟ್ಟು ಮೆರೆವ ॥
ಕಚ್ಚಾಳುಗಳಂತೆ ವೀರ ಶೃಂಗಾರದಿಂ । ದಿಟ್ಟಾಡಿದರು ತುಂಬಿ ಜಲವ ॥ (149)

ಬೆಟ್ಟದೊಳಂತು ವಸಂತವ ನಾಡಿಯಾ । ಪಟ್ಟಣದೊಳು ಭವ್ಯಜನರು ॥
ಇಟ್ಟಣಿಸುತ ಕುಂಕುಮ ಜಲವನು ತುಂಬಿ । ಇಟ್ಟಾಡಿದರು ರಭಸದೊಳು ॥ (150)

ಚಿನ್ನ ಬೆಳ್ಳಿಯ ಜೀರ್ಕೊಳವೆಗಳನು ತುಂಬಿ । ಪನ್ನೀರು ಕುಂಕುಮ ಜಲವ ॥
ಮನ್ನಿಯರೆಲ್ಲ ವಸಂತವಾಡಿದ । ರಿನ್ನೇನ ಪೇಳುವೆನಾ ಸಿರಿಯ ॥ (151)

ಇಂತು ಪ್ರತಿಷ್ಠಾ ವಿಧಿಯ ನಿರ್ವರ್ತಿಸಿ । ಕಂತು ವಿಜಯ ಮುನಿರಾಯ ॥
ತಂತವಕ್ಕೆ ಪುರಕೆ ಸರ್ವರನು [ಬೀಳ್ಕೊ] ಟ್ಟನಿ। ಶ್ಚಿಂತ ಮನದೊಳಗಿರಲು॥ (152)

ಹಲರಿಗೆ ಬಳಯ್ಕೆದು ಸಾವಿರ ಮುಡಿಗೆ । ಬಳಕ ಸಸ್ಮಾನ ಭೋಜನವ ॥
ಲಲಿತ ಕೀರ್ತ್ಯಾಚಾರ್ಯರ ಮಾಡಿಸಿದನು ಭೂ । ತಳವೆಲ್ಲ ಪೊಗಳುವಂದದೊಳು ॥ (153)

ಶ್ರೀ ನೇಮಿನಾಥನಿ ಗಭಿಷೇಕ ಪೂಜೆ ಮ । ಹಾ ನೈವೇದ್ಯ ಮುಂತಾದ ॥
ಮಾನಿತ ವಿಧಿಗಳ ಮಾಡಿಸಿ ನುತಿಸಿದ । ಸಾನಂದದಿಂದಾ ಮುನಿಪ ॥ (154)

ಗರುಡನ ಧ್ಯಾನವ ಮಾಡುವ ಮನುಜರ್ಗೆ । ಗರಳದ ಭಯವುಂಟೆ ನಿನ್ನ ॥
ಚರಣಾರವಿಂದವ ಭಜಿಸುವ ಭವ್ಯರ್ಗೆ । ದುರಿತವಿಘ್ನಗಳುಂಟೆ ಸ್ವಾಮಿ ॥ (155)

ನೇಸರು ಮಂಡಲದೊಡನೆ ಕತ್ತಲೆ ದಿ । ಗ್ದೇಶವ ಬಿಟ್ಟೋಡುವಂತೆ ॥
ಸಾಸಿರ ನಾಮದೊಡೆಯ ನೆನೆಯೆ ವಿಘ್ನ । ರಾಶಿಗಳೆಳವುದೊಂದರಿದೊ ॥ (156)

ಎಂದು ನಾನಾ ತೆರದಿಂದ ನುತಿಸಿ ಮನ । ದಂದು ಕೈಕೊಂಡ ವ್ರತಗಳ ॥
ನಿಂದು ನಿಷ್ಠಾಪಿಸಿದನು ಭವ್ಯಸಂಘವ । ಮುಂದೆ ಜಿನರ ಸನ್ನಿಧಿಯೊಳು ॥ (157)

ಬಳಕ ಬಂದನು ಬೆಟ್ಟದ ಬ್ರಹ್ಮರಾಯನ । ಬಳಗೆ ಸಂತಸದಿಂದ ಮುನಿಪ ॥
ವಿಲಸಿತ ತೈಲ ಮಜ್ಜನವ ಮಾಸಿನು ಮಾಡಿಸಿ ತೀರ್ಥ । ಜಲ ಮಜ್ಜನವನು ಮಾಡಿಸಿದ ॥

ಸಾವಿರ ಕಜ್ಜಾಯದಿಂದೈ ಚರುವನು । ತೀವಿದ ಪಾಯಸ ತುಪ್ಪ ।
ಸಾವಿರ ಬಾಳೆಯ ಹಣ್ಣುಗಳಂ ಬ್ರಹ್ಮ । ದೇವಗೆ ಮಾಡಿಸಿ ಬಳಕ ॥ (159)

ಸಾವಿರ ತೆಂಗಿನ ಕಾಯನೊಡೆಸಿ ನಿಟ್ಟ । ಪಾವನ ಜಿನಧರ್ಮವನು ॥
ಕಾವುದು ನೀನೆಂದೊಪ್ಪಿಸಿದನು ತನ್ನ । ಭಾವದೊಳಟ್ಟು ಪ್ರಾರ್ಥನೆಯ ॥ (160)

ಚೆನ್ನದ ಕಂಗಳು ಪಾಶಾಂಕುಶ ಫಲ । ಸನ್ನುತ ಭಯಹಸ್ತಪದ್ಮ ॥
ಚಿನ್ನ ಸರಗಳನೊಪ್ಪಿಸಿದನು ಪೊಂಬುಚ । ದುನ್ನತ ಪದ್ಮಾಂಬಿಕೆಗೆ ॥ (161)

ಅಭಿಷೇಕ ಪೂಜೆಯ್ಕೆ ಚರು ಘೃತ ಧಾರೆಯ । ನಭಿನವನೆನಲು ತಾನೆಸಗಿ ॥
ಶುಭವಿತ್ತು ರಕ್ಷಿಸು ಧರ್ಮವನೆಕೆ ಕೊಟ್ಟು । ಳಭಯ ಹಸ್ತದೊಳ್ನ (ಂದು) (162)

ಇಂತೀ ಪ್ರಾರ್ಥನೆಗಳನೊಪ್ಪಿಸಿ ತನ್ನ । . . . . . . ಯಿಂದ ॥
ಕಂತು ವಿಜಯ ಮುನಿರಾಯ ತಪೋರಾಜ್ಯ । ವಂ ತಾನು ರಕ್ಷಿಸುತಿರ್ದ ॥ (163)

ಮಂಗಳವಾಗಲಿ ಧರೆಗೆಲ್ಲ ಭವ್ಯ ಜ । ನಂಗಳ ಗಭಿವೃದ್ಧಿಯಾಗಿ ॥
ಕಂಗೊಳಿಸುವ ಜಿನಧರ್ಮ ಬೆಳಗಲಂತ । ರಂಗದೊಳಗೆ ಭೂಭುಜರ ॥ (164)

ಶ್ರೀ ಗುಮ್ಮಟ ಸ್ವಾಮಿಯ ಚರಿತೆಯ ಬೇಗ । ರಾಗದಿಂದೋದುವ ಕೇಳ್ವ ॥
ಭೋಗಿಗಳಗು ಯೋಗಿಗಳಗು ಸಂಪದ ಸುಖ । ವಾಗುತಲಿರಲಿ ನಿರಂತರವು ॥ (165)

ಇದರೊಳು ಕೊಂಕುಳ್ಳಡೆ ತಿದ್ದಿ ಬಲ್ಲವ । ರದು ತಾನಿರಲು ಭೂಷಣವೆ ॥
ಸುದತಿಯ ಕಡೆಗಣ್ಣನೋಟ ಕುರುಳ್ಪುರ್ಬ । ಮುದವ ಪುಟ್ಟಿಸವೆ ಲೋಕದೊಳು ॥

ಇದು ಶ್ರುತಸಾಗರ ಮುನಿರಾಯನ ಶಿಷ್ಯ । ಚದುರ ಚಂದ್ರಮ ವಿರಚಿಸಿದ ॥
ಮದನಾರಿ ಗುಮ್ಮಟ ಸ್ವಾಮಿಯ ಚರಿತೆಯೊ । ಳ್ಪದಿನೇಳನೆಯ ಸುಸಂಧಿ ॥ (167)

(ಹದಿನೇಳನೆಯ ಸಂಧಿ ಸಮಾಪ್ತಂ)

ಮಂಗಳ ಮಹಾ ಶ್ರೀ : ಶ್ರೀ : ಶ್ರೀ :

ತಪ್ಪಂ ಬರೆದಾತಂ (ಕಡು) ಜಡ ।
ನೊಪ್ಪಾತನೆಂದು ಬೈಯಲ್ವೇಡಂ ॥
ತಪ್ಪಕ್ಕು ಶುದ್ಧಮಕ್ಕುಂ ।
ತಪ್ಪುಳ್ಳೊಡೆತಿದ್ದಿಕೊಂಬುದುತ್ತಮ ಪುರುಷರ್ ॥

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರ್ಷ 1727 ನೆಯ ವರ್ತಮಾನಕ್ಕೆ ಸಲುವ ರಕ್ತಾಕ್ಷಿನಾಮ ಸಂವತ್ಸರದ ನಿಜ ಚೈತ್ರ ಬ. 5 ಯಲ್ಲು ಮಹಾರಾಜೇಶ್ರೀ ಮಂಗಳೂರ ದೊರೆಗಳ ಸನ್ನಿಧಾನಕ್ಕೆ ಶ್ರೀ ಕಾರಕಳದ ಕಾಟೆಟ್ಟನ ಧರಣಪ್ಪ ಹೆಗ್ಗಡೆಯು ಬರೆದು ಒಪ್ಪಿಸಿದ ಗುಮ್ಮಟ ಸ್ವಾಮಿ ಚರಿತ್ರೆಗೆ ಮಂಗಳ ಮಹಾ ಶ್ರೀ : ಶ್ರೀ :

---